# ಅಧ್ಯಾತ್ಮ ವಿಚಾರ.



ಛಾಂದೋಗ್ಯೋಪನಿಷತ್ ಮೊದಲಾದ ಕೆಲವು

ವೈದಿಕ ಗ್ರಂಥಗಳ ಆಧಾರದ ಮೇಲೆ

ಮಂಗಳೂರು 1ನೇ ಗ್ರೇಡ್ ವಕೀಲ

ಹಳಿಗೇರಿ ಕೃಷ್ಣರಾಯರಿಂದ

ರಚಿಸಲ್ಪಟ್ಟು

ಶಾರದಾ ಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟಿತು.

1909.



ಕ್ರಯ ರೂ. ೨-೨-೦. ಟಪ್ಪಾಲುಹಾಸಲು ಹೊರ್ತು.

# ವಿಷಯಾನುಕ್ರಮಣಿಕೆ.




| | | ಪುಟ ಸಂಖ್ಯೆ. |
|---|---|---|
| ಉಪೋದ್ಘಾತ. | ... ... ... ... ... ... ... | I—XIV. |
| Iನೇ ಪಾಠ. | ಸೃಷ್ಟಿಯ ಕುರಿತು | 1 |
| IIನೇ ಪಾಠ. | ಪ್ರಾಣಿಗಳು ಹುಟ್ಟುವ ರೀತಿ ಯಾನೆ ಪಂಚಾಗ್ನಿ ವಿದ್ಯೆ | 14 |
| IIIನೇ ಪಾಠ. | ಪುರುಷನ ಶರೀರ ವರ್ಣನೆ ಯಾನೆ ಗಾಯತ್ರೀ ವಿದ್ಯೆ | 20 |
| IVನೇ ಪಾಠ. | ವೈಶ್ವಾನರ ವಿದ್ಯೆ ಯಾನೆ ಪ್ರಾಣಾಗ್ನಿ ಹೋತ್ರದ ಕುರಿತು | 35 |
| Vನೇ ಪಾಠ. | ಜಾಗ್ರದವಸ್ಥೆ ... ... ... ... | 43 |
| VIನೇ ಪಾಠ. | ನಿದ್ರಾವಸ್ಥೆ ... ... ... ... | 62 |
| VIIನೇ ಪಾಠ. | ಹೃದಯ ಪುಂಡರೀಕ ವಿಚಾರ ... ... | 78 |
| VIIIನೇ ಪಾಠ. | ಬ್ರಹ್ಮವಿದ್ಯೆ ... ... ... ... | 106 |
| IXನೇ ಪಾಠ. | ಮರಣದ ಕುರಿತು ... ... ... | 128 |
| Xನೇ ಪಾಠ. | ಗತಿ (ಮಾರ್ಗ)ಗಳ ಕುರಿತು ... ... | 135 |
| XIನೇ ಪಾಠ. | ಪ್ರತ್ಯಗಾತ್ಮ ವಿದ್ಯೆ ... ... ... | 156 |
| XIIನೇ ಪಾಠ. | ಪರಿಶೇಷ. ... ... ... ... | 205 |
| ಸಂಯೋಜಿತ. | ... ... ... ... ... ... | 233 |

# ಸಂಕೇತಗಳ ವಿವರಣ.

| | |
|---|---|
| आ. | ಆನಂದಗಿರಿಯಾಚಾರ್ಯ ಕೃತ ಟೀಕಾ. |
| ऋ.<br>ಋಕ್. | ಋಗ್ವೇದ. |
| कौ. ब्रा. उ. | ಕೌಷೀತಕೀಬ್ರಾಹ್ಮಣೋಪನಿಷತ್. |
| छां. उ.<br>ಛಾಂ. | ಛಾಂದೋಗ್ಯೋಪನಿಷತ್. |
| तै. आ, | ತೈತ್ತಿರೀಯ ಆರಣ್ಯಕ ಭಾಷ್ಯ (ಸಾಯಣಾಚಾರ್ಯ ಕೃತ). |
| तै. उ. | ತೈತ್ತಿರೀಯ ಉಪನಿಷತ್. |
| पं. | ಶ್ರೀ ಮದ್ವಿದ್ಯಾರಣ್ಯ ಸ್ವಾಮಿ ಕೃತ ಪಂಚದಶೀ. |
| प्र. उ.<br>ಪ್ರ. ಉ. | ಪ್ರಶ್ನೋಪನಿಷತ್. |
| बृ. उ. | ಬೃಹದಾರಣ್ಯಕೋಪನಿಷತ್. |
| म. | ಶ್ರೀ ಮನ್ಮಧ್ವಾಚಾರ್ಯ ಕೃತ ಛಾಂದೋಗ್ಯ ಭಾಷ್ಯ. |
| मां. उ. | ಮಾಂಡೂಕ್ಯೋಪನಿಷತ್. |
| रा. | ಮಂತ್ರಾಲಯದ ಶ್ರೀ ಮದ್ರಾಘವೇಂದ್ರ ತೀರ್ಥ ಕೃತ ಖಂಡಾರ್ಥ. |
| रं. | ಶ್ರೀ ರಂಗರಾಮಾನುಜಾಚಾರ್ಯ ಕೃತ ಭಾಷ್ಯ. |
| वे. | ಉತ್ತರಾದಿ ಚಿಕ್ಕಸಂಸ್ಥಾನದ ಶ್ರೀಮದ್ವೇದೇಶ ತೀರ್ಥ ಕೃತ ಖಂಡಾರ್ಥ. |
| शं. | ಶ್ರೀ ಮಚ್ಛಂಕರಾಚಾರ್ಯ ಕೃತ ಭಾಷ್ಯ. |
| ಸ. ಸ. | ಸರ್ವ ದರ್ಶನ ಸಂಗ್ರಹ (ಮಾಧವಾಚಾರ್ಯ ಕೃತ). |

# ಶುದ್ಧಿಪತ್ರ

| ಪುಟ. | ಪಂಗ್ತಿ. | ಅಶುದ್ಧ. | ಶುದ್ಧ. |
|---|---|---|---|
| VII | 25 | ವಿಷೆಯ | ವಿಷಯ |
| VIII | 15 | (ಆಧಾರವಾದದ್ದು ಯಾವದು) | (ಆಧಾರವಾದದ್ದು)ಯಾವದು |
| X | ,, | ನಿರಾಕರ | ನಿರಾಕಾರ |
| 12 | 5 | ಸಾಪನೆ | ಸ್ಥಾಪನೆ |
| 27 | 20 | ಬ್ರಹ | ಬ್ರಹ್ಮ |
| 53 | 14 | ನಿಷ್ಪೃನ್ನ | ನಿಷ್ಪನ್ನ. |
| 55 | 4 | ತ್ರ್ಯ | ತ್ರ್ಯ |
| 73 | 21 | ಪ್ರತೃತ | ಪ್ರಕೃತ |
| 74 | 16 | ಶ್ವೇತುಕೇತು | ಶ್ವೇತಕೇತು |
| 81 | 12 | ಅನ | ಅನ್ನ |
| 90 | 8 | ಮಾಲೀಕನಾದ (ದೇವದತ್ತಗೆ) | ಮಾಲೀಕ (ನಾದದೇವದತ್ತ) ಗೆ |
| ,, | 9 | | |
| ,, | 25 | ಬೀಳುವಂಥಾದ್ದಲ್ಲ ಎಂದು ಅರ್ಥ. | ಬಿಳುವಂಥಾದ್ದಲ್ಲವೊ ಹಾಗೆ ಎಂದು ಅರ್ಥ |
| 91. | 12 | ವ್ಯಧ್ಯಾಪ್ಯ | ವೃದ್ಧಾಪ್ಯ |
| 97 | 7 | ಇತ್ಯಾದಿ | ಇತ್ಯಾದಿ) |
| 98 | 27 | ಹಿರಣ್ಯಸಾ | ಹಿರಣ್ಯಸ್ಥಾ |
| 105 | 21 | ಅಕ | ಅಕ್ಷ |
| 110 | 2 | ಗುರವುಳ್ಳ | ಗುರುವುಳ್ಳ |
| 113 | 21 | ವಾಖ್ಯಾನ | ವ್ಯಾಖ್ಯಾನ |
| 131 | 18 | ಜಾತಿ | ಜ್ಞಾತಿ |
| ,, | 23 | ಇದ | ಇದು |
| 143 | 15 | ಅತಿವಾಹಿಕ | ಆತಿವಾಹಿಕ |
| 145 | 5 | ವಿದ್ಯುತ್ತಿಗ | ವಿದ್ಯುತ್ತಿಗೆ. |
| 148 | 8 | ಶು | ಶ್ರು |

| | | | |
|---|---|---|---|
| 152 | 10 | ಅದಿಯಲ್ಲಿ | ಆದಿಯಲ್ಲಿ |
| 180 | 24 | ವಿಚ್ಛಿತ್ತ | ವಿಚ್ಛಿತ್ತಿ |
| 182 | 13 | ನಾವು | ಸಾವು. |
| 184 | 19 | ದೃಷ್ಟಾತ | ದೃಷ್ಟಾಂತ |
| 228 | 19 | ಇನ್ನೊಂದುನ | ಇನ್ನೊಂದನ್ನ |
| 236 | 11 | ಮುಖಕಗಳು | ಮುಖಗಳು |
| 239 | 21 | ಅದೇಯಾಗ | ಅದೇಯಾಗಿ |

———o———

| | | | |
|---|---|---|---|
| 21 | 16 | एतवानस्य | एतावानस्य |
| 40 | 10 | सम्बाधिनी | संम्मंधिनी |
| 48 | 14 | भक्षिणाद्धि | भक्षणाद्धि |
| 53 | 2 | नेतृवा | नेतृत्वा |
| 54 | 10 | सयोगेन | संयोगेन |
| 57 | 12 | शरीकं | शरीरकं |
| 82 | 3 | त्सर्ग | त्स्वर्ग |
| 83 | 8 | उद्लब्ध्य | उपलब्ध्य |
| 86 | 20 | नुपत्ते: | नुपपत्ते: |
| 89 | 16 | विजिंघत्स: | विजिघत्स: |
| ,, | ,, | विगतांशनेच्छ: | विगताशनेच्छ: |
| 90 | 15 | सङ्कल्प | सङ्कल्प |
| 92 | 16 | विजेयो | विज्ञेयो |
| 94 | 7 | कामायन्ते | कामयन्ते |
| 96 | 9 | तम्मे | तम्ये |
| 99 | 5 | पुरुषाधन | पुरुषाराधन |
| 107 | 18 | निम्भालयस | निभालयस |
| 146 | 1 | ग्रद्स्थानां | गृहस्थानां |
| 151 | 1 | ।वतत्वात् | वितत्वात् |

| | | | |
|---|---|---|---|
| 152 | 4 | क्लृप्तानां | क्लृप्तानां |
| 163 | 15 | अशरारीरो | अशरीरो |
| 185 | 13 | षावत् | यावत् |
| 194 | 9 | इयतइात | इयतइति |
| 197 | 7 } 8 } | पुरुशब्देन | पुरुषशब्देन |
| 199 | 22 | याहिकञ्च | यादिकञ्च |
| 200 | 2 | वाक्यज्ञातं | वाक्यजातं |
| ,, | 16 | स्त्रेज्छया | स्वेच्छया |
| 211 | 8 | वीशिष्टो | विशिष्टो |
| 212 | 13 | प्राणास्य | प्राणस्य |
| 215 | 2 | प्रण: | प्राण: |
| 216 | 7 } 8 } | इती | इति |
| 230 | 3 | ष्टं | ष्ट |

# ಉಪೋದ್ಘಾತ.



೧. ಇದನ್ನು ಹಿಂಬಾಲಿಸುವ ಪಾಠಗಳಲ್ಲ್ಯುದಹರಿಸಿರುವ ಶ್ರುತಿಗಳೆಲ್ಲ ಛಾಂದೋಗ್ಯ ಮತ್ತು ಕೇನ ಉಪನಿಷತ್‌ಗಳಿಂದ ಸಂಗ್ರಹಿಸಲ್ಪಟವುಗಳು. ಶ್ರೀಮದ್ಬಾದರಾಯಣಾಚಾರ್ಯರ ವೇದಾಂತ ಸೂತ್ರಗಳಿಗಾಧಾರವಾದ ಉಪನಿಷತ್‌ಗಳಲ್ಲಿ ಮೊದಲನೇದು ಮುಖ್ಯವಾದದ್ದಾಗಿರುತ್ತದೆ. ಈ ಎರಡು ಉಪನಿಷತ್‌ಗಳೂ ಸಾಮವೇದಿಗಳಿಗೆ ಸಮ್ಮಂಧಪಟ್ಟವು. ಛಾಂದೋಗ್ಯವು ತಾಂಡಿ ಶಾಖೆಯುವರದು. ಕೇನ ತಳವಕಾರರದು. ಆ ಪೈಕಿ ಛಾಂದೋಗ್ಯವು ಬಹಳ ದೊಡ್ಡದು. ಅದು ಎಂಟು ಪ್ರಪಾಠಕಯಾನೆ ಉಪದೇಶಗಳಾಗಿ ವಿಭಾಗಿಸಲ್ಪಟ್ಟದೆ. ಮತ್ತು ಅದರಲ್ಲಿ ಅಧ್ಯಾತ್ಮ ಅಧಿದೈವ ಇವೆರಡು ವಿಷಯುಗಳೂ ಮಿಶ್ರವಾಗಿ ನಿರೂಪಿಸುವಣಾಗಿವೆ. ಅಧ್ಯಾತ್ಮವೆಂದರೆ ನಮ್ಮ ಶರೀರೇಂದ್ರಿಯಾದಿಗಳ ಕುರಿತಾದದ್ದು. ಅಧಿದೈವವೆಂದರೆ ಆದಿತ್ಯ, ಚಂದ್ರ, ಅಗ್ನಿ, ಪರ್ಜನ್ಯ ಇತ್ಯಾದಿಗಳ ವಿಷಯುವಾದದ್ದು. ಈ ಕಾರಣದಿಂದ ಒಬ್ಬ ಹೊಸ ವಿದ್ಯಾರ್ಥಿಗೆ ಅದು ಬಹಳ ಸಂಭ್ರಮವಾಗಿ ತೋರುವದರಿಂದಲೂ, ಕೊನೆಗೆ ಪರಬ್ರಹ್ಮದ ಸ್ವರೂಪ ಮತ್ತು ಸ್ವಭಾವಗಳನ್ನು ತಿಳಿಯುವದಕ್ಕೆ ಅಧ್ಯಾತ್ಮ ವಿಚಾರವೇ ಮುಖ್ಯವಾಗಿ ತೋರುವದರಿಂದ ಕೂಡಾ, ಆ ಉಪನಿಷತ್‌ನ ಪೈಕಿ ಅಧ್ಯಾತ್ಮ ವಿಚಾರಕ್ಕೆ ಸಮ್ಮಂಧಪಟ್ಟ ಅಂಶಗಳನ್ನು ಪ್ರತ್ಯೇಕಿಸಿ, ಅವುಗಳ ಪೈಕಿ ಅಗತ್ಯ ತೋರಿದಷ್ಟು ಶ್ರುತಿಗಳನ್ನು ಮಾತ್ರ ಒಂದಕ್ಕೊಂದು ಸಮ್ಮಂಧಿಸಿ ಅವುಗಳಲ್ಲಿ ಹೇಳಿರುವ ವಿಷಯುಗಳು ಸುಲಭವಾಗಿ ಮನಸ್ಸಿಗೆ ಬೋಧೆಯಾಗುವಂತೆ ವಿನ್ಯಾಸ ಮಾಡಿ, ಕೇನದ ಪೈಕಿ ಮುಖ್ಯವಾಗಿ ತೋರಿದ ೧ನೇ ೨ನೇ ಖಂಡಗಳನ್ನು ಮಾತ್ರ ಪರಿಶೇಷವೆಂಬ ಹೆಸರಿನಿಂದಲೂ, ನಮ್ಮ ಆತ್ಮನ ಸ್ವರೂಪವು ಚೆನ್ನಾಗಿ ಅನುಭವಕ್ಕೆ ಬರುವಂತೆ ಶ್ರುತಿಗಳ ಆಧಾರದ ಮೇಲೆ ಕನ್ನಡದಲ್ಲಿ ರಚಿಸಿದ ಚಿಕ್ಕ ಒಂದು ಪ್ರಬಂಧವನ್ನು ಕಡೇಲಿ ಸಂಯೋಜಿತವೆಂಬ ಹೆಸರಿನಿಂದಲೂ, ಶೇರಿಸಿ ಈ ತರಹದ ಒಂದು ಪುಸ್ತಕವನ್ನು ಸಿದ್ಧಪಡಿಸುವದು ಅಗತ್ಯವೆಂದು ಕಂಡುಬಂದದರಿಂದ ಇದನ್ನು ಸಿದ್ಧಪಡಿಸುವಣಾಗಿರುತ್ತದೆ.

೨. ಅರುಣ ಋಷಿಗಳ ಮಗ ಉದ್ದಾಲಕರಿಗೆ ಶ್ವೇತಕೇತು ಎಂಬ ಒಬ್ಬ ಮಗನಿದ್ದನು. ಇವರು ಬ್ರಾಹ್ಮಣ ಜಾತಿಯುವರಾಗಿದ್ದರು. ೧೨ ವರುಷ ಪ್ರಾಯುವಾಗುವ

ವರೆಗೂ ಶ್ವೇತಕೇತುವು ಅಧ್ಯಯನ ಮಾಡಿರಲಿಲ್ಲ. ಇವರ ಕುಲದಲ್ಲಿ ಆ ವರೆಗೆ ವೇದವನ್ನು ಕಲಿಯದೆ ಬ್ರಹ್ಮಬಂಧು (ಹೆಸರಿಗೆ ಮಾತ್ರ ಬ್ರಾಹ್ಮಣನು) ಎಂದು ಹೇಳಿಸಿ ಕೊಂಡವನು ಯಾರೂ ಇರಲಿಲ್ಲವಾದ ಕಾರಣ ಶ್ವೇತಕೇತುಗೆ ಅವನ ತಂದೆಯು ಗುರು ಕುಲವಾಸ ಮಾಡೆಂದು ಅಪ್ಪಣೆ ಕೊಟ್ಟರು. ಆ ಪ್ರಕಾರ ಶ್ವೇತಕೇತುವು ಗುರುಕುಲ ವಾಸ ಮಾಡಿ ಸಕಲ ವೇದಗಳನ್ನೂ ಕಲಿತುಕೊಂಡು ತನ್ನ ಸಮಾನ ಇನ್ನ್ಯಾರೂ ಇಲ್ಲ, ತಾನು ವೇದಗಳನ್ನು ಕಲಿತಿದ್ದೇನೆ ಎಂಬ ದುರಾಗ್ರಹ ಉಳ್ಳವನಾಗಿಯೂ, ಕಠಿನ ಸ್ವಭಾವ ಉಳ್ಳವನಾಗಿಯೂ, ೨೦ನೇ ವರುಷದಲ್ಲಿ ತಂದೆಯ ಬಳಿಗೆ ತಿರಿಗಿ ಬಂದನು. ಆಗ ಉದ್ದಾ ಲಕರು ಅವನ ಸ್ಥಿತಿಯನ್ನು ಕಂಡು "ಅಪ್ಪ ಶ್ವೇತಕೇತು! ನೀನು ಈ ರೀತಿ ಅಹಂಕಾರಿ, ಪಂಡಿತನೆಂಬ ಗ್ರಹಿಕೆಯುಳ್ಳವ, ಮತ್ತು ಸ್ತಬ್ಧನಾಗಲಿಕ್ಕೆ ಕಾರಣವೇನು? ಯಾವದನ್ನು ಕಲಿತರೆ ಕೇಳದ್ದು ಕೇಳುತ್ತದೋ, ಯೋಚಿಸ ಕೂಡದ್ದು ಯೋಚಿಸ ಕೂಡುತ್ತದೋ, ನಿಶ್ಚಯವಾಗದ್ದು ನಿಶ್ಚಯವಾಗುತ್ತದೋ, ಅಂಥಾ ಪಾಠವನ್ನು ಹೇಳಿಸಿಕೊಂಡಿದ್ದೀ ಯೋ?" ಎಂದು ಕೇಳಲಾಗಿ, ಶ್ವೇತಕೇತುವು ತಂದೆಯ ಕೂಡೆ "ಸ್ವಾಮಿ! ಅಂಥಾ ಪಾಠ ವನ್ನು ಕಲಿಸಲಿಕ್ಕೆ ಹೇಂಗೆ ಸಾಧ್ಯವಾದೀತು?" ಎಂದು ಪ್ರಶ್ನೆ ಮಾಡಿದನು. (ಛಾಂ ೬–೧) ಈ ಪುಸ್ತಕದ I ನೆ, V ನೆ ಪಾಠಗಳಲ್ಲಿ ಹೇಳಿರುವದೆಲ್ಲ ಉದ್ದಾಲಕರು ತಮ್ಮ ಮಗನಿಗೆ ಮಾಡಿದ ಉಪದೇಶಗಳಾಗಿರುತ್ತವೆ. ಅವರ ಉಪದೇಶಗಳಲ್ಲಿ ಮಿಕ್ಕ ಕೆಲವು ಭಾಗ ಗಳು VI, VIII, IX, ನೆ ಪಾಠಗಳಲ್ಲಿ ಶೇರಿಕೊಂಡಿವೆ.

೩. ಮೇಲೆ ಹೇಳಿದ ಶ್ವೇತಕೇತುವು ಒಂದಾನೊಂದು ವೇಳೆ ಪಾಂಚಾಲ (ಘರ್ವಾಲ್) ದೇಶದ ಅರಸಿನ ಸಭೆಗೆ ಹೋದನು. ಆಗ ಜೀಬಲನ ಮಗ ಪ್ರವಾಹ ಣನೆಂಬವನು ಆ ದೇಶಕ್ಕೆ ಅರಸನಾಗಿದ್ದನು. ಆ ಅರಸು ಈ ಹುಡುಗನನ್ನು ಕಂಡು "ನಿನಗೆ ಯಜಮಾನರು ಕಲಿಸಿಕೊಟ್ಟಿದ್ದಾರೆಯೋ?" ಎಂದು ಕೇಳಿದ್ದಕ್ಕೆ ಹುಡುಗನು "ಹೌದು ಸ್ವಾಮಿ" ಎಂದನು. ಆಗ ಆ ಅರಸನು ಆ ಹುಡುಗನ ಕೂಡೆ ಈ ಕೆಳಗೆ ಕಾಣಿಸಿದ ೫ ಪ್ರಶ್ನೆಗಳನ್ನು ಮಾಡಿದನು:—

೧. ಪ್ರಜೆಗಳು (ಮೃತರಾಗಿ ಈ ಶರೀರಗಳಿಂದ ಹೊರಟ ಜೀವಗಳು) ಎಲ್ಲಿಗೆ (ಯಾವ ಲೋಕಕ್ಕೆ) ಹೋಗುತ್ತಾರೆಂಬದನ್ನು ಬಲ್ಲೆಯೋ?

೨. ಅವರು ಪುನಃ ಇಲ್ಲಿಗೆ (ಈ ಭೂಲೋಕಕ್ಕೆ) ಹೇಗೆ (ಯಾವ ದಾರಿಯಿಂದ) ಬರುತ್ತಾರೆಂಬದನ್ನು ಬಲ್ಲೆಯೋ?

೩. ದೇವಯಾನ ಮತ್ತು ಪಿತೃಯಾನ ಎಂಬ ಈ ಎರಡು ಮಾರ್ಗಗಳು ಎಲ್ಲಿ ಒಡದು ಬೇರೆಬೇರೆಯಾಗುತ್ತವೆ ಎಂಬದನ್ನು ಬಲ್ಲೆಯೋ?

೪. ಪರಲೋಕವು ಏಕೆ ತುಂಬುವದಿಲ್ಲ ಎಂಬದನ್ನು ಬಲ್ಲೆಯೋ?

೫. ಐದನೇ ಸಲ ಹೋಮಿಸಿದ ಜಲವು ಪುರುಷನೆಂದು ಏಕೆ ಕರೆಯಲ್ಪಡುತ್ತದೆಂಬದನ್ನು ಬಲ್ಲೆಯೋ? ಎಂದು.

ಈ ಪೈಕಿ ಒಂದಕ್ಕಾದರೂ ಶ್ವೇತಕೇತುವು ಉತ್ತರಕೊಡಶಕ್ತನಾಗಲಿಲ್ಲ. ಪ್ರತ್ಯುತ ಪ್ರತಿ ಒಂದು ಪ್ರಶ್ನೆಗೂ "ಗೊತ್ತಿಲ್ಲ ಸ್ವಾಮಿ, ಗೊತ್ತಿಲ್ಲ ಸ್ವಾಮಿ" ಎಂದನು. ಆಗ ಆ ಅರಸನು "ಹಾಗಾದರೆ, ಕಲಿತಿದ್ಧೇನೆಂದು ಏಕೆ ಹೇಳಿದೆ? ಮೇಲೆ ಹೇಳಿದ ಸಂಗತಿಗಳನ್ನೆಲ್ಲ ತಿಳಿಯದವನು ಕಲಿತಿದ್ದೇನೆಂದು ಹೇಂಗೆ ಹೇಳ ಬಹುದು? ಎಂದು ಆ ಹುಡುಗನ ಕೂಡೆ ಕೇಳಿದ್ದಕ್ಕೆ, ಆ ಹುಡುಗನು ವ್ಯಸನದಿಂದ ತಂದೆಯ ಬಳಿಗೆ ಬಂದು "ನೀವು ನನಗೇನೂ ಕಲಿಸದೆ, ಕಲಿಸಿದ್ಧೇನೆಂದು ಹೇಳಿದಿರಿ. ಅರಸುಗಳ ಜಾತಿಯಲ್ಲಿ ಹುಟ್ಟಿದವನು ನನ್ನ ಕೂಡೆ ೫ ಪ್ರಶ್ನೆಗಳನ್ನು ಕೇಳಿದನು. ಅವುಗಳಲ್ಲಿ ಒಂದಕ್ಕಾದರೂ ಉತ್ತರ ಕೊಡಲಿಕ್ಕೆ ನಾನು ಶಕ್ತನಾಗಲಿಲ್ಲ," ಎಂದು ಹೇಳಿದನು. ಆಗ ಉದ್ದಾಲಕರು "ಆತ ಮಾಡಿದ ಯಾವ ಪ್ರಶ್ನೆಗಳನ್ನು ನೀನು ನನ್ನ ಮುಂದೆ ಹೇಳಿದೆಯೋ ಅವುಗಳ ಪರಿಹಾರಗಳಲ್ಲಿ ಒಂದನ್ನಾದರೂ ನಾನು ತಿಳದಿದ್ದರೆ ನಿನಗೆ ಏಕೆ ಹೇಳದೆ ಇರುತ್ತಿದ್ದೆ?" ಎಂದು ಮಗನ ಕೂಡೆ ಹೇಳಿ, ಆ ಅರಸಿನ ಬಳಿಗೆ ಹೋದರು. ಬಂದಂಥಾ ಆ ಋಷಿಗಳಿಗೆ ಆ ಅರಸನು ಸತ್ಕಾರ ಮಾಡಿ ಮರುದಿನ ಪ್ರಾತಃಕಾಲ ತನ್ನ ಸಭೆಗೆ ಹೋದವನು "ಹೆ ಗೌತಮರೆ! ಮನುಷ್ಯರಿಗೆ ಬೇಕಾದ ವಸ್ತುಗಳನ್ನು ಕೇಳಿಕೊಳ್ಳಿರಿ" ಎಂದನು. ಅದಕ್ಕೆ ಆ ಋಷಿಗಳು "ಅರಸೇ! ಮನುಷ್ಯರಿಗೆ ಬೇಕಾದ ದ್ರವ್ಯಗಳು ನಿನ್ನಲ್ಲಿಯೇ ಇರಲಿ. ನನ್ನ ಹುಡುಗನ ಕೂಡೆ ನೀನು ಏನು ಹೇಳಿದೆಯೋ ಅದನ್ನೇ ನನಗೆ ಹೇಳು" ಎಂದರು. ಅಗ ಆ ಅರಸನು ಪಶ್ಚಾತ್ತಾಪ ಪಟ್ಟು, "ಸ್ವಲ್ಪಕಾಲ ಇಲ್ಲಿ ವಾಸ ಮಾಡಿರಿ" ಎಂದು ಅಪ್ಪಣೆ ಕೊಟ್ಟು, ಆ ಋಷಿಗಳಿಗೆ " ನೀವು ಈ ವಿದ್ಯವು ನಿಮಗಿಂತ ಮೊದಲಿನ ಬ್ರಾಹ್ಮಣರನ್ನು ಪ್ರಾಪಿಸಲಿಲ್ಲೆಂದು ಹೇಳಿದ ಕಾರಣ ಇದು ಎಲ್ಲಾ ಲೋಕಗಳಲ್ಲಿಯೂ ಕ್ಷತ್ರಿಯ ಜಾತಿಯವರ ವಿದ್ಯವಾಗಿದೆ" ಎಂದು ಹೇಳಿದನು. (ಛಾ ೫-೩) ಈ ಪುಸ್ತಕದ IIನೇ ಪಾಠವು ಮೇಲೆ ಹೇಳಿದ ಪ್ರವಾಹಣನು ಉದ್ದಾಲಕರಿಗೆ ಮಾಡಿದ ಉಪದೇಶದ ಒಂದು ಅಂಶವಾಗಿರುತ್ತದೆ. ಅದರ ಮಿಕ್ಕ ಅಂಶವು Xನೆ ಪಾಠದಲ್ಲಿ ಶೇರಿಕೊಂಡುಂಟು.

೪. ಪ್ರಾಚೀನಶಾಲ, ಸತ್ಯಯಜ್ಞ, ಇಂದ್ರದ್ಯುಮ್ನ, ಜಿನ, ಬುಡಿಲ, ಈ ಐವರು ದೊಡ್ಡದೊಡ್ಡ ಗ್ರಹಸ್ಥರು (ಕುಟುಂಬೀಕರು) ಮಹಾ ಶ್ರೋತ್ರಿಯರಾಗಿದ್ದರು. ಇವರೆಲ್ಲ ಒಂದಾನೊಂದು ವೇಳೆ ಒಟ್ಟು ಶೇರಿ "ಕೋನ ಆತ್ಮಾ, ಕಿಂ ಬ್ರಹ್ಮ" ನಮ್ಮ ಆತ್ಮನು ಯಾರು ಬ್ರಹ್ಮ ಯಾವದು ಎಂಬದರ ಕುರಿತು ತಮ್ಮೊಳಗೆ ಚರ್ಚೆಮಾಡಿಕೊಂಡು ಕಡೆಗೆ ಅರುಣ ಋಷಿಗಳ ಮಗ ಮೇಲೆ ಹೇಳಿದ ಉದ್ದಾಲಕರು ಆತ್ಮನು "ವೈಶ್ವಾನರ"ನೆಂದು ಉಪಾಸಿಸಿಕೊಂಡಿರುತ್ತಾರೆ, ಆದ್ದರಿಂದ ಅವರ ಕೂಡೆ ಕೇಳಿ ಇತ್ಯರ್ಥ ಪಡಿಸುವದು ಒಳ್ಳೇದೆಂದು ಯೋಚಿಸಿ, ಆ ಋಷಿಗಳು ಇದ್ದಲ್ಲಿಗೆ ಹೋದರು. ಅವರು ಆ ಜನರು ಬರುವದನ್ನು ಕಂಡು, ಈ ದೊಡ್ಡದೊಡ್ಡ ಗ್ರಹಸ್ಥರು ಮತ್ತು ಮಹಾ ಶ್ರೋತ್ರಿಯರು ವೈಶ್ವಾನರನ ಕುರಿತು ನನ್ನ ಕೂಡೆ ಪ್ರಶ್ನೆ ಮಾಡುವದಕ್ಕಾಗಿ ಬರುತ್ತಾರೆ, ನಾನು ಅವರು ಕೇಳಿದ್ದಕ್ಕೆಲ್ಲ ಉತ್ತರಕೊಡಶಕ್ತನಾಗಲಾರೆನು, ಆದಕಾರಣ ಇನ್ಯಾರನ್ನಾದರೂ ಅವರಿಗೆ ತೋರಿಸಿಕೊಡುವದು ಒಳ್ಳೇದೆಂದು ಯೋಚಿಸಿ, ಬಂದ ಆ ಋಷಿಗಳ ಕೂಡೆ "ಸ್ವಾಮಿ! ಕೇಕಯನ ಮಗ ಅಶ್ವಪತಿಯು ಆತ್ಮನು ವೈಶ್ವಾನರನೆಂದು ಉಪಾಸಿಸಿಕೊಂಡಿರುತ್ತಾನೆ, ಅವನ ಬಳಿಗೆ ಹೋಗುವಾ" ಎಂದು ಹೇಳಿದ ಕಾರಣ ಅವರೆಲ್ಲರೂ ಉದ್ದಾಲಕರ ಸಮೇತ ಆ ಅರಸಿನ ಬಳಿಗೆ ಹೋದರು. ಅವನು ಬಂದ ಆ ಋಷಿಗಳೆಲ್ಲರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ಆತಿಥ್ಯಗಳನ್ನು ಮಾಡಿ ತಾನು ಒಂದು ಯಜ್ಞವನ್ನು ಮಾಡಬೇಕೆಂದು ನಿಶ್ಚಯಿಸಿದ್ದೇನೆ, ಒಬ್ಬ ಋತ್ವಿಜಗೆ ಕೊಡುವಷ್ಟು ದ್ರವ್ಯ ನಿಮ್ಮೆಲ್ಲರಿಗೂ (ಪ್ರತಿ ಒಬ್ಬರಿಗೂ) ಕೊಡುತ್ತೇನೆ, ನೀವು ಇಲ್ಲಿ ಇರ್ರಿ ಎಂದು ಹೇಳಲು, ಅವರು "ಒಬ್ಬ ಮನುಷ್ಯನು ತಾನು ಬಂದ ಉದ್ದಿಶ್ಯವನ್ನು ಹೇಳಬೇಕು. ನೀನು ವೈಶ್ವಾನರನನ್ನು ಆತ್ಮನೆಂದು ಉಪಾಸಿಸಿಕೊಂಡಿರುತ್ತಿ, ಅವನನ್ನು ನಮಗೆ ತಿಳಿಸಿಕೊಡು" ಎಂದು ಕೇಳಿಕೊಂಡರು. ಅದಕ್ಕವನು ಬೆಳಿಗ್ಗೆ ಹೇಳುತ್ತೇನೆ ಎಂದನು.

ಆ ಪ್ರಕಾರ ಆ ಋಷಿಗಳೆಲ್ಲ ಸಮಿತ್ಪಾಣಿಗಳಾಗಿ ಮರುದಿನ ಪೂರ್ವಾಹ್ಣದಲ್ಲಿ ಆ ಅರಸಿನ ಬಳಿಗೆ ಹೋದರು. ಆಗ ಅವನು ಅವರಲ್ಲಿ ಪ್ರತಿ ಒಬ್ಬರಿಗೂ ಪ್ರಶ್ನೆ ಮಾಡಲು, ಪ್ರಾಚೀನಶಾಲರು ದ್ಯುಲೋಕವು ಆತ್ಮನೆಂದು, ಸತ್ಯಯಜ್ಞರು ಆದಿತ್ಯನು ಆತ್ಮನೆಂದು, ಇಂದ್ರದ್ಯುಮ್ನರು ವಾಯುವು ಆತ್ಮನೆಂದು, ಬುಡಿಲ ಋಷಿಗಳು ಜಲವು ಆತ್ಮನೆಂದು, ಉದ್ದಾಲಕರು ಪೃಥಿವಿಯು ಆತ್ಮನೆಂದು, ಸಹ ಉತ್ತರಗಳನ್ನು ಕೊಟ್ಟರು. (ಭಾ ೫ $\left(\frac{೧೧}{೧೭}\right)$ ಈ ಪುಸ್ತಕದ IV ನೆ ಪಾಠವು ಅಶ್ವಪತಿಯು ಆ ಋಷಿಗಳಿಗೆ ಮಾಡಿದ ಉಪದೇಶವಾಗಿರುತ್ತದೆ.

೫. ಜಾನಶ್ರುತಿ ಎಂದು ಹೆಸರುಳ್ಳ ಒಬ್ಬ ಅರಸು ಬಹು ಶ್ರದ್ಧೆಯುಳ್ಳವನಾಗಿಯೂ, ಧರ್ಮಿಷ್ಠನಾಗಿಯೂ, ಉದಾರಿಯಾಗಿಯೂ ಇದ್ದನು. ಅವನ ಯಶಸ್ಸು ಆಕಾಶದಂತೆ ಸಕಲ ದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿತ್ತು. ಒಂದು ದಿನ ರಾತ್ರಿ ಕೆಲವು ಹಂಸ ಪಕ್ಷಿಗಳು ಅವನ ಮನೆಯ ಮೇಲ್ಗಡೆ ಹಾರಿ ಹೋಗುತ್ತಿರುವಾಗ ಆ ಪೈಕಿ ಹಿಂದಿನಿಂದ ಬರುತ್ತಿದ್ದ ಒಂದು ಪಕ್ಷಿಯು ಮುಂದೆ ಹೋಗುತ್ತಿದ್ದ ಇನ್ನೊಂದಕ್ಕೆ "ಹೆ ಕುರುಡ! ಕುರುಡ! ಜಾನಶ್ರುತಿಯ ತೇಜಸ್ಸು ಸ್ವರ್ಗಲೋಕ ಪರ್ಯಂತರ ವ್ಯಾಪಿಸಿಕೊಂಡುಂಟು, ನೀನು ಆ ಬೆಂಕಿಯಿಂದ ಸುಟ್ಟುಕೊಳ್ಳಬೇಡ" ಎಂದು ಎಚ್ಚರಿಸಿತು. ಆಗ ಆ ಮುಂದೆ ಹೋಗುತ್ತಿದ್ದ ಪಕ್ಷಿಯು "ಯಾವ ಮಹಾತ್ಮೆಯುಳ್ಳವನೆಂದು ಈ ಅರಸನನ್ನು, ಭಂಡೀರೈಕ್ವನ ಹಾಗೆ ಎಂಬಂತೆ, ನೀನು ಪ್ರಸಂಸೆ ಮಾಡುತ್ತಿ" ಎಂದು ಉತ್ತರ ಕೊಟ್ಟಿತು. ಆಗ "ಭಂಡೀರೈಕ್ವನು ಎಂಥವನು" ಎಂದು ಹಿಂದಿನ ಪಕ್ಷಿಯು ಪ್ರಶ್ನೆ ಮಾಡಲು, ಯಾವದನ್ನು ತಿಳದರೆ ಲೋಕದಲ್ಲಿ ಜನಗಳು ಮಾಡಿದ ಸಕಲ ಧರ್ಮಗಳ ಫಲವು ಒಬ್ಬನಲ್ಲಿ ಶೇರುತ್ತದೋ, ಅಂಥಾದ್ದನ್ನು ಯಾರು ತಿಳದಿದ್ದಾನೋ, ಅವನನ್ನು ನಾನು ಹೇಳಿದ್ದು ಎಂದು ಆ ಮುಂದೆ ಹೋಗುತ್ತಿದ್ದ ಪಕ್ಷಿಯು ಹೇಳಿತು. ಜಾನಶ್ರುತಿಯು ಈ ಮಾತುಗಳನ್ನು ಕೇಳಿ ಬೆಳಿಗ್ಗೆ ಹಾಸಿಕೆಯಿಂದೆದ್ದವನೆ ತನ್ನನ್ನು ಹೊಗಳುತ್ತಿದ್ದ ಸೂತನ ಕೂಡೆ "ಸ್ನೇಹಿತನೇ! ನಾನು ಭಂಡೀರೈಕ್ವನೆಂದು ಭಾವಿಸಿಕೊಂಡು ನೀನು ನನ್ನನ್ನು ಹೊಗಳುವಿಯೋ?" ಎಂದನು. ಆಗ ಸೂತನು "ಆ ರೈಕ್ವನೆಂಬವನ್ಯಾರೂ?"ಎಂದು ಪ್ರಶ್ನೆ ಮಾಡಲು ಹಂಸ ಹೇಳಿದ ತರಹದವರೆಂದು ಹೇಳಿದನು. ಸೂತನು ಎಲ್ಲಿಯೋ ಹೋಗಿ ತಿರಿಗಿ ಬಂದು ಅವರು ಶಿಕ್ಕಲಿಲ್ಲೆಂದು ಹೇಳಲು, ಅರಸನು "ಎಲಾ! ಬ್ರಾಹ್ಮಣರನ್ನು ಎಲ್ಲಿ ಹುಡುಕ ಬೇಕೋ ಅಲ್ಲಿಗೆ (ಅರಣ್ಯಕ್ಕೆ) ಹೋಗಿ ಹುಡುಕು" ಎಂದು ಆಜ್ಞಾಪಿಸಿದನು. ಸೂತನು ಆ ಮೇಲೆ ಅರಣ್ಯಕ್ಕೆ ಹೋಗಿ ನೋಡಲಾಗಿ ರೈಕ್ವ ಋಷಿಗಳು ಒಂದು ಭಂಡಿಯ ಬುಡದಲ್ಲಿ ಕೂತುಕೊಂಡು ಕಜ್ಜಿ ತುರಿಸಿಕೊಳ್ಳುತ್ತಾ ಇದ್ದರು. ಸೂತನು ಅವರನ್ನು ಕಂಡು ಭಂಡೀರೈಕ್ವರೆಂದರೆ ತಾವೇಯೋ? ಎಂದು ಪ್ರಶ್ನೆ ಮಾಡಲು "ಅಹುದಪ್ಪಾ" ಎಂದು ಆ ಋಷಿಗಳು ಒಪ್ಪಿಕೊಂಡರು. ಅನಂತರ ಸೂತನು ಆ ಸಂಗತಿಯನ್ನು ಜಾನಶ್ರುತಿಗೆ ವಿನ್ನೈಸಲು, ಇವನು ೬೦೦ ಗೋವುಗಳು, ಒಂದು ಸರ, ಕತ್ತೆಗಳನ್ನು ಕಟ್ಟಿದ ಒಂದು ರಥ ಸಮೇತ ಆ ಋಷಿಗಳು ಇದ್ದಲ್ಲಿಗೆ ಹೋಗಿ ಅವರಿಗೆ ನಮಸ್ಕಾರ ಪೂರ್ವಕವಾಗಿ ಈ ಗೋವುಗಳು, ಸರ, ಕತ್ತೆಗಳನ್ನು ಕಟ್ಟಿದ ರಥ ಸಹಾ ಇಲ್ಲಿ ಇವೆ. (ಇವುಗಳನ್ನು ಸ್ವೀಕರಿಸಿ) ತಾವು ಯಾವ

ದೇವತೆಯನ್ನು ಭಜಿಸುತ್ತೀರೋ ಆ ದೇವತೆಯನ್ನು ನನಗೆ ಉಪದೇಶಿಸಿರಿ ಎಂದು ಅವರನ್ನು ಕೇಳಿಕೊಂಡನು. ಅದಕ್ಕೆ ಆ ಋಷಿಗಳು "ಹೇ ಶೂದ್ರ! ಗೋವು ಮೊದಲಾದವುಗಳೆಲ್ಲಾ ನಿನಗೇ ಇರಲಿ" ಎಂದು ಗದರಿಸಿ ಬಿಟ್ಟರು. ಬಳಿಕ ಜಾನಶ್ರುತಿಯು ೧೦೦೦ ಗೋವುಗಳು, ಒಂದು ಸರ, ಮೇಲೆ ಹೇಳಿದ ರಥ ಇವುಗಳನ್ನು ತನ್ನ ಒಬ್ಬಳು ಮಗಳ ಸಮೇತ ತಕ್ಕೊಂಡು ಹೋಗಿ ಪುನಃ ಆ ಋಷಿಗಳಿಗೆ ವಂದನೆ ಮಾಡಿ "ಈ ಗೋವುಗಳು, ಆಭರಣ, ರಥ, ಇಷ್ಟು ಮಾತ್ರವಲ್ಲ, ತಮಗೆ ಭಾರ್ಯೆಗೋಸ್ಕರ ಈ ಕನ್ನಿಕೆ, ಆವಾಸಕ್ಕೆ ತಾವು ಇರುವ ಗ್ರಾಮವೆ ಇದೆ, ಇವುಗಳನ್ನು ಸ್ವೀಕರಿಸಿ ನನಗೆ ತಮ್ಮ ವಿದ್ಯನನ್ನು ಉಪದೇಶಿಸಿರಿ" ಎಂದು ಬೇಡಿಕೊಂಡನು. ಆಗ ಆ ಋಷಿಗಳು ಆ ಕನ್ನಿಕೆಯ ಮುಖವನ್ನೆತ್ತಿ ಹಿಡಕೊಂಡು "ಶೂದ್ರ! ಇಷ್ಟು ಪದಾರ್ಥಗಳನ್ನೆಲ್ಲ ತಂದಿರುತ್ತಿ, ಪರಂತು ಈ ಮುಖಕ್ಕಾಗಿ (ಇವಳ ಹೇತುವಿನಿಂದ) ನೀನು ನನ್ನ ಕೂಡೆ ಸಂಭಾಷಣೆ ಮಾಡುವಿ" ಎಂದು ಹೇಳಿ ತಾವು ಕಲಿತ ವಿದ್ಯವನ್ನು ಆ ಅರಸನಿಗೆ ಉಪದೇಶ ಮಾಡಿದರು. ಆ ವಿದ್ಯಕ್ಕೆ ಸಂವರ್ಗವಿದ್ಯಾ ಎಂದು ಹೆಸರು. ಗ್ರಾಮವು ರೈಕ್ವಪರ್ಣ ಎಂಬದು. ಅದು ಮಹಾವೃಷ ಎಂಬ ದೇಶದಲ್ಲಿರುತ್ತದೆ. (ಛಾ ४. $\left\{\frac{೧}{೨}\right\}$. ಈ ಪುಸ್ತಕದ VI ನೇ ಪಾಠದ ಆರಂಭದ ४ ಶ್ರುತಿಗಳು ಆ ಋಷಿಗಳು ಜಾನಶ್ರುತಿಗೆ ಮಾಡಿದ ಉಪದೇಶಗಳಾಗಿರುತ್ತವೆ.

೬. ಇನ್ನು ಉಳಿದ III ಮತ್ತು VII ನೆಯಿಂದ XI ನೆ ವರೆಗಿನ ಪಾಠಗಳಲ್ಲಿಯೂ, VI ನೆ ಪಾಠದಲ್ಲಿ ಕೂಡಾ ಸಂಗ್ರಹಿಸಲ್ಪಟ್ಟಿರುವ ಮಿಕ್ಕ ಎಲ್ಲಾ ಶ್ರುತಿಗಳು ಛಾಂದೋಗ್ಯದ ೩-೮ ನೆ ಪ್ರಪಾಠಕಗಳಿಂದ ಆರಿಸಿ ತೆಗೆಯಲ್ಪಟ್ಟವುಗಳು. ಆ ಪೈಕಿ VIII ನೆ ಪಾಠದ ಆರಂಭದ ४ ಶ್ರುತಿಗಳು ಮತ್ತು XI ನೆ ಪಾಠದ ಎಲ್ಲಾ ಶ್ರುತಿಗಳು ಇವುಗಳ ಹೊರತು ಮಿಕ್ಕವುಗಳೆಲ್ಲಾ ಯಾರಿಗೆ ಯಾರು ಉಪದೇಶ ಮಾಡಿದವುಗಳೆಂಬದು ತೋರುವದಿಲ್ಲ. VIII ನೆ ಪಾಠದ ಮೊದಲಿನ ४ ಶ್ರುತಿಗಳು ಶಾಂಡಿಲ್ಯರು ಹೇಳಿದವುಗಳೆಂದು ಹೇಳೋಣಾಗಿದೆ. ಆದ ಕಾರಣ ಅವುಗಳಲ್ಲಿ ಹೇಳಿದ ವಿದ್ಯಕ್ಕೆ ಶಾಂಡಿಲ್ಯವಿದ್ಯೆ ಎಂದು ಸಂಜ್ಞೆ ಬಂದಿರುತ್ತದೆ. XI ನೆ ಪಾಠದಲ್ಲಿ ಹೇಳಿರುವ ವಿದ್ಯವು ಪ್ರಜಾಪತಿಯು ಇಂದ್ರವಿರೋಚನರಿಗೆ ಉಪದೇಶಿಸಿದ್ದೆಂದು ಹೇಳೋಣಾಗಿ ಇದೆ. ಆ ವಿದ್ಯಕ್ಕೆ ಪ್ರತ್ಯಗಾತ್ಮ ವಿದ್ಯಾ ಎಂದು ಸಂಜ್ಞೆ.

೭. ಈಗ ಈ ಕಡೇಗೆ ಹೇಳಿದ ವಿದ್ಯವು ಪ್ರಜಾಪತಿಯು ತಾನೇ ಹೊಸದಾಗಿ ಕಂಡುಕೊಂಡದ್ದಾಗಿ ತೋರುವದಿಲ್ಲ. ಅದರಲ್ಲಿ ಹೇಳುವ ಆ ಆತ್ಮನ ಲಕ್ಷಣಗಳು

ಹೃದಯ ಪುಂಡರೀಕ ವಿಚಾರದಲ್ಲಿ (VIIನೆ ಪಾಠದಲ್ಲಿ) ಹೇಳಿದವುಗಳೇ ಆಗಿರುತ್ತವೆ. ಮತ್ತು ಈ ಎರಡು ವಿದ್ಯೆಗಳಲ್ಲಿಯೂ ಸುಷುಪ್ತಿಯನ್ನು ಪಡದವನ ಪ್ರಸ್ತಾಪ ಉಂಟು. ಹೃದಯ ಪುಂಡರೀಕ ವಿಚಾರದಲ್ಲಿ ಪ್ರತಿದಿವಸವೂ ಅವನು ಬ್ರಹ್ಮದಲ್ಲಿ ಹೊಕ್ಕು ಹೊರಡುತ್ತಾನಾದರೂ ಅವನಿಗೆ ಆ ಲೋಕವು (ಹೇಂಗೆ ಉಂಟೆಂಬದು) ಗೊತ್ತಾಗುವದಿಲ್ಲ ವೆಂತಲೂ, ಪ್ರತ್ಯಗಾತ್ಮವಿದ್ಯದಲ್ಲಿ ಸಂಪ್ರಸನ್ನ (ಸ್ವಚ್ಛ ಅಥವಾ ನಿಷ್ಕಲ್ಮಷನಾದವ)ನು ಈ ಶರೀರದಿಂದ ಹೊರಟು ಪರಂಜ್ಯೋತಿಯನ್ನು ಪ್ರಾಪಿಸಿದರೆ ತನ್ನ ನಿಜವಾದ ರೂಪ ನಿಷ್ಪತ್ತಿಯನ್ನು ಪಡೆಯುತ್ತಾನೆಂದು ಸಹ ಹೇಳೋಣಾಗಿ ಇದೆ. ಅಂಥಾ ಪ್ರಸನ್ನತೆಯು ಗಾಢನಿದ್ರಾವಸ್ಥೆಯಲ್ಲಿಯೂ ಉಂಟಾಗುತ್ತದೆ. ಆದುದರಿಂದ ಈ ಪ್ರತ್ಯಗಾತ್ಮವಿದ್ಯಾ ಮತ್ತು ಹೃದಯ ಪುಂಡರೀಕ ವಿಚಾರ ಇವೆರಡೂ ಮೇಲೆ ೫ನೇ ಪ್ರಕರಣದಲ್ಲಿ ಹೇಳಿದ ಸಂವರ್ಗ ವಿದ್ಯವನ್ನು ಪೂರ್ವಭಾವನೆ ಮಾಡಿಕೊಂಡಿರುವ ಹಾಗೆ ತೋರುತ್ತದೆ. ಈ ಕಾರಣಗಳಿಂದ ಹೃದಯ ಪುಂಡರೀಕ ವಿಚಾರ ಮತ್ತು ಪ್ರತ್ಯಗಾತ್ಮವಿದ್ಯಾ ಇವೆರಡೂ ಬರೇ ವಿವರಣ ರೂಪವಾದವುಗಳೆಂದು ಹೇಳ ಬಹುದಾಗಿ ನಾನು ಅಭಿಪ್ರಾಯ ಪಡುತ್ತೇನೆ.

೮. ಈಗ ಮೇಲೆ ಹೇಳಿದ ಶಾಂಡಿಲ್ಯ ಮತ್ತು ಸಂವರ್ಗ ಈ ಎರಡು ವಿದ್ಯೆಗಳ ಸ್ವಭಾವಗಳನ್ನು ನೋಡಿದರೆ ಸಂವರ್ಗ ವಿದ್ಯವೇ ಮೊದಲಿನದಾಗಿ ತೋರುತ್ತದೆ. ಯಾಕಂದರೆ ಶಾಂಡಿಲ್ಯರ ವಿದ್ಯದಲ್ಲಿದ್ದಷ್ಟು ವಿವರಗಳು ಸಂವರ್ಗ ವಿದ್ಯದಲ್ಲಿಲ್ಲದೆ ಇರುವದು ಮಾತ್ರವಲ್ಲದೆ ಇದರ ಭಾಷೆ ಕೂಡಾ ಬಹಳ ಹಿಂದಿನ ಕಾಲದ್ದಾಗಿ ತೋರುತ್ತದೆ. ಈ ಸಂಗತಿ ಹೇಂಗೆ ಇದ್ದರೂ, ಆ ಎರಡು ವಿದ್ಯೆಗಳೂ IV ನೇ ಪಾಠದಲ್ಲಿ ಹೇಳಿದ ವೈಶ್ವಾನರ ವಿದ್ಯದ ನಂತರದವುಗಳೇ ಆಗಿರಬೇಕು. ಯಾಕಂದರೆ ಆ ಪಾಠದಲ್ಲಿ ಪ್ರಸ್ತಾಪಿಸಿದ ಮಹಾಶ್ರೋತ್ರಿಯರಿಗೆ ಆ ವರೆಗೆ ಆತ್ಮನ ಜ್ಞಾನವು ಇರಲಿಲ್ಲವೆಂದು ಕಂಡು ಬರುತ್ತದೆ. ಅಲ್ಲವಾದರೆ ಅವರು ತಾವು ನಿತ್ಯಲೂ ಉಪಾಸಿಸಿಕೊಂಡಿದ್ದ ವೈಶ್ವಾನರನು (ಅಗ್ನಿಯು) ಆತ್ಮನೋ ಬ್ರಹ್ಮನೋ ಎಂದರೆ ಆತ್ಮನೇ ಬ್ರಹ್ಮವೋ ಅಥವಾ ಅವ ಬೇರೆ ಬ್ರಹ್ಮ ಬೇರೆಯೋ ಎಂದು ಒಬ್ಬ ಕ್ಷತ್ರಿಯನ ಬಳಿಗೆ ಹೋಗಿ ವಿಚಾರಿಸಬೇಕಾದ ಅಗತ್ಯವಿರಲಿಲ್ಲ. ಆ ಋಷಿಗಳಲ್ಲಿ ತಮ್ಮ ಮಗನಾದ ಶ್ವೇತಕೇತುವಿಗೆ ಮೇಲೆ ಹೇಳಿದಂತೆ ಈ ಪುಸ್ತಕದ I, V, VI, VIII, IX ನೆ ಪಾಠಗಳಲ್ಲಿ ಹೇಳಿದ ಸೃಷ್ಟಿ ಮೊದಲಾದ ವಿಷಯಗಳ ತತ್ವವನ್ನು ಉಪದೇಶಿಸಿದ ಉದ್ದಾಲಕರು ಒಬ್ಬರಾಗಿರುತ್ತಾರೆ. ಇವರೇ ಮೇಲೆ ೩ ನೆ ಪ್ರಕರಣದಲ್ಲಿ ಹೇಳಿದ ಪ್ರವಾಹಣನೆಂಬ ಅರಸಿನಿಂದ ಪಂಚಾಗ್ನಿ ವಿದ್ಯವನ್ನು ಕಲಿ

ತಂಥವರಾಗಿರುತ್ತಾರೆ. ಆ ವಿದ್ಯವು ಆ ವರೆಗೆ ಬ್ರಾಹ್ಮಣರಿಗೆ ಗೊತ್ತಿರಲಿಲ್ಲೆಂದು ಸ್ಪಷ್ಟವಾಗಿ ಹೇಳೋಣಾಗಿ ಇದೆ. ಅದಕ್ಕೂ ವೈಶ್ವಾನರ ವಿದ್ಯಕ್ಕೂ ತಮ್ಮೊಳಗೆ ಕಾರ್ಯ ಕಾರಣ ಸಂಮಂಧ ಇರುವ ಹಾಂಗೆ ಕಂಡುಬರುವದಿಲ್ಲ. ಆದಕಾರಣ ಉದ್ದಾಲಕರು ಈ ಪಂಚಾಗ್ನಿವಿದ್ಯವನ್ನು ಹೇಳಿಸಿಕೊಳ್ಳುವ ಮೊದಲೇ ಅವರು ತಮ್ಮ ಮಗನಿಗೆ ಮೇಲೆ ಹೇಳಿದ ತತ್ವಗಳನ್ನು ಉಪದೇಶಿಸಲಿಕ್ಕೇನೂ ಅಭ್ಯಂತರವಿರಲಿಲ್ಲ. ಹಾಂಗಾದ ಪಕ್ಷದಲ್ಲಿ ಆ ಋಷಿಗಳು ಅಶ್ವಪತಿಯಿಂದ ಕಲಿತ ಒಂದು ವೈಶ್ವಾನರವಿದ್ಯವು ಅವರು ತರುವಾಯ ಶ್ವೇತಕೇತುವಿಗೆ ಉಪದೇಶಿಸಿದ ತತ್ವಗಳನ್ನೆಲ್ಲ ಕಲಿಸಲಿಕ್ಕೆ ಸಾಕಾದ್ದಾಗಿ ಇತ್ತೊ? ಇರಲಿಲ್ಲವಾದರೆ ಅವುಗಳನ್ನೆಲ್ಲ ಅವರು ಎಲ್ಲಿಂದ ಕಲಿತರು? ಎಂಬದನ್ನು ನಾವು ವಿಚಾರ ಮಾಡಬೇಕಾಗುತ್ತದೆ. ಈ ಸಂದರ್ಭದಲ್ಲಿ ಮೊದಲು ಹೇಳಿದ ಪ್ರಾಚೀನ ಶಾಲ ಮೊದಲಾದಂಥಾ ಬ್ರಾಹ್ಮಣರ ಸಮೂಹಗಳಲ್ಲಿ ಮಾತ್ರವಲ್ಲ, ಮಿಥಿಲಾ (ತಿರ್ಹುತ್) ದೇಶದ ಅರಸನಾದ ಜನಕರಾಯು, ಕಾಶೀ ಅರಸು ಅಜಾತಶತ್ರು ಇವರ ಸಭೆಗಳಲ್ಲಿ ಕೂಡಾ ಆ ಕಾಲದಲ್ಲಿ ಬ್ರಹ್ಮದ ಕುರಿತು ಬಹಳ ವಿಚಾರಗಳು ನಡೆಯುತ್ತಿದ್ದವೆಂದು ತೋರುತ್ತದೆ. ಪ್ರಸ್ತುತ ಉದ್ದಾಲಕರು ಆ ಪೈಕಿ ಜನಕರಾಯನ ಸಭೆಗೆ ಹೋಗಿ ಅಲ್ಲಿ ಆಗ ಆ ವಿದ್ಯದಲ್ಲಿ ಪರೀಕ್ಷೆ ಕೊಡುತ್ತಿದ್ದ ಯಾಜ್ಞವಲ್ಕ್ಯರ ಕೂಡೆ ಇಹ ಪರ ಲೋಕಗಳಿಗೂ ಸಕಲ ಪ್ರಾಣಿಗಳಿಗೂ ಸೂತ್ರ (ಆಧಾರವಾದದ್ದು ಯಾವದು) ಮತ್ತು ಅವುಗಳ ಅಂತರ್ಯಾಮಿ ಯಾರು, ಎಂದು ಪ್ರಶ್ನೆ ಮಾಡಿದ್ದರೆಂತಲೂ ಮತ್ತು ಆ ಸೂತ್ರ ಮತ್ತು ಅಂತರ್ಯಾಮಿಯ ಕುರಿತು ಮದ್ರ ದೇಶದಲ್ಲಿ ಒಬ್ಬಳು ಸ್ತ್ರೀಯ ಮೈಮೇಲೆ ಆವಿಷ್ಟನಾಗಿದ್ದ ಕಬಂಧನೆಂಬ ಗಂಧರ್ವನಿಂದ ಅವರು ಮತ್ತು ಬೇರೆ ಕೆಲವು ಬ್ರಾಹ್ಮಣರು ಕೂಡಾ ಉಪದೇಶಿಸಲ್ಪಟ್ಟಿದ್ದರೆಂತ ಸಹ ಬೃಹದಾರಣ್ಯಕೋಪನಿಷತ್‌ನಲ್ಲಿ (೩-೭) ಹೇಳೋಣಾಗಿದೆ. ಮೇಲೆ ಹೇಳಿದ ಬುಡಿಲ ಋಷಿಗಳು ಜನಕರಾಯನ ಕೂಡೆ ಗಾಯತ್ರೀ ವಿಷಯವಾಗಿ ಚರ್ಚಿಸಿದವರಾಗಿರುತ್ತಾರೆ. (ಬ್ರ.ಆ.೫-೧೪.)ಉದ್ದಾಲಕರು ಶ್ವೇತಕೇತುವಿಗೆ ಕಲಿಸಿದವುಗಳ ಪೈಕಿ ಅನೇಕ ವಿಷಯಗಳು ಮಾತ್ರವಲ್ಲ, ಗಾಯತ್ರೀ ವಿದ್ಯಾ, ಹೃದಯ ಪುಂಡರೀಕ ವಿಚಾರ, ಪ್ರತ್ಯಗಾತ್ಮ ವಿದ್ಯಾ ಈ ಎಲ್ಲಾ ವಿದ್ಯಗಳ ಅಂಕುರಗಳು ಆ ಉಪನಿಷತ್ತಿನಲ್ಲಿ ಕಂಡುಬರುತ್ತವೆ. ಅವುಗಳನ್ನೆಲ್ಲ ಈ ಉಪೋದ್ಘಾತದಲ್ಲಿ ವಿವರಿಸಿ ಪೂರೈಸದು. ಅಗತ್ಯ ಉಳ್ಳವರು ಈ ಪುಸ್ತಕವನ್ನು ಆ ಗ್ರಂಥಕ್ಕೆ ಸರಿನೋಡಿ ದೃಢಪಡಿಸಿಕೊಳ್ಳ ಬಹುದು.

ಈಗ ಮೇಲೆ ನಮೂದಿಸಿದ ಜನರ ಹೆಸರುಗಳು ಮತ್ತು ದೇಶದ ಹೆಸರುಗಳು ಸಹ ಪ್ರಸ್ತುತ ವಿದ್ಯೆಗಳು ಎಲ್ಲಿ, ಹೇಗೆ, ಮತ್ತು ಯಾವ ಕಾಲದಲ್ಲಿ ಉಂಟಾದವೆಂದು ನಿಶ್ಚಯಿಸುವದಕ್ಕೆ ಬಹಳ ಅನುಕೂಲವಾದ ಸಾಕ್ಷಿಗಳಾಗಿರುತ್ತವೆ. ಆ ದೇಶಗಳ ಪೈಕಿ ಮಹಾವೃಷ ಮತ್ತು ಮದ್ರ ಇವೆರಡರ ವಿನಹ, ಮಿಕ್ಕವುಗಳೆಲ್ಲಾ ಆರ್ಯಾವರ್ತದಲ್ಲಿರುವಂಥವುಗಳು. ಮಹಾವೃಷವು ಎಲ್ಲಿ ಇರುವದೆಂಬದು ಗೊತ್ತಾಗಲಿಲ್ಲ. ಮದ್ರವು ಆರ್ಯಾವರ್ತದ ವಾಯವ್ಯ ಮೂಲೆಯಲ್ಲಿ ಇರುವ ಬಾಲ್ಹೀಕ ದೇಶದ ಮುಖ್ಯ ಪಟ್ಟಣವಾಗಿರುತ್ತದೆ. ಇದು ಹೊರತು ಛಾಂದೋಗ್ಯ ೩–೧೭–೬ರಲ್ಲಿ ದೇವಕೀ ಮಗನಾದ * ಶ್ರೀಕೃಷ್ಣನ ಹೆಸರು ಉಂಟು. ಈ ಕೃಷ್ಣನು ಭಾರತ ಯುದ್ಧ ಮುಗದ, ಶಾಲಿವಾಹನ ಶಕಕ್ಕೆ ಮೊದಲು 1272ನೇ ವರುಷ ಯಾನೆ B. C. 1194ನೇ ಅಕ್ಟೋಬರ 31ರ, ನಂತರವೂ ಕೆಲವು ಕಾಲ, ಸುಮಾರು ೧೬ ವರುಷಗಳ ತನಕ, ಇದ್ದಂಥವನಾಗಿರುತ್ತಾನೆ. (ವೆ. ಗೋಪಾಲ ಐಯರ್ ೧೦೪.) ಮೇಲೆ ಪ್ರಸ್ತಾಪಿಸಿದ ಅಶ್ವಪತಿಯು ಸೂರ್ಯ ವಂಶದವನಾದ ಭರತನ ಮಾತಾಮಹನು. ಈ ಸಂಗತಿಗಳು ಪ್ರಸಿದ್ಧವಾದವುಗಳಾಗಿರುತ್ತವೆ. ಈಗ ಆ ಅಶ್ವಪತಿಯ ಕಾಲದಿಂದ ಕೃಷ್ಣನು ಈ ಭೂಲೋಕವನ್ನು ಬಿಟ್ಟು ಹೋಗುವ ವರೆಗೆ ಎಷ್ಟು ಕಾಲ ಸಂದಿರುತ್ತದೆಂಬದನ್ನು ಹೇಳಲಿಕ್ಕೆ ಆಧಾರ ಬಹುದಾದ ಆಧಾರಗಳು ನನಗೆ ದೊರಕಲಿಲ್ಲ. ಹೆಚ್ಚು ಕಾಲ ಸಂದಿರ ಬೇಕೆಂದು ತೋರುತ್ತದೆ.

ಈಗ ಈ ಛಾಂದೋಗ್ಯ ಉಪನಿಷತ್ ಎಲ್ಲಿ ಮತ್ತು ಹೇಗೆ ಉಂಟಾಯಿತೆಂದು ಓದುವವರು ತಾವೇ ನಿಶ್ಚಯಿಸಿ ಕೊಳ್ಳಬಹುದು. ಇದರಲ್ಲಿ ಋಗ್ವೇದದ ಒಂದು ಋಕ್ ಕೂಡಾ, ಸ್ವಲ್ಪ ತಿದ್ದುಪಡಿಯಾಗಿ, ಸೇರಿಕೊಂಡುಂಟು. (III ೫). ಆದ್ದರಿಂದ ಇದು ಒಂದು ಕಾಲದಲ್ಲಿ ಆದದ್ದಲ್ಲ, ಮತ್ತು ಒಬ್ಬನಿಂದ ರಚಿಸಲ್ಪಟ್ಟದ್ದೂ ಅಲ್ಲ, ಇದರ ಸ್ವಭಾವದಿಂದಲೇ ಇದರಲ್ಲಿ ಅನೇಕರ ಹೇಳಿಕೆಗಳು ಸೇರಿಕೊಂಡಿರುವದಲ್ಲದೆ, ಇದು ಈಗ ಇರುವ ಸ್ಥಿತಿಗೆ ಬಂದು ಸುಮಾರು ೩೦೦೦ ವರುಷಗಳಕ್ಕಿಂತ ಹೆಚ್ಚು ಕಾಲವಾಯಿತೆಂದು ಹೇಳಬಹುದು. ಕೇನವು ಛಾಂದೋಗ್ಯದ ನಂತರ ಉಂಟಾದದ್ದೆಂದು ವಿದ್ವಾಂಸರು ಹೇಳುತ್ತಾರೆ. XIIನೇ ಪಾಠದ ವ್ಯಾಖ್ಯಾನ ಸಂಗ್ರಹದಲ್ಲಿ ಹೇಳಿರುವ

* ಮಾಧ್ವರು ಆವನು ವಿಷ್ಣ್ವವತಾರ ಭಿನ್ನನು, ಎಂದರೆ ಅರ್ಜುನನ ಸ್ನೇಹಿತ ಮತ್ತು ಸಾರಥಿಯಾಗಿದ್ದ ಕೃಷ್ಣನಲ್ಲ, ಇನ್ಯಾರೋ ಒಬ್ಬನು ಎಂದು ಹೇಳುತ್ತಾರೆ. ಆದರೆ ಶ್ರೀ ಕೃಷ್ಣಗೆ ಅಪ್ರಸಿದ್ಧನಾದ ಒಬ್ಬ ಏಕನಾಮಕನಿದ್ದನೆಂಬದು ಸ್ಥಾಪಿಸಲ್ಪಡಬೇಕಾದ ವಿಷಯವಾಗಿದೆ.

ಕಾರಣಗಳಿಂದ ಈ ಸಂಗತಿ ಒಪ್ಪತಕ್ಕದ್ದಾಗಿ ತೋರುತ್ತದೆ. ನಮ್ಮ ದೇಶದ ವಿದ್ವಾಂಸರು ಪ್ರಾಚೀನ ಗ್ರಂಥಗಳನ್ನೆಲ್ಲ ಪರಿಶೋಧಿಸಿ ಎಲ್ಲಾ ಉಪನಿಷತ್‌ಗಳ, ಮತ್ತು ಅವುಗಳಲ್ಲಿ ಕಂಡುಬರುವ ಮೇಲೆ ಹೇಳಿದ ವಿದ್ಯೆಗಳ, ವ ಇನ್ನೂ ಇರಬಹುದಾದ ಇತರ ಎಲ್ಲಾ ವಿದ್ಯೆಗಳ, ಪೌರ್ವಾಪರ್ಯಗಳನ್ನು ನಿಶ್ಚಯಿಸಿದ ಪಕ್ಷದಲ್ಲಿ, ನಮ್ಮ ವೇದಾಂತ ಶಾಸ್ತ್ರದ ಚರಿತ್ರೆಯು ಪ್ರಕಾಶಕ್ಕೆ ಬಂದು, ಅದರ ಮುಖ್ಯವಾದ ಉದ್ದೇಶವು ಫಲಾಣೆದೆಂದು ಕಂಡುಹಿಡಿಯಲಿಕ್ಕೆ ತುಂಬ ಸಹಾಯವಾದೀತೆಂತಲೂ, ನಮ್ಮ ಪೂರ್ವಜರು ಆ ಚರಿತ್ರೆಯನ್ನು ಪ್ರತ್ಯೇಕವಾಗಿ ಬರೆದಿಡದೆ ಇದ್ದದರಿಂದಲೇ ಅನೇಕರು ತಮ್ಮ ತಮ್ಮ ಪ್ರಿಯ ಸಿದ್ಧಾಂತಗಳನ್ನು ಬಲಪಡಿಸುವಗೋಸ್ಕರ ಮೇಲೆ ಹೇಳಿದ ಋಷಿಗಳು ಯೋಚಿಸದೆ ಇದ್ದಂಥಾ ತಮ್ಮ ತಮ್ಮ ಸ್ವಂತ ಅಭಿಪ್ರಾಯಗಳನ್ನು ಅವರ ವಾಕ್ಯಗಳಲ್ಲಿ ಬಲತ್ಕಾರವಾಗಿ ಸೇರಿಸಿ ಅನೇಕ ವಿಧದ ಅರ್ಥಗಳನ್ನು ಕಲ್ಪಿಸಲಿಕ್ಕೆ ಆಸ್ಪದವಾಗಿರುತ್ತದೆಂತ ಸಹಾ ನನ್ನ ಬುದ್ಧಿಗೆ ತೋರುತ್ತದೆ.

೯. ಈಗ ನಾನು ತಿಳಿದ ಮಟ್ಟಿಗೆ ಪ್ರಸ್ತುತ ಉಪನಿಷತ್‌ಗಳಿಗೆ ಕೆಳಗೆ ಕಾಣಿಸಿದ ಆಚಾರ್ಯರುಗಳು ವ್ಯಾಖ್ಯಾನಗಳನ್ನು ಮಾಡಿರುತ್ತಾರೆ. ಆ ಪೈಕಿ:—

(೧) ಶ್ರೀಮತ್ ಶಂಕರಾಚಾರ್ಯರು—ಪರಬ್ರಹ್ಮನು ಜ್ಞಾನಮಯ, ಆನಂದಮಯ, ಚೈತನ್ಯಸ್ವರೂಪ, ನಿರ್ಗುಣ, ನಿರಾಕರ, ಪುರುಷ ವಿಶೇಷನಲ್ಲ, ಜೀವಾಭಿನ್ನ, ಆತ ಒಬ್ಬನೇ ಸತ್ಯ, ಮಿಕ್ಕದ್ದೆಲ್ಲ ಮಿಥ್ಯ, ಎಂದು ಹೇಳುವವರು. ಇವರ ಮತಕ್ಕೆ ಅದ್ವೈತವೆಂದು ಹೇಳುತ್ತಾರೆ.

(೨) ಶ್ರೀಮದ್ ರಾಮಾನುಜಾಚಾರ್ಯರು—ಅವನು ಪುರುಷನು, ಸುಗುಣ, ಜಗತ್ಕರ್ತ, ಮುಕ್ತಿದಾಯಕ; ಜೀವನೂ ಸಗುಣನೆ, ಮುಕ್ತನಾದರೆ ಈಶ್ವರನ ಹಾಗೆಯೇ ಆಗುತ್ತಾನೆ, ಪರಂತು ಸೃಷ್ಟಿಸುವ ಶಕ್ತಿ ಮಾತ್ರ ಇವಗೆ ಬರುವದಿಲ್ಲ ಎಂದು ಹೇಳುವವರು. ಇವರ ಮತಕ್ಕೆ ವಿಶಿಷ್ಟಾದ್ವೈತವೆಂದು ಹೆಸರು.

(೩) ಶ್ರೀಮನ್ ಮಧ್ವಾಚಾರ್ಯರು—ಬ್ರಹ್ಮನು ಜೀವನಿಂದ ಭಿನ್ನನಾದವನು, ಸಗುಣ, ಸರ್ವಜ್ಞ, ಮುಕ್ತಿದಾಯಕ, ಪುರುಷ ವಿಶೇಷ, ಜಗತ್ಕರ್ತ, ಜಗನ್ನಿಯಂತಾ, ಸರ್ವದಾಸೇವ್ಯ, ಜೀವಗೆ ಅವನ ಯೋಗ್ಯತೆ ಯಾವಾಗಲೂ ಇಲ್ಲ, ಜೀವನು ನಿತ್ಯ, ಇವನು ಮುಕ್ತನಾದನಂತರಲೂ ಅವನನ್ನು ಸೇವಿಸಿಕೊಂಡಿರುತ್ತಾನೆ ಎಂದು ಹೇಳುವವರು. ಇವರ ಮತಕ್ಕೆ ದ್ವೈತವೆಂದು ಹೆಸರು*.

---

* ಮಹಾದೇವ ಮೋರೇಶ್ವರ ಕುಂಠೆ ವೇದಾಂತಸೂತ್ರ. ಪು. ೧.

ಆದ್ದರಿಂದ ಈ ಪುಸ್ತಕದಲ್ಲಿ ಸಂಗ್ರಹಿಸಿರುವ ಈ ತ್ರಿಮತಸ್ಥರ ವ್ಯಾಖ್ಯಾನ ಸಾರಾಂಶಗಳಲ್ಲಿ ಪರಸ್ಪರ ವ್ಯತ್ಯಾಸಗಳಿರುತ್ತವೆಂದು ಪ್ರತ್ಯೇಕವಾಗಿ ನಾನು ಹೇಳ ಬೇಕಾದದ್ದಿಲ್ಲ. ಅವುಗಳು ಇದನ್ನು ಓದುತ್ತಾ ವಾಚಕರಿಗೆ ಸ್ವತಏವ ಕಂಡುಬರುವವು.

ಪರಂತು ಬ್ರಹ್ಮವು ಎಲ್ಲರಿಗೂ ಒಂದೇಯಾಗಿಯೂ, ಪ್ರಸ್ತುತ ವ್ಯಾಖ್ಯಾನಗಳಿಗೆ ಮೂಲಕವಾದ ಉಪನಿಷತ್‌ಗಳು ಬೇರೆಯವುಗಳಲ್ಲದೇ ಇರುವ ಕಾರಣ, ಆ ಎಲ್ಲಾ ವ್ಯಾಖ್ಯಾನಗಳು ಮೂಲಗಳ ತಾತ್ಪರ್ಯಕ್ಕೆ ಸರಿಯಾಗಿ ಇರುತ್ತವೆಂದು ಹೇಳಲಿಕ್ಕಾಗುವದಿಲ್ಲ. ಲೋಕಹಿತಾರ್ಥವಾಗಿ ಅವುಗಳನ್ನು ಸಂಗ್ರಹಿಸಿದ ನಮ್ಮ ಪೂರ್ವಜರು ತಮ್ಮ ನಂತರದವರು ಅವುಗಳಿಗೆ ಪರಸ್ಪರವಿರುದ್ಧವಾದ ಅನೇಕಾರ್ಥಗಳನ್ನು ಮಾಡಿ ತಮ್ಮೊಳಗೆ ಕಲಹಗಳನ್ನು ಮಾಡಿಕೊಳ್ಳಲಿ ಎಂಬ ತಾತ್ಪರ್ಯದಿಂದಾಗಲೀ, ಅಜಾಗ್ರತೆಯಿಂದಾಗಲೀ, ಅವುಗಳನ್ನು ಸಂಗ್ರಹಿಸಿರುತ್ತಾರೆಂದು ತಿಳಿಯಕೂಡದು. ಆದ್ದರಿಂದ ನೀತಿಯಗೋಸ್ಕರವಾಗಿಯೂ, ನಮ್ಮ ದೇಶದ ಜನಗಳ ಒಳ್ಳಿತಿನಗೋಸ್ಕರವಾಗಿಯೂ, ಪ್ರಸ್ತುತ ವ್ಯಾಖ್ಯಾನಗಳ ಪೈಕಿ ನಮ್ಮ ಉಪನಿಷತ್‌ಗಳ ಅಭಿಪ್ರಾಯಕ್ಕೆ ಸರಿಯಾದದ್ದ್ಯಾವದೆಂಬದನ್ನು ನಿಶ್ಚಯಿಸುವದು ಅತ್ಯವಶ್ಯಕವಾಗಿರುತ್ತದೆ. ಈ ಕೆಲಸವು ಮೇಲೆ ಹೇಳಿದ ಆಚಾರ್ಯರ ಪ್ರತಿನಿಧಿಗಳಾದ ಶ್ರಿಂಗೇರಿ, ಮಹಿಸೂರು, ಉಡಿಪಿ ಮೊದಲಾದಸ್ಥಳಗಳಲ್ಲಿರುವ ಮಠಾಧಿಪತಿಗಳು ಒಟ್ಟುಸೇರಿ ಮಾಡಬೇಕಾದದ್ದು. ಪರಂತು ಅವರ ಭಾವಗಳು ಅದಕ್ಕೆ ಅನುಕೂಲವಾಗಿರುವ ಹಾಗೆ ಕಂಡುಬರುವದಿಲ್ಲಾದ್ದರಿಂದ, ಪ್ರಕೃತಕ್ಕೆ ನಾವೇ ಆ ಕೆಲಸವನ್ನು, ಅವರ ತಿದ್ದುಪಡಿಗೆ ಒಳಪಟ್ಟು, ನಮ್ಮ ಯಾವಚ್ಛಕ್ತಿ ಜರಗಿಸಬೇಕಾಗಿರುತ್ತದೆ. ಆದ್ದರಿಂದ ಈ ವಿಷಯದಲ್ಲಿ ನನಗೆ ಕಂಡುಬಂದ ಅಭಿಪ್ರಾಯವನ್ನು ಓದುವವರ ತಿಳವಳಿಕೆಗೋಸ್ಕರ ಸಂಕ್ಷೇಪವಾಗಿ ಈ ಕೆಳಗೆ ಬರೆದು ಸೂಚಿಸುತ್ತೇನೆ.

೧೦. ಸತ್‌ಶಬ್ದವಾಚ್ಯವಾದವಸ್ತುಜ್ಞಾನವೇಆಗಲೀ, ಪರಮಾತ್ಮನೆಯಾಗಲೀ, ಬ್ರಹ್ಮವೇ ಆಗಲೀ, ಶಂಕರಾಚಾರ್ಯರು ಹೇಳುವ ಪ್ರಕಾರ ಸಕಲದರಲ್ಲಿಯೂ ಅಡಗಿರುತ್ತದೆಂಬದನ್ನು ಮಿಕ್ಕ ಎರಡು ಮತದವರು ನಿರಾಕರಿಸುವದಿಲ್ಲ. ಈಗ ಛಾಂದೋಗ್ಯದ ಮುಖ್ಯ ಸಿದ್ಧಾಂತವು, ಈ ಪುಸ್ತಕದ I, IV, XI ನೆ ಪಾಠಗಳಲ್ಲಿ ವಿವರಿಸಿರುವ ಪ್ರಕಾರ, ಪ್ರತಿ ಶರೀರದಲ್ಲಿಯೂ ಜೀವರೂಪದಿಂದ ಅಡಗಿಕೊಂಡು, ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಅವಸ್ಥಾತ್ರಯಕ್ಕೆ ಯಾರು ಒಳಪಟ್ಟಿರುತ್ತಾನೋ, ಅವನೇ ಅಮೃತ (ಸಾವಿಲ್ಲದ), ಮತ್ತು ಭಯವಿಲ್ಲದ (ಎರಡನೇದಿಲ್ಲದ) ಬ್ರಹ್ಮವೆಂದು ಆಗಿರುತ್ತದೆ. ಈ

ಸಿದ್ಧಾಂತಕ್ಕನುಸರಿಸಿ ಶಂಕರಾಚಾರ್ಯರು ವ್ಯಾಖ್ಯಾನ ಮಾಡಿರುವ ಹಾಗೆ ಬೇರೆ ಯಾವ ಮತದವರೂ ವ್ಯಾಖ್ಯಾನ ಮಾಡಿರುವದಿಲ್ಲೆಂದು ಹೇಳಲಿಕ್ಕೇನೂ ಪ್ರಯಾಸವಿಲ್ಲ; ಯಾಕಂದರೆ ರಾಮಾನುಜಾಚಾರ್ಯರು ಮತ್ತು ಮಾಧ್ವರು ಸಹ ಜೀವವೆಂಬ ಪ್ರತ್ಯೇಕ ಒಂದು ತತ್ವವನ್ನು ಅಧ್ಯಾಹಾರಮಾಡಿಕೊಂಡು, ಅವಗೂ ಬ್ರಹ್ಮಕ್ಕೂ ಭೇದಕಲ್ಪನೆ ಮಾಡಿರುವ ಸಂಗತಿ ಮೇಲೆ ಹೇಳೋಣಾಗಿರುತ್ತದೆ. ಇದು ಛಾಂದೋಗ್ಯದ ಮುಖ್ಯ ಸಿದ್ಧಾಂತಕ್ಕೆ ವಿರುದ್ಧವಾದದ್ದೆಂಬದು ಸ್ಪಷ್ಟವೆ. ಪರಂತು "ತತ್ವಮಸಿ" (VIII.) "ಅಹಂಬ್ರಹ್ಮಾಸ್ಮಿ" (ನೀನು ಬ್ರಹ್ಮನಾಗಿರುವಿ, ನಾನು ಬ್ರಹ್ಮನಾಗಿರುವೆನು) ಎಂಬ ಹೇಳಿಕೆಗಳು ಅವುಗಳ ತಾತ್ಪರ್ಯವನ್ನು ಗ್ರಹಿಸಲಾರದ ಸಾಮಾನ್ಯ ಜನಗಳಿಗೆ ವಿಪರೀತವಾಗಿ ತೋರವದು ಮಾತ್ರವಲ್ಲದೆ, ಪ್ರಾಯಶಃ ಜನಗಳಿಗೆ ಉಪನಿಷತ್‌ಗಳ ಅಭಿಪ್ರಾಯ ಪ್ರಕಾರ ತಮ್ಮ ತಮ್ಮ ಬ್ರಹ್ಮರಂಧ್ರಗಳದ್ವಾರಾ ಹೃದಯಾಕಾಶದಲ್ಲಿರುವ ತಮ್ಮ ತಮ್ಮ ಅತ್ಮನನ್ನು ಕಂಡುಕೊಳ್ಳುವದು ಸಾಧ್ಯವಲ್ಲದೇ ಇರುವದರಿಂದ, ಉಪಾಸನಕ್ಕೋಸ್ಕರವಾಗಿ ಅವರಿಗೆ ಜೀವಬ್ರಹ್ಮರೊಳಗೆ ಭೇದ ಉಂಟೆಂದು ಉಪದೇಶಿಸುವದು, ಮತ್ತು ಆಗೋಸ್ಕರ ಜೀವನ ಪಾರತಂತ್ರ್ಯವನ್ನು ವರ್ಣಿಸುವದು ಸಹ ಅಗತ್ಯ, ಮತ್ತು ಆತ್ಮನ ಜೀವರೂಪಾವಸ್ಥೆಯ ಮಟ್ಟಿಗೆ ಇದು ಇರುವ ಯಥಾರ್ಥವೇ ಆಗಿರುತ್ತದೆ. ಮಾಧ್ವರು XIನೇ ಪಾದದ ವ್ಯಾಖ್ಯಾನದಲ್ಲಿ (185ನೇ ಪುಟ) ಜೀವವು, ಈ ಶರೀರದಂತೆಯೇ, ನಾಶಕ್ಕೆ ಗುರಿಯಾದದ್ದೆಂದು ಹೇಳುವದರಿಂದ, ಅವರ ಅಭಿಪ್ರಾಯವು ಇದೇ, ಎಂದರೆ ಜೀವರೂಪಾವಸ್ಥೆಯಲ್ಲಿ ಯಾನೆ ಸುಖದುಃಖಗಳಿಗೆ ಒಳಪಟ್ಟುಕೊಂಡು ಇರುವ ಕಾಲದಲ್ಲಿ ಮಾತ್ರ ಜೀವವು ಬ್ರಹ್ಮದಿಂದ ಭಿನ್ನವಾದದ್ದೆಂದು, ಆಗಿರುವದಾಗಿ ನಾವು ತಿಳಕೊಳ್ಳಬಹುದಿತ್ತು; ಮತ್ತು ಶಂಕರಾಚಾರ್ಯರ ಅಭಿಪ್ರಾಯಕ್ಕೂ ಅದು ಸರಿಬೀಳುತ್ತಿತ್ತು. ಆದರೆ ಈ ಮತದವರು, ಮತ್ತು ರಾಮಾನುಜಾಚಾರ್ಯರು ಕೂಡಾ ಕಡೆತನಕಲೂ ಒಂದೇ ನ್ಯಾಯವನ್ನನುಸರಿಸಿ ಪ್ರತ್ಯೇಕವಾಗಿ ತಮ್ಮ ತಮ್ಮ ಮತಗಳನ್ನು ಸ್ಥಾಪಿಸಲಿಕ್ಕೆ ಪ್ರವರ್ತಿಸಿ (೧ ನೆ) ರಾಮಾನುಜಾಚಾರ್ಯರು ಪರಮಾತ್ಮನು ಪ್ರಕೃತಿ, ಕಾಲ, ಪುರುಷ, ಜೀವ, ಇವುಗಳೇ ಶರೀರವಾಗಿ ಉಳ್ಳವನೆಂತಲೂ; (೨ ನೇ) ಮಾಧ್ವರು ಜೀವನು ಮುಕ್ತನಾದರೆ ಪರಂಜ್ಯೋತಿಯ ಸಮೀಪಕ್ಕೆ ಹೋಗಿ ಶೇರಿಕೊಳ್ಳುತ್ತಾನೆಂತಲೂ $\left\{ \frac{IX}{134} \cdot \frac{XI}{187\text{-}8} \right\}$ ಹೇಳುತ್ತಾರೆ. ಹಾಗಾದರೆ ರಾಮಾನುಜಾಚಾರ್ಯರ ಮತ ಪ್ರಕಾರ, ಜೀವನು ನಿತ್ಯನಾದ್ದರಿಂದ ಮೋಕ್ಷಕ್ಕೆ ಪ್ರಯ

ತ್ನವಮಾಡಬೇಕಾದ ಅಗತ್ಯವು ಜೀವಗಿಂತಲೂ ಪರಮಾತ್ಮಗೆ ಹೆಚ್ಚಾಗಿ ಇರುತ್ತದೆಂದು ಹೇಳಬೇಕಾಗುತ್ತದೆ. ಮಾಧ್ವರ ಹೇಳಿಕೆ ಪ್ರಕಾರ ಜೀವನು (ಶಾಶ್ವತವಾಗಿ ಇರುವ ವನಾದ ಪಕ್ಷದಲ್ಲಿ) ಕಡೇಗೆ ಪರಂಜ್ಯೋತಿಯಲ್ಲಿ (ಬ್ರಹ್ಮದಲ್ಲಿ) ಐಕ್ಯವನ್ನು ಪಡಿಯದೇ ದೂರ ನಿಲ್ಲುವದಾದರೆ, ಪರಂಜ್ಯೋತಿಗಿರುವ ಸರ್ವವ್ಯಾಪಕತ್ವವು ಹೋಗಿ, ಅದು ಇಲ್ಲ ದ ಖಾಲಿ ಸ್ಥಳ ಉಂಟೆಂದು ಪ್ರಾಪ್ತವಾಗುತ್ತದೆ. ಈ ಎರಡು ಸಂಗತಿಗಳೂ ನಮ್ಮ ಉಪನಿಷತ್‌ಗಳಿಗೆ ವಿರುದ್ಧವಾದವುಗಳು. ಇವೇ ಪ್ರಸ್ತುತವ್ಯಾಖ್ಯಾನಗಳ ಮುಖ್ಯ ಆ ಕೃತಿಗಳಾಗಿರುತ್ತವೆ. ವಿಸ್ತಾರದಲ್ಲಿ ಪ್ರವೇಶಿಸಲಿಕ್ಕೆ ಇದು ಸ್ಥಳವಲ್ಲ, ನಾನು ಶಕ್ತ ನೂ ಅಲ್ಲ. ಮುಖ್ಯವಾಗಿ ಯಾರ ವ್ಯಾಖ್ಯಾನ ಮೂಲಗ್ರಂಥಗಳಿಗನುಸಾರವಾದ ದ್ದೆಂದು ಇಷ್ಟು ಮಾತ್ರ ತಿಳದರೆ ಪ್ರಕೃತಕ್ಕೆ ಸಾಕಾಗಿರುತ್ತದೆ.

೧೧. ಇನ್ನು ಈ ಪುಸ್ತಕದಲ್ಲಿ ಸಂಗ್ರಹಿಸಿರುವ ಶ್ರುತಿಗಳಿಗೂ ವ್ಯಾಖ್ಯಾನ ಸಾ ರಾಂಶಗಳಿಗೂ ನಾನು ಮಾಡಿರುವ ಭಾಷಾಂತರದ ಕುರಿತು ಒಂದು ಮಾತು ಹೇಳುವ ದುಂಟು. ನಾನು ಈ ಮೊದಲು ಇಂಥಾ ಸಂಸ್ಕೃತ ಗ್ರಂಥಗಳನ್ನು ಭಾಷಾಂತರ ಮಾಡಿ ದವನಲ್ಲ. ಆದ್ದರಿಂದ ಈ ಕೆಲಸದಲ್ಲಿ ನಾನು ಕೆಳಗೆ ಕಾಣಿಸಿದ ಪುಸ್ತಕಗಳ ಸಹಾ ಯವನ್ನು ಪಡೆದಿರುವದಾದರೂ, ಪ್ರಮಾದದಿಂದಾಗಲೀ ತಪ್ಪುಗ್ರಹಿಕೆಯಿಂದಾಗಲೀ ಉಂಟಾದ ತಪ್ಪುಗಳು ಇರಬಹುದಾದ ಪ್ರಯುಕ್ತ, ಓದುವವರು ಅಂಥಾ ತಪ್ಪುಗಳನ್ನು ನನ್ನ ತಿಳವಳಿಕೆಗೆ ತಂದರೆ, ಇನ್ನೊಮ್ಮೆ ಈ ಪುಸ್ತಕವನ್ನು ಛಾಪಿಸುವ ಕಾಲದಲ್ಲಿ ಅವು ಗಳನ್ನು ತಿದ್ದಲಿಕ್ಕೆ ಸಂತೋಷಪಡುತ್ತೇನೆ. ಹಾಗೆಯೇ ಇದರ ಸ್ಥೂಲ ಮುದ್ರಣ ಪತ್ರ ಗಳನ್ನು ತಿದ್ದುವ ಕೆಲಸವೂ ನಾನೇ ಮಾಡಿದ್ದರಿಂದ ಕೆಲವು ಮೊಳೆಗಳ ವ್ಯತ್ಯಾಸಗಳು ಉಳದುಹೋಗಿವೆ. ಪ್ರಕೃತ ಅಂಥಾ ತಪ್ಪುಗಳಿಗಾಗಿ ಓದುವವರು ನನ್ನನ್ನು ಕ್ಷಮಿಸ ಬೇಕಾಗಿ ನಾನು ಪ್ರಾರ್ಥಿಸುತ್ತೇನೆ.

ಈ ರೀತಿ ಈ ಪುಸ್ತಕವನ್ನು ಸಿದ್ಧಪಡಿಸುವದರಲ್ಲಿ ಪ್ರೊಫೆಸರ್ ಮೆಕ್ಸ್‌ಮೂಲರ್ ತುಕಾರಾಮತಾತ್ಯ, ವಿ. ಶಿ. ಶೇಷಾಚಾರಿ, ಬಿ. ಎ. ಬಿ. ಎಲ್., ಮದ್ರಾಸು ಹ್ಯಾಕೋ ರ್ಟು ವಕೀಲ್, ಇವರು ಸಂಗ್ರಹಿಸಿ ಪ್ರಕಟಿಸಿದ ಛಾಂದೋಗ್ಯ ಮತ್ತು ಕೇನದ ಭಾ ಷಾಂತರಗಳು, ಪಂಡಿತಪೀತಾಂಬರ ಶರ್ಮ ಎಂಬವರು ಮಾಡಿದ ಛಾಂದೋಗ್ಯದ ಹಿಂ ದುಸ್ಥಾನೀ ಭಾಷಾಂತರ, ಮತ್ತು III ನೇ ಪಾಠದಲ್ಲಿ ಪ್ರಸ್ತಾಪಿಸಿದ ಪ್ರೊ. ಡ್ಯೂಸನ್ ಎಂಬವರ ಪುಸ್ತಕದ ಇಂಗ್ಲೀಷ್ ಭಾಷಾಂತರ ಸಹ ಬಹಳ ಸಹಕಾರಿಗಳಾಗಿರುವದರಿಂದ

ಆ ಎಲ್ಲಾ ಗ್ರಂಥಕರ್ತೃಗಳಿಗೂ, ಸಂಗ್ರಹಕಾರರಿಗೂ ಕೂಡಾ ನಾನು ಕೃತಜ್ಞನಾಗಿರುವದು ಮಾತ್ರವಲ್ಲದೆ, ಪ್ರಸ್ತುತ ಉಪನಿಷತ್‌ಗಳಿಗೆ ವ್ಯಾಖ್ಯಾನ ಮಾಡಿದ—

ಶ್ರೀಮತ್ ಶಂಕರಾಚಾರ್ಯರು.

,, ರಂಗರಾಮಾನುಜಾಚಾರ್ಯರು.

,, ಮಧ್ವಾಚಾರ್ಯರು.

,, ರಾಘವೇಂದ್ರಯತಿಗಳು.

,, ವೇದೇಶತೀರ್ಥರು.

ಇವರೆಲ್ಲರಿಗೂ, ಶ್ರೀಮದ್ವಿದ್ಯಾರಣ್ಯ ಸ್ವಾಮಿಗಳಿಗೂ, ನನ್ನ ಸಾಷ್ಟಾಂಗ ಪ್ರಣಾಮಗಳನ್ನು ಈ ಮೂಲಕವಾಗಿ ಅರ್ಪಿಸಿ, ಈ ಉಪೋದ್ಘಾತವನ್ನು ಸಂಪೂರ್ತಿ ಮಾಡುತ್ತೇನೆ.

एषत्येवैनं साधुकर्म कारयति तं यमग्वानुनेषत्येष एवैनमसाधुकर्म कारयति तं यमें भ्योलोकेभ्यो नुनुत्सत एषलोकपाल, एषलोकाधिपति, रेषसर्वेश्वरः, सम आत्मेति विद्यात् । सम आत्मेति विद्यात् ॥

(कौ ब्रा उ ३—९.)

"ಯಾರನ್ನು ಈ ಲೋಕಗಳಿಂದ ಉದ್ಧರಿಸಬೇಕೆಂದು ಇಚ್ಛಿಸುತ್ತಾನೋ, ಅವನಿಂದ ತಾನೇ ಒಳ್ಳೇ ಕೆಲಸವನ್ನು ಮಾಡಿಸುತ್ತಾನೆ; ಯಾರನ್ನು (ಅವುಗಳಿಂದ) ತಗ್ಗಿಗೆ ಹಾಕಬೇಕೆಂದು ಇಚ್ಛಿಸುತ್ತಾನೋ, ಅವನಿಂದ ತಾನೇ ಕೆಟ್ಟಕೆಲಸವನ್ನು ಮಾಡಿಸುತ್ತಾನೆ. (ಹಾಗೆ ಯಾರು ಮಾಡಿಸುತ್ತಾನೋ,) ಇವನು ಲೋಕರಕ್ಷಕನು, ಇವನು ಲೋಕಕ್ಕೆ ಅರಸನು; ಇವನು ಎಲ್ಲಕ್ಕೂ ಅಧಿಪತಿಯಾದವನು. ಅವನು ನನ್ನ ಆತ್ಮನೆಂದು ತಿಳಿಯಬೇಕು. ಅವನು ನನ್ನ ಆತ್ಮನೆಂದು ತಿಳಿಯಬೇಕು".

ಅವನಿಗೆ ಸಂತೋಷವಾಗಲಿ.

ಕೀಲಕ ಸಂ|ರದ ಫಾಲ್ಗುಣ ಶು. ೫
24 ನೇ ಫೇಬ್ರುವರಿ 1909.

ಹಳಿಗೇರಿ ಕೃಷ್ಣರಾವ್.



## 1ನೇ ಪಾಠ.

# ಸೃಷ್ಟಿಯ ಕುರಿತು.

(१) सदेवसोम्येदमग्र आसीदेकमेवाद्वितीयं । तद्धैक आहुरसदेवेदमग्र आसीदेकमेवाद्वितीयं तस्मादसतः सज्जायेत । (६—२—१)-

(೧) ಎಲೋ ಸೋಮ್ಯ! (ಮಗು!) ಆದಿಯಲ್ಲಿ ಇದು (ಜಗತ್) ಸತ್ ಮಾತ್ರವೇ ಆಗಿತ್ತು. ಒಂದೇ ಎರಡನೇದಿರಲಿಲ್ಲ. ಆ ವಿಷಯದಲ್ಲಿ ಕೆಲವರು ಆದಿಯಲ್ಲಿ ಇದು ಅಸತ್ ಮಾತ್ರವೇ ಆಗಿತ್ತು, ಒಂದೇ ಎರಡನೇದಿರಲಿಲ್ಲ; ಆ ಅಸತ್‌ನಿಂದ ಸತ್ ಉಂಟಾಯಿತೆಂದು ಹೇಳುತ್ತಾರೆ.

(२) कुतस्तु खलुसोम्यैवं स्यादितिहोवाच । कथमसतः सज्जायेतेति सत्त्वेवसोम्येदमग्र आसीदेकमेवाद्वितीयम् । (६—२—२).

(೨) ಎಲೋ ಸೋಮ್ಯ! ನಿಜವಾಗಿ ಯಾವ ಕಾರಣದಿಂದ ಹಾಗೆ (ಸ್ಥಾಪನೆ) ಆದೀತು? ಎಂದು (ಉದ್ದಾಲಕರು) ಹೇಳಿದರು. ಅಸತ್‌ನಿಂದ ಸತ್ ಉಂಟಾಯಿತೆಂದು ಹೇಗೆ ಹೇಳಬಹುದು? ಹಾಗಲ್ಲ, ಹೇ ಸೋಮ್ಯ! ಆದಿಯಲ್ಲಿ ಇದು ಸತ್ ಮಾತ್ರವೇ ಆಗಿತ್ತು. ಒಂದೇ, ಎರಡನೇದಿರಲಿಲ್ಲ.

(३) तदैक्षत बहु स्यां प्रजायेयेति । तत्तेजोऽसृजत ॥ तत्तेज ऐक्षत बहु स्यां प्रजायेयेति । तदपोऽसृजत । तस्माद्यत्र क्व च शोचतिस्वेदतेवा पुरुषस्तेजस एव तदध्यापोजायन्ते । (६—२—३).

(೩) ಅದು (ಸತ್) ತಾನು ಬಹಳವಾಗಬೇಕು, ಹುಟ್ಟಬೇಕು ಎಂದು ಯೋಚಿಸಿತು. ಅದು ತೇಜಸ್ಸನ್ನು ಸೃಷ್ಟಿಸಿತು; ಆ ತೇಜಸ್ ತಾನು ಬಹಳವಾಗಬೇಕು, ಹುಟ್ಟಬೇಕು ಎಂದು ಯೋಚಿಸಿತು; ಅದು ಜಲವನ್ನು ಸೃಷ್ಟಿಸಿತು. ಆದಕಾರಣ ಎಲ್ಲಿಯಾದರೂ ಯಾವಾಗಲಾದರೂ ಪುರುಷನು ಕಣ್ಣೀರು ಸುರಿಸಿದರೆ, ಅಥವಾ (ಅವನ ಮೈ) ಬೆವರಿಟ್ಟರೆ, ಆ ಜಲವು ತೇಜಸ್ಸಿನಿಂದಲೇ ಹುಟ್ಟುವದಾಗಿರುತ್ತದೆ.

(४) ता आपऐक्षन्त बह्व्यः स्याम प्रजायेमहीति । ता अन्नमसृजन्त । तस्माद्यत्र

(೪) ಆ ಜಲವು (ತಾನು) ಬಹಳವಾಗಬೇಕು, ಹುಟ್ಟಬೇಕು ಎಂದು ಯೋಚಿ

क्वचवर्षति तदेव भूयिष्ठमन्नं भवत्यद्भ्य एव तदध्यन्नाद्यं जायते ॥ (६—२—४). ಸಿತು; ಅದು ಅನ್ನವನ್ನು (ಪೃಥ್ವಿಯನ್ನು) ಸೃಷ್ಟಿಸಿತು; ಆದಕಾರಣ ಎಲ್ಲ್ಯಾದರೂ ಯಾವಾಗಲಾದರೂ ಮಳೆ ಸುರಿದರೆ ಅಲ್ಲಿಯೇ ಬಹಳ ಅನ್ನವು ಬೆಳೆಯುತ್ತದೆ. ಜಲದಿಂದಲೇ ಅನ್ನ ಮೊದಲಾದವು (ತಿಂಡೀ ವಸ್ತು)ಗಳು ಉಂಟಾಗುವದಾಗಿರುತ್ತದೆ.

(५) सेयं देवतैक्षत हन्ताहमिमास्तिस्रोदेवता अनेन जीवेनाऽत्मनाऽनुप्रविश्य नामरूपे व्याकरवाणीति ॥ (६—३—२). (೫) ಆ ದೇವತೆಯು (ಆಗ) "ಒಳ್ಳೇದು! ಈ ಮೂರು ದೇವತೆಗಳಲ್ಲಿಯೂ ನಾನು ಸ್ವತಃ ಈ (ಬುದ್ಧಿಸ್ಥ) ಜೀವರೂಪದಿಂದ ಪ್ರವೇಶಿಸಿ ನಾಮರೂಪಗಳನ್ನು ವಿಸ್ತರಿಸಬೇಕು" ಎಂದು ಯೋಚಿಸಿತು.

(६) तासां त्रिवृतं त्रिवृतमेकैकां करवाणीति । सेयं देवतेमास्तिस्रोदेवता अनेनैव जीवेनाऽत्मनानुप्रविश्य नामरूपे व्याकरोत ॥ (६—३—३). (೬) ಅವುಗಳಲ್ಲಿ ಪ್ರತಿ ಒಂದನ್ನು ಮೂರು ಮೂರು ಪಾಲುಮಾಡಿ, ಬೆರಸಬೇಕೆಂದು ಯೋಚಿಸಿ, ಆ ದೇವತೆಯು ಈ ಮೂರು ದೇವತೆಗಳಲ್ಲಿಯೂ ಸ್ವತಃ ಈ ಜೀವರೂಪದಿಂದಲೇ ಪ್ರವೇಶಿಸಿ ನಾಮರೂಪಗಳನ್ನು ವಿಸ್ತರಿಸಿತು.

(७) तासां त्रिवृतं त्रिवृतमेकैकामकरोद्यथानुखलुसोम्येमास्तिस्रोदेवता स्त्रिवृत्त्रिवृदेकैकाभवति तन्मे विजानीहीति ॥ (६—३—४). (೭) ಅವುಗಳಲ್ಲಿ ಪ್ರತಿ ಒಂದನ್ನು ಮೂರು ಮೂರು ಪಾಲುಗಳನ್ನು ಮಾಡಿ ಒಟ್ಟು ಬೆರಸಿತು. ಹೇ ಸೋಮ್ಯ! ಈ ಮೂರು ದೇವತೆಗಳೂ ಅವುಗಳಲ್ಲಿ ಪ್ರತಿ ಒಂದುಮೂರು ಮೂರು ಅಂಶಗಳಾಗಿ ವಿಂಗಡಿಸಲ್ಪಟ್ಟು ಬಳಿಕ ಹೇಗೆ ಬೆರದವು ಎಂಬದನ್ನು ನನ್ನಿಂದ ನೀನು ಸ್ಪಷ್ಟವಾಗಿ ತಿಳದುಕೊ ಎಂದರು.

(८) यदग्नेरोहितꣳरूपं तेजसस्तद्रूपं। यच्छुक्लंतदपां । यत्कृष्णं तदन्नस्यापागादग्नेरग्नित्वं वाचारंभणं विकारोनामधेयं त्रीणि रूपाणीत्येवसत्यम् ॥ (६—४—१). (೮) ಅಗ್ನಿಯ ಕೆಂಪು ವರ್ಣವು ತೇಜಸ್ಸಿನದ್ದು, ಬಿಳೀ ವರ್ಣವು ಜಲದ್ದು, ಕಪ್ಪು ವರ್ಣವು ಅನ್ನ (ಪೃಥ್ವಿ)ದ್ದು, (ಈ ಕಾರಣದಿಂದ) ಅಗ್ನಿಯಿಂದ ಅಗ್ನಿತ್ವವು ಹೋಗಿ ಇದೆ. (ಅದು) ಬರೀ ಶಬ್ದ, ವಿಕಾರ, ಹೆಸರು, ಮೂರು ರೂಪಗಳೆಂಬದೇ ಸತ್ಯ.

(९) यदादित्यस्य रोहितꣳरूपं तेजसस्तद्रूपं । यच्छुक्लंतदपां । यत्कृष्णं तदन्नस्यापागादादित्यादादित्यत्वं । वाचारंभणं किकारो नामधेयं त्रीणि रूपाणीत्येवसत्यम् (६—४—२).

(೯) ಆದಿತ್ಯನ ಕೆಂಪುವರ್ಣವು ತೇಜಸ್ಸಿನದ್ದು, ಬಿಳೀ ವರ್ಣವು ಜಲದ್ದು, ಕಪ್ಪು ವರ್ಣವು ಅನ್ನ (ಪ್ರಥ್ವಿ)ದ್ದು. (ಈ ಕಾರಣದಿಂದ) ಆದಿತ್ಯನಿಂದ ಆದಿತ್ಯತ್ವವು ಹೋಗಿ ಇದೆ. (ಅದು) ಬರೀ ಶಬ್ದ, ವಿಕಾರ, ಹೆಸರು, ಮೂರು ರೂಪಗಳೆಂಬದೇ ಸತ್ಯ.

(१०) यच्चन्द्रमसोरोहितꣳरूपं तेजसस्तद्रूपं । यच्छुक्लंतदपां । यत्कृष्णं तदन्नस्यापागाच्चन्द्राच्चन्द्रत्वं । वाचारम्भणं विकारो नामधेयं त्रीणि रूपाणीत्येवसत्यम् ॥ (६—४—३).

(೧೦) ಚಂದ್ರನ ಕೆಂಪು ವರ್ಣವು ತೇಜಸ್ಸಿನದ್ದು, ಬಿಳೀ ವರ್ಣವು ಜಲದ್ದು, ಕಪ್ಪು ವರ್ಣವು ಅನ್ನ (ಪೃಥ್ವಿ)ದ್ದು. (ಈ ಕಾರಣದಿಂದ) ಚಂದ್ರನಿಂದ ಚಂದ್ರತ್ವವು ಹೋಗಿ ಇದೆ. (ಅದು) ಬರೀ ಶಬ್ದ, ವಿಕಾರ, ಹೆಸರು, ಮೂರು ರೂಪಗಳೆಂಬದೇ ಸತ್ಯ.

(११) यद्विद्युतो रोहितꣳ रूपं तेजसस्तद्रूपं यच्छुक्लंतदपां । यत्कृष्णं तदन्नस्यापागाद्विद्युतो विद्युत्त्वं । वाचारंभणं विकारो नामधेयं त्रीणि रूपाणीत्येवसत्यम् ॥ (६—४—४).

(೧೧) ವಿದ್ಯುತ್(ಮಿಂಚಿ)ನ ಕೆಂಪು ವರ್ಣವು ತೇಜಸ್ಸಿನದ್ದು, ಬಿಳೀ ವರ್ಣವು ಜಲದ್ದು, ಕಪ್ಪು ವರ್ಣವು ಅನ್ನ (ಪೃಥ್ವಿ)ದ್ದು. (ಈ ಕಾರಣದಿಂದ) ವಿದ್ಯುತ್‌ನಿಂದ ವಿದ್ಯುತ್ತ್ವವು (ಮಿನುಪು) ಹೋಗಿ ಇದೆ. (ಅದು) ಬರೀ ಶಬ್ದ, ವಿಕಾರ, ಹೆಸರು, ಮೂರು ರೂಪಗಳೆಂಬದೇ ಸತ್ಯ.

(१२) तेषां खल्वेषां भूतानां त्रीण्येव बीजानि भवन्त्याण्डजं जीवजमुद्भिज्जमिति ॥ (६—३—१).

(೧೨) ಈ ಪ್ರಸಿದ್ಧವಾದ ಪ್ರಾಣಿಗಳಿಗೆ ಮೂರೇ ತರಹದ ಬೀಜಗಳಾಗಿರುತ್ತವೆ. ಅಂಡಜ (ಮೊಟ್ಟೆ ಒಡದು ಹುಟ್ಟಿದ್ದು), ಜೀವಜ (ಜರಾಯುವಿನಿಂದ ಹುಟ್ಟಿದ್ದು), ಉದ್ಭಿಜ್ಜ (ಬೀಜದಿಂದ ಮೊಳಿಕೆ ಬಂದದ್ದು) ಎಂಬವುಗಳು.

1ನೇ ಖಂಡದ

# ವ್ಯಾಖ್ಯಾನ ಸಂಗ್ರಹ.

(೧) ಈ ಖಂಡದಲ್ಲಿರುವದೆಲ್ಲ ಇದರ ಉಪೋದ್ಘಾತದ ೨ನೆಯ ಪ್ರಕರಣದಲ್ಲಿ ಹೇಳಿರುವಂತೆ ಯಾವ ವಸ್ತುವನ್ನು ತಿಳದರೆ ಕೇಳದ್ದು ಕೇಳುತ್ತದೋ, ಯೋಚಿಸಕೂಡದ್ದು ಯೋಚಿಸಕೂಡುತ್ತದೋ, ನಿಶ್ಚಯವಾಗದ್ದು ನಿಶ್ಚಯವಾಗುತ್ತದೋ, ಅಂಥಾ ವಸ್ತುವನ್ನು ಶ್ವೇತಕೇತುಗೆ ತಿಳಿಸಿಕೊಡುವದಕ್ಕೆ ಉದ್ದಾಲಕರು ಮಾಡಿದ ಉಪದೇಶಗಳಾಗಿರುತ್ತವೆ.

ಆ ವಸ್ತು ಪರಬ್ರಹ್ಮವೇ. ಈ ಖಂಡದಲ್ಲಿ ಸತ್ ಶಬ್ದದಿಂದ ಅದನ್ನೇ ಹೇಳುವದು. ಮುಂದೆ ಬರುವ VIIನೇ ಖಂಡದ ೧೧ನೇ ಶ್ರುತಿಯಲ್ಲಿ ಹೇಳುವ ಪ್ರಕಾರ ಮರಣವಿಲ್ಲದ್ದು ಅದು ಒಂದೇಯಾಗಿರುತ್ತದೆ. ಮಿಕ್ಕ ಈ ಖಂಡದಲ್ಲಿ ಹೇಳುವ ತೇಜೋಬನ್ನಗಳೆಂಬ ೩ ದೇವತೆಗಳ ರೂಪಗಳು ಸತ್ಯವಾದವುಗಳೆಂದು ಇಲ್ಲಿ ಹೇಳಿರುವದಾದರೂ, ಅವುಗಳೆಲ್ಲ ಪ್ರತಿಲೋಮ ಕ್ರಮದಲ್ಲಿ ಅವುಗಳಿಗೆ ಮೂಲಕವಾದ ಮೇಲೆಹೇಳಿದ ಸತ್‌ನಲ್ಲಿ ಲಯವನ್ನು ಹೊಂದಲಿಕ್ಕೆ ಗುರಿಯಾಗಿರುತ್ತವೆಂದು Vನೇ ಖಂಡದಲ್ಲಿ ಹೇಳೋಣಾಗುತ್ತದೆ. ಈ ದೆಸೆಯಿಂದ ಅಗ್ನಿ, ಆದಿತ್ಯ, ಚಂದ್ರ, ವಿದ್ಯುತ್ (ಮಿಂಚು) ಎಂದರೆ ಈಚರಾಚರ ಪ್ರಪಂಚವೆಲ್ಲ ಮಿಥ್ಯವಾದವುಗಳೇ ಆಗಿರುವದರಿಂದ, ಪರಮಾರ್ಥ ಸತ್ಯವಾದ ವಸ್ತು ಬ್ರಹ್ಮ ಒಂದೇಯಾಗಿರುತ್ತದೆ; ಅದು ಅದ್ವಿತೀಯ ಎಂದರೆ ಎರಡನೇದಿಲ್ಲದ್ದು ಎಂದು ಶಂಕರಾಚಾರ್ಯರು ಹೇಳುತ್ತಾರೆ.

(೨) ಈಗ ಈ ಖಂಡದಲ್ಲಿ ಹೇಳುವ ಸೃಷ್ಟಿಗೆ ಮೂಲಕವಾದ ಸತ್ ಎಂದರೆ ಏನು, ಮತ್ತು ಅದು ಹೇಗೆ ಉಂಟೆಂಬದನ್ನು ನಾವು ಪ್ರಥಮತಃ ವಿಚಾರಿಸಬೇಕು.

(१) अस्तितामात्रं वस्तुसूक्ष्मं निर्विशेषं सर्वगतमेकं निरंजनं निरवयवं विज्ञानं ॥ शं ॥

ಶಂಕರಾಚಾರ್ಯರು ಅದು ಇರೋಣ ಮಾತ್ರವೇ ಆದ ವಸ್ತುರೂಪವುಳ್ಳ ಸೂಕ್ಷ್ಮ ಮತ್ತು ವಿಶೇಷಣವಿಲ್ಲದ, ಸಕಲ ವಸ್ತುಗಳಲ್ಲಿಯೂ ಅಡಗಿರುವಂಥಾ, ಒಂದೇಯಾಗಿಯೂ ನಿರ್ಲಿಪ್ತ ಸ್ವಭಾವವುಳ್ಳದ್ದಾಗಿಯೂ ಅವಯುವಗಳಿಲ್ಲದೆಯೂ ಇರುವ, ವಿಜ್ಞಾನ ಎಂದು ಹೇಳುತ್ತಾರೆ.

गुणविशिष्टप्रकृतिपुरुषकालशरीरकं परमात्मानमुपस्थापयति ॥ रं ॥

ರಂಗರಾಮಾನುಜಾಚಾರ್ಯರು ಅದು (ಪ್ರಸ್ತುತ ಸತ್ ಶಬ್ದವು) ಗುಣವಿಶಿಷ್ಟವಾದ ಪ್ರಕೃತಿ ಪುರುಷಕಾಲ ಶರೀರಕನಾದಂಥಾ ಪರಮಾತ್ಮನನ್ನು ತಿಳಿಸಿಕೊಡುತ್ತದೆಂದು ಹೇಳುತ್ತಾರೆ.

सन्नामकं ब्रह्म ॥ रा. वे ॥

ಮಾಧ್ವರು ಅದು ಬ್ರಹ್ಮದ ಹೆಸರೆಂದು ಹೇಳುತ್ತಾರೆ.

(೩) ಅಸತ್ ಪ್ರಥಮತಃ ತೇಜಸ್ಸನ್ನು, ಈ ತೇಜಸ್ ಜಲವನ್ನು, ಈ ಜಲ ಅನ್ನವ (ಪೃಥ್ವಿಯ)ನ್ನು ಸಹ ಕ್ರಮೇಣ ಒಂದು ಮತ್ತೊಂದನ್ನು ಸೃಷ್ಟಿಸಿತೆಂದು ಹೇಳೋಣಾಗಿ ಇದೆ. ಈಗ ಈ ತೇಜಸ್ ಜಲ ಅನ್ನ ಸಹ ಬರೀ ಅಚೇತನ (ಜಡ) ಪದಾರ್ಥಗಳಾಗಿರುವ ಪಕ್ಷದಲ್ಲಿ ಅವುಗಳಿಗೆ ಸೃಷ್ಟಿಸುವ ಶಕ್ತಿ ಇರಕೂಡದು. ಪರಂತು ಪ್ರಸ್ತುತ ಶ್ರುತಿಗಳಲ್ಲಿ ತೇಜಸ್ ಜಲವನ್ನು, ಜಲ ಅನ್ನವನ್ನು ಸಹ ಸೃಷ್ಟಿಸಿದವೆಂದು ಹೇಳೋಣಾಗಿ ಇದೆ. ಇದಕ್ಕೆ ಕಾರಣವೇನು? ಎಂದರೆ:—

(३—४) तेजोरूपसंस्थितं सत्–अबाकारसंस्थितं सत्–प्रकृता सदाख्या तेजोऽबन्नयोनिर्देवतोक्ताऐक्षत ॥ शं ॥

ಶಂಕರಾಚಾರ್ಯರು ತೇಜೋ ರೂಪದಲ್ಲಿದ್ದ ಸತ್, ಜಲಾಕಾರದಲ್ಲಿದ್ದ ಸತ್, ಎಂದರೆ ಆ ತೇಜೋಬನ್ನಗಳೆಲ್ಲ ಸತ್‌ನ ರೂಪಗಳೇ, ಅದೇ ಅವೆಲ್ಲಕ್ಕೂ ಮೂಲಕವೆಂದು ಹೇಳುತ್ತಾರೆ.

अत्राचेतनस्यतेज आदेरीक्षितृत्वासंभवात्तेज आदिशब्दास्तत्तच्छरीरक परमात्मपरादृष्टव्याः ॥ रं ॥

ರಾಮಾನುಜಾಚಾರ್ಯರು ಇಲ್ಲಿ ಅಚೇತನಗಳಾದ ತೇಜಸ್ ಮೊದಲಾದವುಗಳಿಗೆ ಯೋಚಿಸುವ ಕರ್ತೃತ್ವ ಇರೋಣವು ಅಸಂಭವವಾದ್ದರಿಂದ ಆ ತೇಜಸ್ ಮೊದಲಾದ ಶಬ್ದಗಳು ಅವುಗಳಿಂದ ಹೇಳಲ್ಪಡುವ ಆಯಾ ವಸ್ತುಗಳೇ (ತೇಜೋಬನ್ನಗಳೇ) ಶರೀರಗಳಾಗಿ ಉಳ್ಳ ಪರಮಾತ್ಮಪರವಾದವುಗಳೆಂದು ತಿಳಿಯಬೇಕಾಗಿ ಹೇಳುತ್ತಾರೆ.

ते तत त्यामेहरी प्रकृतांवास्थितेन ह ·

ಮಾಧ್ವರು ಮಾತ್ರ ಮೇಲೆ ಹೇಳಿದ

पेणाजत्वेनानुत्पत्ति मत्वेनवर्ततइतिवा ॥ × ॥ तात्व्याप्तात् हरेर्जायते विद्याख्य जगत्स्रष्ट्ट रूपेण प्रादुर्भवतातिवा तेज: शब्दित श्री: । तांतदभिमन्यमानं तेजोभूतं चासृजत । × । तत्तेज: आप: अबभिमानिनं अप्शब्दितं प्राणंतदभिमता आपश्चासृजत । × । ता: अबभिमानी प्राण: अन्नं अन्नशब्दितपृथिवी मानिनं रुद्रं ॥ अत्रतेज:प्रभृतिशब्दा अभि मानिपरा अपिध्येया: ॥ रा ॥

ಸತ್ ಪ್ರಥಮತಃ ತೇಜಸ್ ಎಂದರೆ ಶ್ರೀ (ಲಕ್ಷ್ಮೀ), ಮತ್ತು ಅವಳಿಂದ ಅಭಿಮಾನಿ ಸಲ್ಪಟ್ಟಿರುವ ತೇಜೋಭೂತವನ್ನು ಸಹ ಸೃಷ್ಟಿಸಿತು. ಈ ತೇಜಸ್ ಅಪ್ ಎಂದರೆ ಪ್ರಾಣದೇವತಾ, ಮತ್ತು ಅವನು ಅಭಿ ಮಾನಿಸಿಕೊಂಡಿರುವ ಜಲ ಇವುಗಳನ್ನು ಸೃಷ್ಟಿಸಿತು. ಈ ಜಲವು ಅನ್ನ (ಪೃಥ್ವಿ) ಎಂದರೆ ರುದ್ರ, ಮತ್ತು ಇವನಿಂದ ಅಭಿ ಮಾನಿಸಲ್ಪಟ್ಟಿರುವ ಅನ್ನ (ಪೃಥ್ವಿ) ಇವು ಗಳನ್ನು ಸೃಷ್ಟಿಸಿತು. ಆದಕಾರಣ ಇಲ್ಲಿ ತೇಜಸ್, ಅಪ್, ಅನ್ನ ಈ ಶಬ್ದಗಳಿಗೆ ಅವುಗಳ ಅಭಿಮಾನಿಗಳಾದ ಶ್ರೀ ಪ್ರಾಣ ರುದ್ರರ ಪರವಾಗಿ ಕೂಡಾ ಅರ್ಥಮಾಡಬೇ ಕೆಂತಲೂ, ಆ ಪೈಕಿ ತೇಜಸ್ಸಿಗೆ ಪ್ರಕೃತಿ ಎಂತಲೂ ವಿದ್ಯಾ ಎಂತಲೂ ಬೇರೆ ಬೇರೆ ಹೆಸ ರುಗಳನ್ನು ಕೂಡಾ ಹೇಳುತ್ತಾರೆ. ಹೀಗೆ ಇವರ ಮತಪ್ರಕಾರ ತೇಜಸ್ ಶಬ್ದವು ಶ್ರೀ (ಲಕ್ಷ್ಮೀ) ಯಾನೆ ವಿದ್ಯಾ ಮತ್ತು ಪ್ರಕೃತಿ ಇವೆರಡಕ್ಕೂ ಸಂಜ್ಞೆಯಾಗಿರುತ್ತದೆ.

(೪) ಇಷ್ಟು ಆದನಂತರ ಸತ್ ತಾನೇ ಸ್ವತಃ ಜೀವರೂಪದಿಂದ ಆ ತೇಜೋಬನ್ನ ಗಳಲ್ಲಿ ಪ್ರವೇಶಿಸಿ, ನಾಮರೂಪಾತ್ಮಕವಾದಂಥಾ ಈ ಪ್ರಪಂಚವನ್ನು ವಿಸ್ತರಿಸಬೇ ಕೆಂದು ಯೋಚಿಸಿ, ಅವುಗಳಲ್ಲಿ ಪ್ರತಿ ಒಂದನ್ನು ತ್ರಿವೃತ್ ಮಾಡಿ ತಾನೇ ಈ ಜೀವ ರೂಪದಿಂದ ಅವುಗಳಲ್ಲಿ ಪ್ರವೇಶಿಸಿ, ನಾಮರೂಪಗಳನ್ನು ಸ್ಪಷ್ಟಪಡಿಸಿತೆಂದು ಹೇಳೋ ಣಾಗಿ ಇದೆ. ಇಲ್ಲಿ ನಾವು ತಿಳಕೊಳ್ಳಬೇಕಾದ ಸಂಗತಿಗಳ್ಯಾವವಂದರೆ—

೧ನೇ—ಲೋಕದಲ್ಲಿ ರೂಢಿಯಾಗಿ ಜೀವವೆಂದೆನ್ನುವ ವಸ್ತು ಇಲ್ಲಿ ಹೇಳುವ ಜೀವ ರೂಪವಾದ ಸನ್ನಾಮಕ ಬ್ರಹ್ಮವೇಯೋ? ಬದಲುಂಟೋ?

೨ನೇ—ತೇಜಸ್, ಅಪ್ (ಜಲ), ಅನ್ನ (ಪೃಥ್ವಿ), ಇವುಗಳನ್ನು ತ್ರಿವೃತ್ ಮಾಡಿ ದ್ದೆಂಬದು ಹೇಗೆ? ಎಂಬವುಗಳಾಗಿರುತ್ತವೆ.

## ೧ನೇ ಸಂಗತಿಯ ಕುರಿತು.

(५) जीवो हिनामदेवताया आभास मात्रं–बुध्यादि भूतमात्रा संसर्गजनितः आदर्शइवप्रविष्टः पुरुषप्रतिबिम्बो जलादिष्विवचसूर्यादीनां ॥ शं ॥

ಶಂಕರಾಚಾರ್ಯರು ಜೀವವೆಂಬದು ಕನ್ನಡಿಯಲ್ಲಿ ತೋರುವ ಪುರುಷನ ಪ್ರತಿಬಿಂಬ, ಮತ್ತು ಜಲ ಮೊದಲಾದವುಗಳಲ್ಲಿ ತೋರುವ ಸೂರ್ಯಾದಿಗಳ ಪ್ರತಿಬಿಂಬ, ಹೇಗೋ ಹಾಗೆಯೇ, ಬುದ್ಧಿ ಮೊದಲಾದ ಪಾಂಚಭೌತಿಕ ತನ್ಮಾತ್ರಗಳ ಸಂಸರ್ಗದಿಂದುಂಟಾದ ಮೇಲೆ ಹೇಳಿದ (ಸನ್ನಾಮಕವಾದ) ದೇವತೆಯ ಅಭಾಸ ಮಾತ್ರವೇ ಎಂದು ಹೇಳುತ್ತಾರೆ.

जीवशरीरकेणमया ॥ रं ॥

ರಾಮಾನುಜಾಚಾರ್ಯರು ಅದು ಫಲಾಣಿ ಕಡೆಯಿಂದ ಬಂತು, ಫಲಾಣಿ ತರಹ ಉಂಟೆಂಬದನ್ನು ವಿವರಿಸಿದ್ದಾಗ್ಯೂ, ಜೀವಶರೀರೀ (ಯಾದ ಸತ್) ಎಂದರೆ ಜೀವವೇ ಶರೀರವಾಗಿ ಉಳ್ಳ ಸತ್ ಎಂದು ಅಭಿಪ್ರಾಯಪಡುತಾರೆ.

जीवाख्येनानिरुद्धात्मना अन्तर्यामिरूपेण ॥ रा. वे. ॥

ಮಾಧ್ವರು ಅದು ಬ್ರಹ್ಮದ ಅನಿರುದ್ಧವೆಂಬ ಅಂತರ್ಯಾಮಿ ರೂಪವೆಂದು ಹೇಳುತ್ತಾರೆ.



## ೨ನೇ ಸಂಗತಿಯ ಕುರಿತು.

॥ ६ ॥ एकैकस्यास्त्रिवृत्करणे एकैकस्याः प्राधान्यंद्वयोर्द्वयोर्गुणभावः एवं हि तेजोऽबन्नानां पृथङ्नामप्रत्ययलाभः स्यात् तेजइदमिमा आपोऽन्नमिदमितिच पृथङ्नामप्रत्ययलाभे देवतानां सम्यग्व्यवहारस्य प्रसिद्धिः प्रयोजनंस्यात् ।

प्रथममेकैकां देवतां द्विधाद्विधाविभज्य

ಪ್ರಸ್ತುತ ತೇಜೋಬನ್ನಗಳಲ್ಲಿ ಪ್ರತಿಒಂದನ್ನು ತ್ರಿವೃತ್ ಮಾಡಿದ ಪಕ್ಷದಲ್ಲಿ ಆ ಪ್ರೈಕಿ ಒಂದೊಂದಕ್ಕೆ ಪ್ರಾಧಾನ್ಯ, ಮಿಕ್ಕ ಎರಡು ಪದಾರ್ಥಗಳಿಗೆ ಅಮುಖ್ಯತೆ ಸಹ ಉಂಟಾಗುತ್ತದೆ; ಎಂದರೆ (ಈ ಕೆಳಗೆ ವಿವರಿಸಿರುವಂತೆ) ಪ್ರಥಮತಃ ಒಂದೊಂದು ದೇವತೆಯನ್ನು ೨-೨ ಪಾಲು ಮಾಡಿ, ಪು

पुनरेकैकं भागं द्विधाद्विधाकृत्वा तदितर भागयोर्निक्षिप्य त्रिवृत्करणं विवक्षितमित्याह एकैकस्या इति ॥ आ. ॥

एवमीक्षित्वा सेयंदेवते मास्तिस्रो देवता अनेनैव यथोक्तेनैव जीवेन सूर्यबिम्बवदन्तः प्रविश्य वैराजं पिण्डं प्रथमं, देवादीनाञ्च पिण्डानत्नुप्रविश्य यथासंकल्पमेव नामरूपेऽव्याकरोदसौनामायमिदं रूपइति ॥ ॥ शं ॥

ನಹ ಆ ಪೈಕಿ ಒಂದೊಂದು ಅಂಶವನ್ನು ಅರೆವಾಶಿ ಪ್ರಕಾರ ವಿಭಾಗಿಸಿ, ಈ ಅರೆವಾಶಿಗಳನ್ನು ಮಿಕ್ಕವುಗಳ ಸಂಗಡ ಬೆರಸಿದರೆ, ಮೂರು ಮೂರು ಅಂಶಗಳೂ ಒಟ್ಟು ಶೇರಿ ತೇಜೋಬನ್ನಗಳಿಗೆ ಬೇರೆ ಬೇರೆಯಾಗಿ ಫಲಾಣೆ ವಸ್ತು ತೇಜಸ್, ಫಲಾಣೇದು ಜಲ, ಫಲಾಣೇದು ಅನ್ನ (ಪೃಥ್ವಿ) ಎಂಬದಾಗಿ ನಾಮ ನಿಶ್ಚಯವು ದೊರೆಯುವದಲ್ಲದೆ, ವ್ಯವಹಾರಕ್ಕೆ ಆ ದೇವತೆಗಳ ಪ್ರಸಿದ್ಧಿಯು ಚನ್ನಾಗಿ ಉಂಟಾಗುತ್ತದೆ ಎಂದು ಯೋಚಿಸಿ, ಆ (ಸತ್) ದೇವತೆಯು ಜೀವರೂಪದಿಂದ ತಾನೇ ಸೂರ್ಯಬಿಂಬದಂತೆ ಆ ಮೂರು ದೇವತೆಗಳಲ್ಲಿಯೂ ಪ್ರವೇಶಿಸಿ, ಪ್ರಥಮತಃ ವಿರಾಟ್ ಪಿಂಡವನ್ನೂ, ಅನಂತರ ದೇವತಾದಿಗಳ ಪಿಂಡಗಳಲ್ಲಿ ಪ್ರವೇಶಿಸಿ ತಾನು ಸಂಕಲ್ಪಿಸಿದಂತೆ ನಾಮರೂಪಗಳನ್ನು ಎಂದರೆ ಫಲಾಣೆ ವಸ್ತುವಿಗೆ ಫಲಾಣೆ ಹೆಸರು, ಫಲಾಣೆರೂಪ ಎಂಬದಾಗಿ ಸ್ಪಷ್ಟಪಡಿಸಿತೆಂದು ಶಂಕರಾಚಾರ್ಯರು ವಿವರಿಸುತ್ತಾರೆ.

| | | | | | | | |
|---|---|---|---|---|---|---|---|
| ತೇಜಸ್ | ತೇಜಸ್ ॥ | | ಜಲ | ಜಲ ॥ | | ಪೃಥ್ವಿ | ಪೃಥ್ವಿ ॥ |
| | ಜಲ । | | | ತೇಜಸ್ । | | | ತೇಜಸ್ । |
| | ಪೃಥ್ವಿ । | | | ಪೃಥ್ವಿ । | | | ಜಲ । |
| | ೧ | | | ೧ | | | ೧ |

सासदेवेत्युक्ताइयंतेजोबन्नसृष्टी विष्णवाख्यादेवताऐक्षत । × । अहंताइमास्तिस्रः तेजोबन्नाख्यदेवताः । साभिमन्यमानाइति प्राह्यं । अनेनजीवाख्येनानिरुद्धात्मनाऽनुप्रविश्य नामरूपे शब्दात्मकार्थात्मक जगतीकरवाणि कुर्यामित्यैक्षतेत्यन्वयः । नाम-

ಮಾಧ್ವರು ಪ್ರಸ್ತುತ ತ್ರಿವೃತ್ಕರಣ ಸಂದರ್ಭದಲ್ಲಿ ಮೊದಲು ಬ್ರಹ್ಮವೆಂದುಹೇಳಿದ ಸತ್‌ಗೆ ವಿಷ್ಣುವೆಂದು ಹೇಳುತ್ತಾರೆ. ಅವನು ಈ ಜೀವನೆಂದು ಕರೆಯಲ್ಪಡುವ ಅನಿರುದ್ಧ ರೂಪದಿಂದ ಆಯಾ ಅಭಿಮಾನಿಗಳ ಸಹಿತವಾದ ತೇಜೋಬನ್ನಗಳಲ್ಲಿ ಪ್ರವೇ

रूपानर्माणार्थं तासांमध्ये एकैकां तदभिमन्यमानतेजःप्रभृतिषु एकैकश्च त्रिवृतं त्रिवृतं करवाणि तिसृभ्योदेवताभ्यः तिसृभ्यो तेजोऽबन्नेभ्यश्चक्रमात् त्रीन् चेतनांशान् त्रीन् जडांशां श्चोद्धृत्यांशषट्कं मिश्रीकृत्य एकं तेज आख्यं अबाख्यं पृथिव्याख्यं च मिश्री भूतवस्तुत्रयं करवाणीति चै क्षतेत्यर्थः। × । देवताः अभिमन्यमानसहिता इति योज्यं॥ नामरूपे देवदानवमानवादीनां इन्द्राग्न्यादि नामानि तत्तच्छरीरादि रूपशब्दितवस्तूनिचव्याकरोत् ॥ × ॥ अत्रायंक्रमः । पूर्वं लक्ष्म्यादीन् तदभिमन्यमानं तेजःप्रभृति सहिताननुप्रविश्यतत्तदंशैस्त्रिवृतमेकैकं कृत्वातेभ्य इन्द्रादिनामरूपाण्यकरोत् ॥ तानपिसाभिमन्यमानान् तेजःप्रभृति देवतांशैरनुप्रविश्यतेषामंशान् मिश्रीकृत्यतेभ्य अभिमन्यमानसहिताग्न्यादि नामरूपाण्यकरोत् ॥ पुनरग्न्यादिषु सर्वत्रतेजोबन्नदेवताननुगतानकरोदिति । एवमग्न्यादयः सर्वे भावाः साक्षात्परंपरयावा तेजोऽबन्नकार्याणीत्युक्तं । सर्वेषां नामरूपेऽपितेजोऽबन्नाद्यभिमानि लक्ष्म्याद्युद्भवरूपत्वात्तदधीने इति चोक्तं ॥ रा. ॥

सेयं सदाख्यादेवतैक्षत । × । तासां देवतानां मध्ये त्रिवृतं त्रिवृतमन्योन्यप्रविष्टां करवाणीति चैक्षत । × । वे. ॥

ಶಿಸಿ ನಾಮರೂಪವೆಂದರೆ— ಶಬ್ದಾತ್ಮಕ ಮತ್ತು ಅರ್ಥಾತ್ಮಕವಾದ ಜಗತ್ತನ್ನುಂಟು ಮಾಡಬೇಕೆಂತಲೂ,

ಆ ಗೋಸ್ಕರ ಆ ಪೈಕಿ ಪ್ರತಿ ಒಂದನ್ನು ಅದರ ಅಭಿಮಾನಿದೇವತೆಯು ಸಮೇತ ತ್ರಿವೃತ್ ಮಾಡುವಗೋಸ್ಕರ ಅವುಗಳಿಂದೆಲ್ಲ ತೇಜೋಬನ್ನಗಳೆಂಬ ಮೂರು ಜಡಾಂಶಗಳನ್ನೂ ಅವುಗಳ ಅಭಿಮಾನಿಗಳಾದ ಶ್ರೀ, ಪ್ರಾಣ, ರುದ್ರರೆಂಬ ಮೂರು ಚೇತನಾಂಶಗಳನ್ನೂ ಎತ್ತಿ ತೆಗದು ಈ ಆರು ಅಂಶಗಳನ್ನು ಒಟ್ಟು ಬೆರಸಿ ಒಂದು ತೇಜಸ್, ಒಂದು ಜಲ, ಒಂದು ಪೃಥ್ವಿ ಎಂದು ಹೆಸರುಗಳುಳ್ಳ ಮೂರು ಭೂತಗಳನ್ನು ನಿರ್ಮಿಸಬೇಕೆಂತಲೂ,

ಯೋಚಿಸಿ ನಾಮರೂಪಗಳೆಂದರೆ— ದೇವತೆಗಳು, ದಾನವರು, ಮನುಷ್ಯರು, ಇಂದ್ರ, ಅಗ್ನಿ ಮೊದಲಾದ ಹೆಸರುಗಳು; ಮತ್ತು ರೂಪಗಳೆಂದು ಹೇಳುವ ಆಯಾ ಹೆಸರುಗಳಿಗೆ ತಕ್ಕ ಶರೀರಾದಿ ಪದಾರ್ಥಗಳನ್ನು ಸಹಾ ಕೆಳಗೆ ವಿವರಿಸಿದ ಕ್ರಮದಲ್ಲಿ ವಿಸ್ತರಿಸಿದನೆಂದು ಹೇಳುತ್ತಾರೆ. ಆ ಕ್ರಮ ಯಾವದೆಂದರೆ: —

(೧). ಪ್ರಥಮತಃ ತೇಜೋಬನ್ನಯುಕ್ತರಾದ ಶ್ರೀ, ಪ್ರಾಣ, ರುದ್ರ, ಈ ಮೂರು ದೇವತೆಗಳಲ್ಲಿಯೂ ಪ್ರವೇಶಿಸಿ ಆಯಾ ಅಂಶಗಳನ್ನು ಪ್ರತಿ ಒಂದಕ್ಕೂ ಬೆರಸಿ ತ್ರಿವೃತ್ ಮಾಡಿ ಅವುಗಳಿಂದ ಇಂದ್ರಾದಿ ನಾಮರೂಪಗಳನ್ನುಂಟುಮಾಡಿದನು.

(೨). ಅಭಿಮಾನಿಗಳ ಸಹಿತವಾದ ಅವುಗಳಿಗೇನೆ ತೇಜಸ್ ಮೊದಲಾದ ದೇವತಾಂಶಗಳನ್ನು ಸೇರಿಸಿ ಅವುಗಳನ್ನೊಟ್ಟು ಬೆರಸಿ ಅವುಗಳಿಂದ ಅಭಿಮನ್ಯಗಳಾದ ಜಡ ಪದಾರ್ಥಗಳ ಸಹಿತವಾಗಿ ಅಗ್ನ್ಯಾದಿ ನಾಮರೂಪಗಳನ್ನುಂಟುಮಾಡಿದನು.

(೩). ಪುನಹ ಆ ತೇಜೋಬನ್ನ ದೇವತೆಗಳನ್ನು ಅಗ್ನ್ಯಾದಿಗಳಲ್ಲೆಲ್ಲ ಅನುಗತರಾಗಿರುವಂತೆ ಮಾಡಿದನು.

ಹೀಗೆ ಅಗ್ನಿ ಮೊದಲಾದ ವಸ್ತುಗಳೆಲ್ಲ ಸಾಕ್ಷಾತ್ ಆಗಿ (ಸೀದಾ) ಆಗಲೀ ಪರಂಪರೆಯಿಂದಾಗಲೀ ತೇಜೋಬನ್ನಕಾರ್ಯಗಳೆಂದು ಹೇಳಿದ್ದಾಗಿರುತ್ತದೆ. ಸಕಲ ವಸ್ತುಗಳ ಹೆಸರುಗಳು ಮತ್ತು ರೂಪಗಳು ಕೂಡಾ ತೇಜೋಬನ್ನಗಳ ಅಭಿಮಾನಿಗಳಾದ ಲಕ್ಷ್ಮೀ ಮೊದಲಾದ ದೇವತೆಗಳಿಂದ ಉತ್ಪನ್ನವಾದವುಗಳಾಗಿರುವ ಪ್ರಯುಕ್ತ ಅವುಗಳು ಆ ದೇವತೆಗಳ ಅಧೀನವಾಗಿವೆ ಎಂದು ಹೇಳಿದ್ದಾಗಿರುತ್ತದೆ ಎಂದು ಹೇಳುತ್ತಾರೆ.

ಕೆಳಗೆ ಬರೆದ ಲಿಖ್ಯಾಚಾರವು ಪ್ರಸ್ತುತ ಇಂದ್ರಾದಿಗಳ ಸೃಷ್ಟಿಕ್ರಮವನ್ನು ಸ್ಪಷ್ಟಪಡಿಸುವದಕ್ಕೆ ಸಹಾಯವಾಗಬಹುದೆಂದು ತಿಳಿಯುತ್ತೇನೆ.

| | | | | | | | | |
|---|---|---|---|---|---|---|---|---|
| ತೇಜಸ್ (ಶ್ರೀ) ೧ | ತೇಜಸ್ ‖ ಲಕ್ಷ್ಮೀ ‖ | ೧ | ಜಲ (ಪ್ರಾಣ) ೨ | ಜಲ ‖ ಪ್ರಾಣ ‖ | ೧ | ಪೃಥ್ವಿ (ರುದ್ರ) ೩ | ಪೃಥ್ವಿ ‖ ರುದ್ರ ‖ | ೧ |
| | ಜಲ \| ಪ್ರಾಣ \| | ॥ | | ತೇಜಸ್ \| ಶ್ರೀ \| | ॥ | | ತೇಜಸ್ \| ಶ್ರೀ \| | ॥ |
| | ಅನ್ನ \| ರುದ್ರ \| | ॥ | | ಅನ್ನ \| ರುದ್ರ \| | ॥ | | ಜಲ \| ಪ್ರಾಣ \| | ॥ |
| | | ೨ | | | ೨ | | | ೨ |

ಹಾಗಲ್ಲದೆ ೩—೩, ೩—೩, ೩—೩ ಈ ರೀತಿ ಹಿಸೆಗಳನ್ನು ಮಾಡಿದ ಪಕ್ಷದಲ್ಲಿ ತೇಜೋಬನ್ನಗಳೆಲ್ಲ ನಾಶವಾಗದಿದ್ದರೂ, ಶಂಕರಾಚಾರ್ಯರು ಹೇಳುವ ಪ್ರಕಾರ ಫಲಾಣೇದು ತೇಜಸ್, ಫಲಾಣೇದು ಜಲ, ಫಲಾಣೇದು ಪೃಥ್ವಿ ಎಂಬ ವಿವೇಕ ಶಿಕ್ಕದೆ ಹೋಗಬಹುದು. ಈ ಸಂಗತಿ ಹೇಗೆ ಇದ್ದರೂ, ಯಾವ್ಯಾವ ಗುಂಪಿನಿಂದ ಯಾವ್ಯಾವ ದೇವತಾದಿಗಳು ಸೃಷ್ಟಿಸಲ್ಪಟ್ಟರೆಂಬದು ಮೇಲಿನ ವ್ಯಾಖ್ಯಾನದಿಂದ ಸ್ಪಷ್ಟವಾಗುವದಿಲ್ಲ.

(೫). ಈಗ ಈ ಪ್ರಪಂಚವು ಮೇಲೆ ಹೇಳಿದ ರೀತಿ ವಿಸ್ತಾರವಾದದ್ದಾದ್ದರಿಂದ ಅವುಗಳಲ್ಲಿರುವ ಅಗ್ನ್ಯಾದಿಗಳಿಗೆ ಅಗ್ನಿತ್ವ ಮೊದಲಾದವುಗಳಿಲ್ಲ. ತೇಜೋಬನ್ನಗಳ ಮೂರು ರೂಪಗಳು, ಎಂದರೆ ರಕ್ತ ಸ್ವೇತ ಕೃಷ್ಣವರ್ಣಗಳು, ಇವುಗಳೇ ಸತ್ಯವಾದವುಗಳು ಎಂದು ಹೇಳೋಣಾಗುತ್ತದೆ. ಮತ್ತು ಪ್ರಸಿದ್ಧವಾದ ವಾಯು ಅಂತರಿಕ್ಷ ಇವೆರಡರ ಪ್ರಸಕ್ತಿಯು ಈ ಪಾಠದಲ್ಲಿರುವದಿಲ್ಲ. ಈ ವಿಷಯವಾಗಿ—

(८—११) रूपवद्द्रव्ये स्पर्शसदर्शनात् । कथं? तेजसितावद्रूपवति शब्दस्पर्शयोरपिउपलम्भाद्वाय्वन्तरिक्षयोस्तत्र स्पर्शशब्दगुणवतोस्सद्भावोऽनुमीयते । तथाऽबन्नयोरूपवतोः रसगन्धान्तर्भाव इतिरूपवतां त्रयाणां तेजोऽबन्नानां त्रिवृत्करणप्रदर्शनेन सर्वंतदन्तर्भूतं सद्विकारत्वात्त्रीण्येव रूपाणीतिज्ञातं मन्यते श्रुतिः ॥

न हिमूर्ते रूपवद्द्रव्यं प्रत्याख्यायवाय्वाकाशयोस्तद्गुणयोर्गन्धरसयोर्वाग्रहणमस्ति । अथवारूपवतामपि त्रिवृत्करणं प्रदर्शनार्थमेवमन्यते श्रुतिः । यथातु त्रिवृत्कृते त्रीण्येवरूपाणीत्येवसत्यंतथापञ्चीकरणेपि समानोन्याय इति । अतः सर्वस्यसद्विकारत्वात् सतोविज्ञानेन सर्वमिदं विज्ञातं स्यात् सदेकमेवाद्वितीयं सत्यमिति सिद्धमेव भवति । तदेकस्मिन् सतिज्ञाते सर्वमिदं ज्ञातं भवतीतिसूक्तम् ॥ शं ॥

ಶಂಕರಾಚಾರ್ಯರು ರೂಪ ಉಳ್ಳ ದ್ರವ್ಯದಲ್ಲಿ ಸ್ಪರ್ಶಗುಣವು ಕಂಡುಬರುತ್ತದೆ. ಹೇಗಂದರೆ—ರೂಪ ಉಳ್ಳ ತೇಜಸ್ಸಿನಲ್ಲಿ ಶಬ್ದ ಸ್ಪರ್ಶ ಇವೆರಡೂ ತೋರುವದರಿಂದ ಸ್ಪರ್ಶ ಮತ್ತು ಶಬ್ದ ಗುಣಗಳುಳ್ಳ ವಾಯು ಅಂತರಿಕ್ಷ ಇವೆರಡೂ ಅದರಲ್ಲಡಗಿರುವದು ಅನ್ವಯವಾಗುತ್ತದೆ. ಹಾಗೆಯೇ ರೂಪಗಳುಳ್ಳ ಜಲ ಮತ್ತು ಪೃಥ್ವಿಗಳಲ್ಲಿ ರಸ ಗಂಧ ಇವೆರಡು ಗುಣಗಳೂ ಇವೆ. ಆದ್ದರಿಂದ ರೂಪಯುಕ್ತವಾದ ತೇಜೋಬನ್ನಗಳನ್ನು ತ್ರಿವೃತ್ ಮಾಡಿದ್ದನ್ನು ತೋರಿಸಿದರೆ ಎಲ್ಲವೂ ಅದರಲ್ಲಿ ಅಡಗುತ್ತದೆ. ಯಾಕಂದರೆ ಅವುಗಳೆಲ್ಲ ಸತ್‌ನ ವಿಕಾರಗಳೇ ಆಗಿರುತ್ತವೆ. ಆದ್ದರಿಂದ ಮೂರೇ ರೂಪಗಳೆಂದು ತಿಳಿದುಬಂದದ್ದು ಎಂದು ಶ್ರುತಿಯು ಅಭಿಪ್ರಾಯಪಡುತ್ತದೆ ಎಂತಲೂ,

ರೂಪಯುಕ್ತವಾದ ಶರೀರ ಉಳ್ಳ ದ್ರವ್ಯವನ್ನು ಬಿಟ್ಟು ವಾಯು ಆಕಾಶಗಳಿಗಾಗಲೀ, ಅವುಗಳ ಗುಣಗಳಾದ ಶಬ್ದ ಸ್ಪರ್ಶಗಳಿಗಾಗಲೀ, ಅಥವಾ ಗಂಧ ರಸಗಳಿಗಾಗಲೀ, ಗ್ರಹಣವಿಲ್ಲ. ಹಾಗಲ್ಲವಾದರೆ—ರೂಪ ಉಳ್ಳ ವಸ್ತುಗಳ ತ್ರಿವೃತ್ಕರಣವನ್ನು ಹೇಳಿದ್ದು ದೃಷ್ಟಾಂತ ತೋರಿಸುವ ಬಗ್ಗೆ ಮಾತ್ರ

ವೇ ಎಂದು ಶ್ರುತಿಯು ಅಭಿಪ್ರಾಯಪಡುತ್ತದೆ. ತ್ರಿವೃತ್ ಮಾಡಿದರೆ ಮೂರೇ ರೂಪಗಳೆಂಬದು ಹೇಗೆ ಸತ್ಯವೋ ಹಾಗೆಯೇ ಪಂಚೀಕರಣ ಮಾಡಿದರೂ ನ್ಯಾಯ ಒಂದೇ; ಆದ್ದರಿಂದ ಸರ್ವವೂ ಸದ್ವಿಕಾರಗಳಾಗಿರುವ ಪ್ರಯುಕ್ತ ಸತ್ ಒಂದನ್ನು ತಿಳಿದರೆ ಈ ಪ್ರಪಂಚವೆಲ್ಲ ತಿಳಿದುಬರುತ್ತದೆ. ಸತ್ ಒಂದೇ ಅದ್ವಿತೀಯ ಮತ್ತು ಸತ್ಯವಾದದ್ದೆಂತಲೇ ಸಾಪನೆಯಾಗುತ್ತದೆ. ಆದ್ದರಿಂದ ಅದೊಂದನ್ನು ತಿಳಿದರೆ ಇದೆಲ್ಲ ತಿಳಿದು ಬರುವದೆಂದು ಹೇಳಿದ್ದು ಸರಿಯಾಗಿರುತ್ತದೆಂತಲೂ ಹೇಳುತ್ತಾರೆ.

तेष्वेवतेजोऽबन्नेषु अग्न्याद्यवस्था नाशकसामग्री सन्निधाने अग्नित्वावस्थाऽपेता भवति । अवस्थान्तरं प्रादुर्भवति । अतः तेजोऽबन्नैरेवाग्नित्वाद्यवस्थालक्षणो विकारोऽग्न्यादि नामधेयञ्चवाक्पूर्वकव्यवहारसिद्धये तेजोऽबन्नैरेवस्पृश्यते । अतः तेजोऽबन्नस्वरूपाण्येवाग्निरितिसत्यमित्यर्थः ॥ २ ॥

ರಾಮಾನುಜಾಚಾರ್ಯರು ಮೇಲೆ ಹೇಳಿದ ತೇಜೋಬನ್ನಗಳಲ್ಲಿ ಅಗ್ನಿ ಮೊದಲಾದ ಅವಸ್ಥೆಗಳ ನಾಶಕ್ಕೆ ಬೇಕಾದ ಸಾಹಿತ್ಯ ಇರುವ ಪಕ್ಷದಲ್ಲಿ ಅಗ್ನಿತ್ವಾವಸ್ಥೆಯು ಹೋಗಿ ಬೇರೆ ಅವಸ್ಥೆಯು ಉಂಟಾಗುವ ಕಾರಣ ತೇಜೋಬನ್ನಗಳಿಂದಲೇ ಅಗ್ನಿತ್ವ ಮೊದಲಾದ ತರಹದ ವಿಕಾರ ಮತ್ತು ಅಗ್ನಿ ಮೊದಲಾದ ಹೆಸರುಗಳು ವಾಕ್‌ಪುರಃಸರವಾಗಿ ವ್ಯವಹಾರ ಸಿದ್ಧಿಯಾಗುವಗೋಸ್ಕರ ಉಂಟಾಗಿ ಅವುಗಳಿಂದಲೇ ಆಧರಿಸಲ್ಪಟ್ಟಿದೆ. ಆದ್ದರಿಂದ ಅಗ್ನಿ ಎಂಬದು ತೇಜೋಬನ್ನಗಳ ಸ್ವರೂಪವೇ ಎಂಬದು ಸತ್ಯವೆಂದು ಅರ್ಥ ಎಂದು ಹೇಳುತ್ತಾರೆ.

यस्याग्निनाम्नोऽग्नौ वाचावागिन्द्रियेणारम्भणमुच्चारणंतन्नामधेयं विकारः जनिमत् अन्यत्रमुख्यं सत् अग्नौसांकेतिकं नत्वनादितः तस्यैवसिद्धं अतोऽमुख्यं । तर्हिकुत्र मुख्यमित्यत आहत्रीणीति । तेजोबन्नाख्यानि यानित्रीणि श्रीप्राणशिवाख्यमेतत्त्रयमेवाग्निनाम्नः सत्यंमुख्यवाच्यमित्यर्थः । एवमादित्यस्येत्यादि वाक्यत्रयस्यापि व्याख्या ध्येया ॥ २ ॥

ಮಾಧ್ವರಲ್ಲಿ ಒಬ್ಬರು—

ಯಾವ ಅಗ್ನಿ ಎಂದು ಹೇಳುವ ಅಗ್ನಿಯಲ್ಲಿ ವಾಗಿಂದ್ರಿಯದಿಂದ ಉಚ್ಚರಿಸಲ್ಪಡುವ ಅವನ ಹೆಸರು ಇದೆಯೋ ಅದು ವಿಕಾರ ಉತ್ಪತ್ತಿ ಉಳ್ಳದ್ದು. ಇತರರ ವಿಷಯದಲ್ಲಿ ಮುಖ್ಯವಾಗಿದ್ದುಕೊಂಡು ಅಗ್ನಿಯ ವಿಷಯದಲ್ಲಿ ಸಾಂಕೇತಿಕ(ಗುರ್ತ) ಮಾತ್ರವಾಗಿರುತ್ತದೆ. ಅದು ಅವಗೇನೇ ಅನಾದಿಕಾಲದಿಂದ ಬಂದಂಥಾ ಹೆಸರಲ್ಲ.

ಆದಕಾರಣ ಅವನ ಕುರಿತು ಅದು ಅಮುಖ್ಯವಾದದ್ದು. ಹಾಗಾದರೆ ಅದು ಯಾರಿಗೆ ಮುಖ್ಯವಾದದ್ದೆಂದರೆ—ತೇಜೋಬನ್ನಗಳೆಂಬ ಶ್ರೀ, ಪ್ರಾಣ, ಶಿವ ಎಂಬ ಈ ಮೂರು ಹೆಸರುಗಳೇ ಅಗ್ನಿ ಎಂಬವಗೆ ಮುಖ್ಯವಾದ ಹೆಸರು ಎಂದು ಅರ್ಥ ಎಂತಲೂ, ಮಿಕ್ಕ ಆದಿತ್ಯಾದಿಗಳ ವಿಷಯದಲ್ಲಿಯೂ ಇದೇ ರೀತಿ ಹೇಳಬೇಕೆಂತಲೂ,

एवं तेजोऽबन्नाधीनत्वात् अग्नेरग्नित्वं अग्निनामप्रवृत्तिनिमित्तभूत मत्तत्वरूपमग्नेः अपागात् मुख्यतो नास्ति किंतुलक्ष्म्यादीना मेवमुख्यतोऽस्ति । ततश्च अग्नेरग्निरिति नामधेयं वाचारंभणं सांकेतिकं । लक्ष्म्यादीनामेवान्यत्र व्यवहारार्थं समाकृष्टमितियावत् । अतः विकारः अमुख्यमित्यर्थः । × । तर्हिक्वतन्मुख्यत्वमित्यतआहत्रीणीति त्रीणिरूपाणीत्येवसत्यम् ॥ वे ॥

ಇನ್ನೊಬ್ಬರು—

ಹೀಗೆ ಅಗ್ನಿಗೆ ಅಗ್ನಿ ಎಂಬ ಹೆಸರು ಬರಲಿಕ್ಕೆ ಕಾರಣವಾದ ಭಕ್ಷಕರೂಪವಾದ ಅಗ್ನಿತ್ವವು ತೇಜೋಬನ್ನಾಧೀನವಾದ್ದರಿಂದ ಅವಗೆ ಮುಖ್ಯವಲ್ಲ. ಲಕ್ಷ್ಮ್ಯಾದಿಗಳಿಗೆ ಮುಖ್ಯವಾದಂಥಾದ್ದಾಗಿರುತ್ತದೆ. ಆದ್ದರಿಂದ ಅಗ್ನಿಯು ಆ ಹೆಸರು ಸಾಂಕೇತಿಕವಾದದ್ದು. ಲಕ್ಷ್ಮ್ಯಾದಿಗಳದ್ದನ್ನೇ ವ್ಯವಹಾರಕ್ಕೋಸ್ಕರ ಅಗ್ನಿಯಲ್ಲಿ ಎಳಕೊಂಡದ್ದು ಎಂದು ಫಲಿತಾರ್ಥ.—ಆದ್ದರಿಂದ ಅದು ವಿಕಾರ, ಅಮುಖ್ಯವೆಂದು ಅರ್ಥ. ಹಾಗಾದರೆ ಅದು ಯಾರಲ್ಲಿ ಮುಖ್ಯ ಎಂದರೆ ಮೂರು ರೂಪಗಳೆಂಬದೇ ಸತ್ಯ ಎಂದು ಸಹಾ ಹೇಳುತ್ತಾರೆ.

## II ನೇ ಪಾಠ

# ಪ್ರಾಣಿಗಳು ಹುಟ್ಟುವ ರೀತಿ

### ಯಾನೆ

# ಪಂಚಾಗ್ನಿವಿದ್ಯ.

(१) असौ वावलोको गौतमाग्निस्त स्यादित्य एव समिद्रश्मयो धूमोऽहरर्चिश्च न्द्रमा अङ्गारानक्षत्राणि विस्फुलिङ्गाः ॥ (५—४—१)

(೧) ಹೇ ಗೌತಮ! ಆ (ದ್ಯು) ಲೋಕವು ಅಗ್ನಿ, ಅದಕ್ಕೆ ಆದಿತ್ಯನೇ ಸಮಿತ್ (ಕಾಷ್ಟ), ಕಿರಣಗಳು ಹೊಗೆ, ಹಗಲು ಜ್ವಾಲೆ (ಉರಿ), ಚಂದ್ರನು ಕೆಂಡಗಳು, ನಕ್ಷತ್ರಗಳು ಕಿಡಿಗಳು.

तस्मिन्नेतस्मिन्नग्नौ देवाः श्रद्धां जुह्वति । तस्या आहुतेः सोमोराजासंभवति ॥ (५—४—२)

ಈ ಲಕ್ಷಣಗಳುಳ್ಳಂಥಾ ಆ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯನ್ನು ಹೋಮಿಸುತ್ತಾರೆ. ಆ ಆಹುತಿಯು ದೆಸೆಯಿಂದ ಸೋಮರಾಜನು ಹುಟ್ಟುತ್ತಾನೆ.

(२) पर्जन्यो वाव गौतमाग्निस्तस्य वायुरेवसमिदभ्रं धूमोविद्युदर्चिरशनिरङ्गारा ह्रादुनयो विस्फुलिंगाः ॥ (५—५—१)

(೨) ಹೇ ಗೌತಮ! ಪರ್ಜನ್ಯವು ಅಗ್ನಿ, ಅದಕ್ಕೆ ವಾಯುವೇ ಸಮಿತ್, ಅಭ್ರ(ಮೇಘ)ವು ಹೊಗೆ, ಮಿಂಚು ಜ್ವಾಲೆ, ಸಿಡಿಲು ಕೆಂಡಗಳು, ಗುಡುಗುಗಳು ಕಿಡಿಗಳು.

तस्मिन्नेतस्मिन्नग्नौ देवाः सोमꣳ राजानं जुह्वति । तस्या आहुतेर्वर्षꣳ सम्भवति ॥ (५—५—२)

ಈ ಲಕ್ಷಣಗಳುಳ್ಳಂಥಾ ಆ ಅಗ್ನಿಯಲ್ಲಿ ದೇವತೆಗಳು ಸೋಮರಾಜನನ್ನು ಹೋಮಿಸುತ್ತಾರೆ. ಆ ಆಹುತಿಯ ದೆಸೆಯಿಂದ ವೃಷ್ಟಿಯು ಉಂಟಾಗುತ್ತದೆ.

(३) पृथिवीवाव गौतमाग्निस्तस्याः संवत्सरएव समिदाकाशो धूमो रात्रिरर्चिर्दि

(೩) ಹೇ ಗೌತಮ! ಪೃಥ್ವಿಯು ಅಗ್ನಿ, ಅದಕ್ಕೆ ಸಂವತ್ಸರವೇ ಸಮಿತ್, ಆಕಾ

| | |
|---|---|
| शोऽङ्गारा अवान्तरदिशो विस्फुलिङ्गाः ॥ (५—६—१) | ಶ ಹೊಗೆ, ರಾತ್ರಿ ಜ್ವಾಲೆ, ದಿಕ್ಕುಗಳು ಕೆಂಡಗಳು, ವಿದಿಕ್ಕುಗಳು ಕಿಡಿಗಳು. |
| तस्मिन्नेतस्मिन्नग्नौ देवा वर्षं जुह्वति । तस्या आहुतेरन्नं संभवति (५–६–२) | ಇಂಥಾ ಆ ಅಗ್ನಿಯಲ್ಲಿ ದೇವತೆಗಳು ವೃಷ್ಟಿಯನ್ನು ಹೋಮಿಸುತ್ತಾರೆ. ಆ |

ಆಹುತಿಯ ದೆಸೆಯಿಂದ ಅನ್ನವು ಉಂಟಾಗುತ್ತದೆ.

| | |
|---|---|
| (४) पुरुषो वाव गौतमाग्निस्तस्य वा गेवसमिन्प्राणो धूमो जिह्वाऽर्चिश्चक्षुरङ्गाराः श्रोत्रं विस्फुलिङ्गाः ॥ (५—७—१) | (೪) ಹೇ ಗೌತಮ! ಪುರುಷನು ಅ ಗ್ನಿ, ಅದಕ್ಕೆ ವಾಗಿಂದ್ರಿಯವೇ ಸಮಿತ್, ಪ್ರಾಣವು ಹೊಗೆ, ನಾಲಿಗೆ ಜ್ವಾಲೆ, ಕಣ್ಣು |

ಗಳು ಕೆಂಡಗಳು, ಕಿವಿಗಳು ಕಿಡಿಗಳು.

| | |
|---|---|
| तस्मिन्नेतस्मिन्नग्नौदेवा अन्नं जुह्वति । तस्या आहुतेरेतः सम्भवति ॥ (५–७–२) | ಈ ತರಹದ ಆ ಅಗ್ನಿಯಲ್ಲಿ ದೇವ ತೆಗಳು ಅನ್ನವನ್ನು ಹೋಮಿಸುತ್ತಾರೆ. |

ಆ ಆಹುತಿಯ ದೆಸೆಯಿಂದ ರೇತಸ್ ಉಂಟಾಗುತ್ತದೆ.

| | |
|---|---|
| (५) योषावाव गौतमाग्निस्तस्या उप स्थ एव समिद्यदुपमन्त्रयते सधूमो योनि रर्चिर्यदन्तः करोति तेऽङ्गारा अभिनन्दा विस्फुलिंग्गाः ॥ (५–८–१) | (೫) ಹೇಗೌತಮ! ಸ್ತ್ರೀಯು ಅಗ್ನಿ. * * * |
| तस्मिन्नेतस्मिन्नग्नौदेवारेतो जुह्वति । त स्या आहुतेर्गर्भः सम्भवति ॥ (५–८–२) | ಈ ಲಕ್ಷಣಗಳುಳ್ಳ ಆ ಅಗ್ನಿಯಲ್ಲಿ ದೇ ವತೆಗಳು ರೇತಸ್ಸನ್ನು ಹೋಮಿಸುತ್ತಾರೆ. |

ಆ ಆಹುತಿಯ ದೆಸೆಯಿಂದ ಗರ್ಭವು ಉಂಟಾಗುತ್ತದೆ.

| | |
|---|---|
| (६) इतितुपञ्चम्या माहुतावापः पु रुषवचसोभवन्तीति । सउल्बावृतो गर्भोद शमासानन्तः शयित्वा यावद्वाऽथजायते ॥ (५–९–१) | (೬) ಈ ರೀತಿ ಐದನೇ ಆಹುತಿಯ ಲ್ಲಿ ಜಲವು ಪುರುಷನೆಂದು ಕರೆಯಲ್ಪ ಡುತ್ತದೆಂದು ಹೇಳುವದು. ಆ ಗರ್ಭ ವು ಜರಾಯುವಿನಿಂದ ಮುಚ್ಚಿಕೊಂಡು |
| सजातो यावदायुषं जीवति । तंप्रेतं दिष्टमितोऽग्नय एवहरन्ति । यतएवेतो यतः | ೧೦ ತಿಂಗಳು ಅಥವಾ ಅಗತ್ಯ ಉಳ್ಳ ಷ್ಟು ಕಾಲ ಪರ್ಯಂತರ ತಾಯಿಯ ಉ |

**सम्भूतो भवति ॥** (५–१–२)          ದರದಲ್ಲಿ ಮಲಗಿಕೊಂಡಿದ್ದು ಅನಂತರ ಹುಟ್ಟುತ್ತದೆ. ಹಾಗೆ ಹುಟ್ಟಿದವನು ಆಯುಸ್ ಇರುವ ತನಕ ಬದುಕಿ ಕೊಂಡಿರುತ್ತಾನೆ. ಸತ್ತನಂತರ ಆತ ಎಲ್ಲಿಂದ ಇಲ್ಲಿಗೆ ಬಂದಿದ್ದನೋ, ಎಲ್ಲಿಂದ ಉತ್ಪನ್ನನಾದನೋ ನೇಮಕ ಇರುವ ಆ ಅಗ್ನಿಯುಗೋಸ್ಕರವಾಗಿಯೇ ಆತನನ್ನು (ಅವನ ಸ್ನೇಹಿತರು) ಒಯ್ಯುತ್ತಾರೆ.

## IIನೇ ಪಾಠದ ವ್ಯಾಖ್ಯಾನಸಂಗ್ರಹ.



(೧) ಈ ಪಾಠದಲ್ಲಿ ಮತ್ತು ಮುಂದೆ ಬರುವ Xನೇ ಪಾಠದ ೫ನೇಯಿಂದ ೮ನೇ ವರೇಗಿನ ಶ್ರುತಿಗಳಲ್ಲಿ ಹೇಳಿರುವದೆಲ್ಲ ಇದರ ಉಪೋದ್ಘಾತದಲ್ಲಿ ಹೇಳಿದಂತೆ ಪ್ರವಾಹಣನೆಂಬ ಅರಸನು ಉದ್ದಾಲಕರಿಗೆ ಉಪದೇಶಿಸಿದ ಸಂಗತಿಗಳಾಗಿರುತ್ತವೆ. ಈ ಪಾಠದಲ್ಲಿ ಪ್ರಾಣಿಗಳು ಜನನಕ್ಕೆ ಬರುವ ಕ್ರಮವನ್ನು ಮಾತ್ರ ಹೇಳೋಣಾಗಿ ಇದೆ. Xನೇ ಪಾಠದಲ್ಲಿ ಅವರು ಮೃತರಾದ ತರುವಾಯ ಅವರ ಗತಿ ಏನಾಗುತ್ತದೆಂಬದನ್ನು ವಿವರಿಸೋಣಾಗುತ್ತದೆ.

ಈ ಪಾಠದಲ್ಲಿ ೧ನೇ ಪ್ರಾಣಿಗಳ ಉತ್ಪತ್ತಿಗೆ ಬೀಜವಾಗಿರುವ ಶ್ರದ್ಧಾ ಎಂದು ಕರೆಯಲ್ಪಡುವ ಜಲರೂಪವಾದ ವಸ್ತುವಿಗೆ ಆ ಹೆಸರು ಏಕೆಬಂತು? ೨ನೇ ಅದನ್ನು ಅಗ್ನಿಗಳೆಂದು ವರ್ಣಿಸಲ್ಪಟ್ಟಿರುವ ದ್ಯು (ಸ್ವರ್ಗ) ಲೋಕಾದಿಗಳಲ್ಲಿ ಹೋಮಿಸುವ ದೇವತೆಗಳೆಂಬವರು ಯಾರು? (೫ನೇ) ೧ನೇ ಶ್ರುತಿಯಲ್ಲಿ ಹೇಳಿದ ಸೋಮರಾಜನೆಂದರೆ ಎಂಥಾದ್ದು? ಎಂಬ ಸಂಗತಿಗಳು ನಾವು ಮುಖ್ಯವಾಗಿ ವಿಚಾರಿಸತಕ್ಕವುಗಳಾಗಿರುತ್ತವೆ.

---

### ೧ನೇ ಸಂಗತಿಯ ಕುರಿತು.



(१) अग्निहोत्राहुतिपरिणामावस्थाः          ಶಂಕರಾಚಾರ್ಯರು ಅಗ್ನಿ ಹೋತ್ರ

याः सूक्ष्मा आपः श्रद्धाभाविताः श्रद्धाउच्यन्ते । (५—४—१—२)

नत्वाप एव केवलाः सोमादि कार्यमारभन्ते । न चापोऽत्रिवृत्कृताः सन्तीति । त्रिवृत्कृतत्वे विशेषसंज्ञालाभोदृष्टः पृथिवीयमिमा आपोऽयमग्निरित्यन्यतमबाहुल्यानिमित्तः । तस्मात्समुदितान्येव भूतानि अप्बाहुल्यात् कर्मसमवायीनि सोमादिकार्यारंमकाण्याप इत्युच्यन्ते । दृश्यते च द्रवबाहुल्यं सोमवृष्ट्यन्नरेतोदेहेषु । बहुद्रवं शरीरं यद्यपि पार्थिवम् ॥ ५—८—१—२ ॥ शं ॥

ದಲ್ಲಿ ಕೊಡಲ್ಪಟ್ಟ ಆಹುತಿಯು ಪರಿಣಾಮಾವಸ್ಥೆಯಲ್ಲಿರುವಂಥಾ ಶ್ರದ್ಧೆಯು ಭಾವನೆಯುಳ್ಳ ಸೂಕ್ಷ್ಮಜಲವಾದ್ದರಿಂದ ಅದಕ್ಕೆ ಶ್ರದ್ಧಾ ಎಂದು ಹೆಸರು ಬಂದಿದೆ.

ಬರೀ ಜಲದಿಂದ ಸೋಮ (ಚಂದ್ರ) ಮೊದಲಾದ ಕಾರ್ಯವು (ವಸ್ತು) ಪರಿಣಮಿಸುವದಿಲ್ಲ. ಮತ್ತು ತ್ರಿವೃತ್ ಮಾಡಲ್ಪಡದಿರುವ ಶುದ್ಧ ಜಲವು ಇಲ್ಲವೂ ಇಲ್ಲ. ತ್ರಿವೃತ್ ಮಾಡಲ್ಪಟ್ಟರೆ ಫಲಾಣೇ ವಸ್ತು ಪೃಥ್ವಿ, ಫಲಾಣೇದು ಜಲ, ಫಲಾಣೇದು ಅಗ್ನಿ ಎಂಬ ಬೇರೆ ಬೇರೆ ಸಂಜ್ಞೆಗಳು ಲಾಭವಾಗುವದು ಕಂಡುಬಂದಿದೆ. ಅದಕ್ಕೆ ಆಯಾ ವಸ್ತುಗಳಲ್ಲಿರುವ ಅಧಿಕ ಪದಾರ್ಥವೇ ಹೇತುವಾಗಿರುತ್ತದೆ. ಆದಕಾರಣ ಸಮ್ಮಿಳಿತವಾದ ಭೂತ (ತೇಜೋಬನ್ನ) ಗಳೇ ಜಲಬಾಹುಳ್ಯದ ದೆಸೆಯಿಂದ ಕ್ರಿಯಾಶಕ್ತಿಯನ್ನು ಪಡದು ಸೋಮಾದಿ ಕಾರ್ಯತ್ವೇನ ಪರಿಣಮಿಸುವದರಿಂದ ಅವುಗಳಿಗೆ ಜಲವೆಂದು ಹೇಳೋಣಾಗುತ್ತದೆ. ಸೋಮ (ಚಂದ್ರ), ವೃಷ್ಟಿ (ಮಳೆ), ಅನ್ನ (ಧಾನ್ಯಾದಿಗಳು). ರೇತಸ್, ಇವುಗಳ ಸಮ್ಮಂಧವಾದ ದೇಹದಲ್ಲಿ ದ್ರವ ಹೆಚ್ಚಾಗಿರುವದು ಪ್ರತ್ಯಕ್ಷ ತೋರುತ್ತದೆ. ಈ ಶರೀರವು ಪಾರ್ಥಿಸಮ್ಮಂಧವಾದದ್ದಾದರೂ ಬಹುದ್ರವ ಉಳ್ಳದ್ದೇ ಎಂದು ಹೇಳುತ್ತಾರೆ.

आत्मधर्मभूतबुद्धिविशेषलक्षण श्रद्धाया होतव्यत्वासंभवात् श्रद्धाशब्देनापएवोच्यन्ते । इन्द्रियाणामभावे भूतसूक्ष्माणां जीवं परिष्वज्यद्युलोकगमनासंभवादिन्द्रियाणां होतृत्वमुपपद्यते । द्युलोकादिप्रापककर्मणां इन्द्रियाधीनत्वाद्वातथोक्ति रितिद्रष्टव्यं ॥

(५—४—१—२.) ॥ रं ॥

ರಾಮಾನುಜಾಚಾರ್ಯರು ಆತ್ಮನ ಧರ್ಮವಾದ ಬುದ್ಧಿವಿಶೇಷಲಕ್ಷಣವಾದ ಶ್ರದ್ಧೆಯನ್ನು ಹೋಮಿಸಲಿಕ್ಕೆ ಸಾಧ್ಯವಿಲ್ಲದ ಪ್ರಯುಕ್ತ (ಇಲ್ಲಿ) ಶ್ರದ್ಧಾಶಬ್ದದಿಂದ ಜಲವೇ ಹೇಳಲ್ಪಡುತ್ತದೆ. ಇಂದ್ರಿಯುಗಳಿಲ್ಲದ ಪಕ್ಷದಲ್ಲಿ ಕೇವಲ ಭೂತಸೂಕ್ಷ್ಮಗಳಿಗೆ ಜೀವನನ್ನಂಟಿಕೊಂಡು ದ್ಯುಲೋಕಕ್ಕೆ ಹೋಗಲಿಕ್ಕೆ ಸಾಧ್ಯವಿಲ್ಲದಕಾರಣ ಇಂದ್ರಿಯಗಳಿಗೆ ಹೋತೃತ್ವವು (ಯಜ್ಞ

ಕರ್ತೃತ್ವವು) ಕೊಡುತ್ತದೆ. ಅಥವಾ ದ್ಯುಲೋಕಾದಿಗಳನ್ನು ಸೇರಿಸುವ ಕರ್ಮಗಳು ಇಂದ್ರಿಯಗಳ ಅಧೀನವಾಗಿರುವದರಿಂದ ಹಾಗೆ ಹೇಳಿದ್ದೆಂದು ತಿಳಿಯಬೇಕೆಂದು ಹೇಳುತ್ತಾರೆ.

श्रद्धां श्रद्धापूर्वं यज्ञादि कर्तारं । श्रद्धोपलक्षिताबादि पञ्चभूतयुक्तं जीवमित्यर्थः॥ ॥ रा ॥
श्रद्धां श्रद्धयेष्टवन्तं उत्क्रान्तं यजमानं॥ ॥ वे ॥ (५–४–१–२)

ಮಾಧ್ವರು ಅದು ಶ್ರದ್ಧಾಪೂರ್ವಕ ಯಜ್ಞಾದಿ ಕರ್ಮಗಳನ್ನು ಮಾಡಿದಂಥಾ ಶ್ರದ್ಧೆ ಎಂಬ ಮನೋವ್ಯಾಪಾರ ಉಪಲಕ್ಷಿತವಾದ ಜಲ ಮೊದಲಾದ ಪಂಚಭೂತಯುಕ್ತನಾಗಿರುವ ಗತಿಸಿದ ಜೀವನೆಂದು ಹೇಳುತ್ತಾರೆ.

---

## (೨ನೇ) ಮೇಲೆ ಹೇಳಿದ ದೇವತೆಗಳೆಂಬವರು.

देवाः यजमान प्राणाग्न्यादिरूपाः ॥शं॥
इन्द्रियाणि ॥ रं ॥ तत्वाभिमानिनः ॥ रा ॥

ಯಜಮಾನ, ಪ್ರಾಣಗಳು (ಇಂದ್ರಿಯಗಳು) ಮತ್ತು ಅಗ್ನಿ ಮೊದಲಾದವುಗಳು ಸಹಾ ಆಗಿರುತ್ತವೆಂದು ಶಂಕರಾಚಾರ್ಯರು, ಇಂದ್ರಿಯಗಳೆಂದು ರಾಮಾನುಜಾಚಾರ್ಯರು, ತತ್ವಾಭಿಮಾನಿದೇವತೆಗಳೆಂದು ಮಾಧ್ವರು ಸಹಾ ಹೇಳುತ್ತಾರೆ.

(೨) ಈ ಪಾಠದ ೧ನೇ ಶ್ರುತಿಯಲ್ಲಿ ಹೇಳುವ ಸೋಮರಾಜನೆಂದರೆ,—

चन्द्रसमीपस्थं तत्सदृशं शरीरं ॥ आ ॥

ಚಂದ್ರನ ಸಮೀಪ ಅವನ ಹಾಗೆ ಇರುವ ಶರೀರವೆಂದು ಆನಂದಗಿರಿ ಆಚಾರ್ಯರು,

स्वर्गभोगयोग्य दिव्यदेहयुक्तो भवतीत्यर्थः ॥ रं ॥

ಸ್ವರ್ಗಸುಖ ಅನುಭವಿಸಲಿಕ್ಕೆ ಯೋಗ್ಯವಾದ ದಿವ್ಯಶರೀರ ಉಳ್ಳವನೆಂದು ರಂಗರಾಮಾನುಜಾಚಾರ್ಯರು ಸಹ ಹೇಳುತ್ತಾರೆ.

सोमराजानं प्रापयन्ति देवा इत्यर्थः॥रा॥
सोमलोकान्तर्गतो भवति ॥ वे ॥

ಮಾಧ್ವರು ದೇವತೆಗಳು ಪ್ರಸ್ತುತ ಆಹುತಿಯನ್ನು ಚಂದ್ರನ ಬಳಿಗೆ ತಲ್ಪಿಸುತ್ತಾರೆ. ಅಥವಾ (ಈ ಜೀವನು) ಚಂದ್ರನ ರಾಜ್ಯದೊಳಗೆ ಪ್ರವೇಶಿಸುತ್ತಾನೆಂದು ಹೇಳುತ್ತಾರೆ.

(೩) ಇನ್ನು ಈ ಪಾಠದಲ್ಲಿ ಹೇಳುವ ಅಗ್ನಿಗಳೆಂಬ ದ್ಯುಲೋಕಾದಿಗಳಲ್ಲಿಯೂ ಆಯಾ ಅಗ್ನಿಗಳಿಗೆ ಸಮ್ಬಂಧಪಟ್ಟ ಕಾಷ್ಟ ಮೊದಲಾದವುಗಳೆಂಬ ಪದಾರ್ಥಗಳಲ್ಲಿಯೂ ಧ್ಯಾನಿಸುವಗೋಸ್ಕರ ಕೆಳಗೆ ಬರದ ಯಂತ್ರದಲ್ಲಿ ತೋರಿಸಿರುವಂತೆ ಭಗವನ್ನಾನುರೂಪಗಳನ್ನು ಮಾಧ್ವರು ಹೇಳುತ್ತಾರೆ. ಇವುಗಳ ವರ್ಣಗಳು VIನೇ ಪಾಠದಲ್ಲಿ ಹೇಳೋಣಾಗುತ್ತದೆ.

| ಅಗ್ನಿಗಳು. | ಮುಖ್ಯ ಭಗವದ್ರೂಪಗಳು. | ಒಳಭಗವದ್ರೂಪಗಳು | | | | |
|---|---|---|---|---|---|---|
| | | ಸಮಿತ್. | ಧೂಮ. | ಅರ್ಚಿ. | ಅಂಗಾರ. | ವಿಸ್ಫುಲಿಂಗ. |
| ದ್ಯುಲೋಕ | ನಾರಾಯಣ | ನಾರಾಯಣ | ವಾಸುದೇವ | ಸಂಕರ್ಷಣ | ಪ್ರದ್ಯುಮ್ನ | ಅನಿರುದ್ಧ |
| ಪರ್ಜನ್ಯ | ವಾಸುದೇವ | ನಾರಾಯಣ | ವಾಸುದೇವ | ಸಂಕರ್ಷಣ | ಪ್ರದ್ಯುಮ್ನ | ಅನಿರುದ್ಧ |
| ಪೃಥ್ವಿ | ಸಂಕರ್ಷಣ | ನಾರಾಯಣ | ವಾಸುದೇವ | ಸಂಕರ್ಷಣ | ಪ್ರದ್ಯುಮ್ನ | ಅನಿರುದ್ಧ |
| ಪುರುಷ | ಪ್ರದ್ಯುಮ್ನ | ನಾರಾಯಣ | ವಾಸುದೇವ | ಸಂಕರ್ಷಣ | ಪ್ರದ್ಯುಮ್ನ | ಅನಿರುದ್ಧ |
| ಸ್ತ್ರೀ | ಅನಿರುದ್ಧ | ನಾರಾಯಣ | ವಾಸುದೇವ | ಸಂಕರ್ಷಣ | ಪ್ರದ್ಯುಮ್ನ | ಅನಿರುದ್ಧ |

# III ನೇ ಪಾಠ

# ಪುರುಷನ ಶರೀರವರ್ಣನೆ

## ಯಾನೆ

# ಗಾಯತ್ರೀವಿದ್ಯಾ



(१) गायत्रीवा इदꣳ सर्वं (१)भूतं यदिदं किञ्च ॥ (२)वाग्वै गायत्री । वाग्वा इदꣳ सर्वं भूतं गायति च त्रायते च ॥(३--१२--१)

(೧) ಈ ಸಕಲ (೧) ಪ್ರಾಣಿಗಳು ಮತ್ತು ಇಲ್ಲಿರುವದೆ (ಸ್ಥಾವರಜಂಗಮಗಳೆಲ್ಲ) ಗಾಯತ್ರಿಯೇ. (೨) ಶಬ್ದವೂ ಗಾಯತ್ರಿಯೇ. ಅದು ಈ ಎಲ್ಲಾ ಪ್ರಾಣಿಸಮೂಹಕ್ಕೂ ತಿಳಿಸಿಕೊಡುತ್ತದೆ. ಮತ್ತು ಅದನ್ನು ರಕ್ಷಿಸುತ್ತದೆ.

(२) या वै सा गायत्री यं वाव सा येयं (३)पृथिव्यस्याꣳ हीदꣳ सर्वं भूतं प्रतिष्ठितमेतामेव नातिशीयते ॥ (३—१२—२)

(೨) ಗಾಯತ್ರಿಯು ಯಾವದೋ ಈ (೩)ಪೃಥ್ವಿಯೂ ಅದೇ. ಇದರಲ್ಲಿ ಸಕಲ ಪ್ರಾಣಿಗಳು ಸ್ಥಾಪಿಸಲ್ಪಟ್ಟಿವೆ. (ಆದಕಾರಣ) ಅವುಗಳು ಇದನ್ನು ಮಿಕ್ಕು ಹೋಗುವದಿಲ್ಲ.

(३) या वै सा पृथिवीयं वाव सा यदिदमस्मिन्पुरुषे (४)शरीरमस्मिन्हीमे प्राणाः प्रतिष्ठिता एतदेव नातिशीयन्ते ॥ (३-१२-३)

(೩) ಆ ಪೃಥ್ವಿಯು ಯಾವದೋ ಈ ಪುರುಷನ (೪)ಶರೀರವೂ ಅದೇ. ಇದರಲ್ಲಿ ಈ ಪ್ರಾಣಗಳು ಸ್ಥಾಪಿಸಲ್ಪಟ್ಟಿವೆ. (ಆದಕಾರಣ) ಅವುಗಳು ಇದನ್ನು ಮಿಕ್ಕು ಹೋಗುವದಿಲ್ಲ.

(४) यद्वैतत्पुरुषे शरीरमिदं वाव तद्यदिदमस्मिन्नन्तः पुरुषे (५)हृदयमस्मिन्हीमे (६)प्राणाः प्रतिष्ठिता एतदेव नातिशीयन्ते ॥ (३—१२—४)

(೪) ಮತ್ತು ಈ ಪುರುಷನ ಶರೀರ ಯಾವದೋ ಅವನೊಳಗಿರುವ ಈ (೫)ಹೃದಯಪುಂಡರೀಕವೂ ಅದೇ. ಇದರಲ್ಲಿ ಈ (೬)ಪ್ರಾಣಗಳು ಸ್ಥಾಪಿಸಲ್ಪಟ್ಟಿವೆ. ಆದಕಾರಣ ಅವುಗಳು ಇದನ್ನು ಮಿಕ್ಕು ಹೋಗುವದಿಲ್ಲ.

(५) सैषा चतुष्पदा षड्विधा गायत्री

(೫) ಆ ಗಾಯತ್ರಿಯು ೪ ಪಾದಗ

तदेतदृचाऽभ्यनूक्तं ॥ *तावानस्य महिमा ततोज्यायाःश्चपुरुषः पादोऽस्य सर्वा भूतानि त्रिपादस्यामृतं दिवीति ॥
(३—१२—५—६)

ಳುಳ್ಳದ್ದು, ಮತ್ತು ೬ ವಿಧವಾಗಿದೆ. ಈ ಸಂಗತಿ ಈ ಋಗ್ಮಂತ್ರದಲ್ಲಿ ಹೇಳಲಾಗಿದೆ. "ಈ ಪುರುಷನ ಮಹಿಮೆಯು ಅಷ್ಟು ವಿಸ್ತಾರವಾದದ್ದು, ಅವನು ಅದಕ್ಕಿಂತಲೂ ದೊಡ್ಡದಾದವನು. ಸಕಲ ಪ್ರಾಣಿಗಳು ಅವನ ಒಂದು ಪಾದ, ಮಿಕ್ಕ ಶಾಶ್ವತವಾದ ಅವನ ೩ ಪಾದಗಳು ದ್ಯುಲೋಕದಲ್ಲಿರುತ್ತವೆ" ಎಂಬುದಾಗಿರುತ್ತದೆ.

(६) यद्वैतद्ब्रह्मेतीदं वाव तद्योऽयं बहिर्धा पुरुषादाकाशो योवैस बहिर्धा पुरुषादाकाशः ॥ (३—१२—७)

(೬) ಬ್ರಹ್ಮವೆಂದು ಯಾವದು ಹೇಳಲ್ಪಡುತ್ತದೋ ಅದು ಪುರುಷನ (ಸುತ್ತಲೂ) ಹೊರಗಿರುವ ಆಕಾಶವೇ. ಪುರುಷನ ಹೊರಗೆ ಯಾವ ಆಕಾಶವಿದೆಯೋ,

(७) अयंवावसयोऽयमन्तः पुरुष आकाशो योवैसोऽन्तः पुरुष आकाशः ॥
(३—१२—८)

(೭) ಪುರುಷನೊಳಗಿರುವ ಆಕಾಶವೂ ಅದೇ. ಪುರುಷನೊಳಗಿರುವ ಆಕಾಶ ಯಾವದೋ,

(८) अयंवावसयोऽयमन्तर्हृदय आकाशस्तदेतत्पूर्णमप्रवर्ति पूर्णामप्रवर्तिनीः श्रियं लभते यएवंवेद ॥ (३—१२—९)

(೮) ಅವನ ಹೃದಯದೊಳಗಿರುವ ಆಕಾಶವೂ ಅದೇ. ಅದು ಪೂರ್ಣ ಮತ್ತು ಪ್ರವರ್ತಿಯಾ (ವಿಕಾರವಾ) ಗದ್ದು. ಯಾರು ಹೀಗೆ ತಿಳಿಯುತ್ತಾನೋ ಅವನು ಪೂರ್ಣ ಮತ್ತು ಪ್ರವರ್ತಿಯಾಗದ (ಶಾಶ್ವತವಾದ) ಐಶ್ವರ್ಯವನ್ನು ಪಡೆಯುವನು.

(९) तस्यहवा एतस्यहृदयस्य पञ्च देवसुषयः । सयोऽस्य प्राङ्सुषिः सप्राणस्तच्चक्षुः स आदित्यः । तदेतत्तेजोऽन्नाद्य मित्युपासीत । तेजस्व्यन्नादो भवति यएवंवेद ॥
(३—१३—१).

(೯) ಪ್ರಸಿದ್ಧವಾದ ಈ ಹೃದಯಕ್ಕೆ ೫ ದೇವತಾದ್ವಾರಗಳಿವೆ. ಅದರ ಪೂರ್ವದಿಕ್ಕಿನ (ಎದುರುಕಡೆ) ದ್ವಾರವು ಪ್ರಾಣ (ವಾಯು), ಅದು ಕಣ್ಣು, ಅದು ಆದಿತ್ಯ. ಆದಕಾರಣ ಅದು ತೇಜಸ್ ಮತ್ತು ಆರೋ

---

* एतवानस्य महिमातो ज्यायां श्च पूरुषः ॥ पादोऽस्य विश्वा भूतानि त्रिपादस्यामृतं दिवि ॥ ಋಕ್ (೧೦—೯೦—೩).

ಗ್ಯವೆಂದು ಉಪಾಸಿಸಬೇಕು. ಈ ರೀತಿ ತಿಳದವನು ತೇಜಸ್ವಿ ಮತ್ತು ಆರೋಗ್ಯ ಉಳ್ಳವನಾಗುತ್ತಾನೆ.

(१०) अथयोऽस्यदक्षिणः सुषिः स व्यानस्तच्छोत्रं॰सचन्द्रमास्तदेतच्छ्रीश्चयश श्चेत्युपासीत । श्रीमान्यशस्वी भवति यए वंवेद ॥ (३–१३–२).

(೧೦) ಅನಂತರ ಅದರ ದಕ್ಷಿಣ (ಬಲ) ಕಡೆ ಯಾವ ದ್ವಾರವಿದೆಯೋ ಅದು ವ್ಯಾನ (ವಾಯು), ಅದು ಕಿವಿ, ಅದು ಚಂದ್ರ. ಆದಕಾರಣ ಅದು ಐಶ್ವರ್ಯ ಮತ್ತು ಯಶಸ್ಸು ಎಂದು ಉಪಾಸಿಸ ಬೇಕು. ಈ ರೀತಿ ಯಾರು ತಿಳಿಯುತ್ತಾನೋ ಅವನು ಐಶ್ವರ್ಯವಂತನಾಗುತ್ತಾನೆ; ಮತ್ತು ಕೀರ್ತಿಯನ್ನು ಪಡೆಯುತ್ತಾನೆ.

(११) अथयोऽस्य प्रत्यङ् सुषिः सोऽपानः सावाक् सोऽग्निस्तदेतद् ब्रह्मवर्चसमन्नाद्यमित्युपासीत । ब्रह्मवर्चस्व्यन्नादो भवति यएवंवेद ॥ (३–१३–३.)

(೧೧) ಅನಂತರ ಅದರ ಪಶ್ಚಿಮಕಡೆ (ಬೆನ್ನುಕಡೆ) ಯಾವ ದ್ವಾರವಿದೆಯೋ ಅದು ಅಪಾನ (ವಾಯು), ಅದು ವಾಕ್, (ಇಂದ್ರಿಯ) ಅದು ಅಗ್ನಿ. ಆದಕಾರಣ ಅದು ಬ್ರಹ್ಮವರ್ಚಸ್ ಮತ್ತು ಆರೋಗ್ಯವೆಂದು ಉಪಾಸಿಸಬೇಕು. ಈ ರೀತಿ ಯಾರು ತಿಳಿಯುತ್ತಾನೋ ಅವನು ಬ್ರಹ್ಮವರ್ಚಸ್ವಿ ಮತ್ತು ಆರೋಗ್ಯ ಉಳ್ಳವನಾಗುತ್ತಾನೆ.

(१२) अथयोऽस्योदङ्सुषिः स समानस्तन्मनः स पर्जन्यः । तदेतत्कीर्तिश्चव्युष्टिश्चेत्युपासीत । कीर्तिमान् व्युष्टिमान् भवति यएवंवेद ॥ (३–१३–४.)

(೧೨) ಅನಂತರ ಅದರ ಉತ್ತರ (ಎಡ) ಕಡೆಯ ಯಾವ ದ್ವಾರವಿದೆಯೋ ಅದು ಸಮಾನ (ವಾಯು), ಅದು ಮನಸ್ಸು, ಅದು ಪರ್ಜನ್ಯ. ಆದಕಾರಣ ಅದು ಕೀರ್ತಿ ಮತ್ತು ಕಾಂತಿ ಎಂದು ಉಪಾಸಿಸಬೇಕು. ಹೀಗೆ ಯಾರು ತಿಳಿಯುತ್ತಾನೋ ಅವನು ಕೀರ್ತಿ ಮತ್ತು ಕಾಂತಿಯುಳ್ಳವನಾಗುತ್ತಾನೆ.

(१३) अथयोऽस्योर्ध्वः सुषिः सउदानः सवायुः स आकाशस्तदेतदोजश्चमहश्चेत्युपासीतौजस्वीमहस्वान् भवति यएवंवेद ॥ (३–१३–५.)

(೧೩) ಅನಂತರ ಅದರ ಮೇಲ್ಗಡೆ (ಹೃದಯದ ತಲೆಯಲ್ಲಿ) ಯಾವ ದ್ವಾರವಿದೆಯೋ ಅದು ಉದಾನ (ವಾಯು), ಅದು (ಮುಖ್ಯ) ವಾಯು, ಅದು ಆಕಾಶ. ಆದಕಾರಣ ಅದು ಓಜಸ್ (ಕಾಂತಿ) ಮತ್ತು ಮಹತ್ ಎಂದು ಉಪಾಸಿಸಬೇಕು.

ಹೀಗೆ ಯಾರು ತಿಳಿಯುತ್ತಾನೋ ಅವನು ಓಜಸ್ವೀ ಮತ್ತು ಮಹಸ್ವಾನ್ (ಸಾಮರ್ಥ್ಯವಂತನು) ಆಗುತ್ತಾನೆ.

(१४) तेवाएतेपञ्चब्रह्मपुरुषाः स्वर्गस्य लोकस्य द्वारपाः । सयएतानेवं पञ्च ब्रह्मपुरुषान् स्वर्गस्य लोकस्य द्वारपान्वेदास्य कुलेवीरोजायते । प्रतिपद्यतेस्वर्गं लोकं यएतानेवं पञ्चब्रह्मपुरुषान् स्वर्गस्य लोकस्य द्वारपान्वेद ॥ (३–१३–६.)

(೧೪) ಇವರೇ ಸ್ವರ್ಗಲೋಕ (ಹೃದಯ ಪುಂಡರೀಕ) ದ ದ್ವಾರಗಳನ್ನು ಕಾಯುವ ಪ್ರಸಿದ್ಧರಾದ ಐದು ಮಂದಿ ಬ್ರಹ್ಮನ ಭಟರು. ಈ ರೀತಿ ಈ ಐವರನ್ನು ಸ್ವರ್ಗಲೋಕದ ಬಾಗಲುಗಳನ್ನು ಕಾಯುವ ಬ್ರಹ್ಮನ ಭಟರೆಂದು ಯಾರು ತಿಳಿಯುತ್ತಾನೋ ಅವನ ಕುಲದಲ್ಲಿ ವೀರನು ಜನಿಸುತ್ತಾನೆ. (ಮತ್ತು) ಹೀಗೆ ಯಾರು ಈ ಸ್ವರ್ಗಲೋಕದ ದ್ವಾರಪಾಲಕರಾದ ಐದು ಮಂದಿ ಬ್ರಹ್ಮನ ಕಡೇ ಭಟರನ್ನು ತಿಳಿಯುತ್ತಾನೋ ಅವನು ಸ್ವರ್ಗಲೋಕವನ್ನು ಪಡೆಯುತ್ತಾನೆ.

(१५) अथयदतः परोदिवोज्योतिर्दीप्यते विश्वतः पृष्ठेषु सर्वतः पृष्ठेष्वनुत्तमेषूत्तमेषु लोकेष्विदं वाव तद्यदिदमस्मिन्नन्तः पुरुषे ज्योतिस्तस्यैषादृष्टिर्यत्रैतदस्मिञ्छरीरे संस्पर्शेनोष्णिमानं विजानाति । तस्यैषा श्रुतिर्यत्रैतत्कर्णावपिगृह्य निनदमिव नदथुरिवाग्नेरिवज्वलत उपश्रृणोति । तदेतद् दृष्टञ्च श्रुतञ्चेत्युपासीत । चक्षुष्यः श्रुतो भवति यएवंवेद । यएवंवेद ॥ (३–१३–७).

(೧೫) ಅನಂತರ ಆ ದ್ಯುಲೋಕದ ಅತ್ತಕಡೆ ವಿಶ್ವದ ಪೃಷ್ಟಭಾಗಗಳಲ್ಲಿ ಸಕಲದರ ಪೃಷ್ಟಭಾಗಗಳಲ್ಲಿ ಅನುತ್ತಮವಾದಂಥಾ ಉತ್ತಮ (ಉತ್ತಮೋತ್ತಮ) ಲೋಕಗಳಲ್ಲಿ ಯಾವ ಜ್ಯೋತಿಯು ಪ್ರಕಾಶಿಸಿಕೊಂಡುಂಟೋ, ಈ ಪುರುಷನಲ್ಲಿರುವ ಜ್ಯೋತಿಯೂ ಅದೇ. ಯಾವಾಗಲಾದರೂ ಸ್ಪರ್ಶ ಮಾಡೋಣದರಿಂದ ಈ ಶರೀರದಲ್ಲಿ ಕಂಡುಬರುವ ಬಿಸಿಯು ಅದರ ಪ್ರತ್ಯಕ್ಷ ದರ್ಶನ (ಸಾಕ್ಷಾತ್ಕಾರ) ವಾಗಿರುತ್ತದೆ. ಮತ್ತು ಯಾವಾಗಲಾದರೂ ಈ ಕಿವಿಗಳನ್ನು ಮುಚ್ಚಿಕೊಂಡರೆ, ಭಂಡಿಯ ಶಬ್ದದಂತೆ, ಎತ್ತಿನ ಧ್ವನಿಯಂತೆ, ಜ್ವಲಿಸುವ ಬೆಂಕಿಯ ಘೋಷದಂತೆ ಕೇಳುವ ಶಬ್ದವೇ ಅದರ ಶ್ರವಣ. ಆದಕಾರಣ ಅದು ಕಂಡುಬಂತು ಮತ್ತು ಕೇಳಿತು ಎಂದು ಉಪಾಸಿಸಬೇಕು. ಯಾರು ಈ ರೀತಿ ತಿಳಿಯುತ್ತಾನೋ ಈ ರೀತಿ ತಿಳಿಯುತ್ತಾನೋ ಅವನು ದರ್ಶನೀಯ ಮತ್ತು ಪ್ರಖ್ಯಾತನಾಗುತ್ತಾನೆ.



## IIIನೇ ಪಾಠದ

# ವ್ಯಾಖ್ಯಾನಸಂಗ್ರಹ.



(೧) ಈ ಪಾಠದಲ್ಲಿ "ಕಪಿಲವರ್ಣದ ಗೋವು" ಎಂದು ಹೇಳುವದರ ಬದಲಾಗಿ ಜನರು ಅನೇಕ ಸಲ "ಕಪಿಲೆ" ಎಂದು ಮಾತ್ರ ಹೇಗೆ ಹೇಳುತ್ತಾರೋ, ಹಾಗೆಯೇ ಸಕಲ ಪ್ರಾಣಿಗಳೂ, ವಾಕ್, ಪೃಥ್ವಿ, ಶರೀರ, ಹೃದಯ, ಪ್ರಾಣಗಳು ಇವುಗಳೆಲ್ಲ ಗಾಯತ್ರಿಯೇ ಎಂದು ವರ್ಣಿಸೋಣಾಗುತ್ತದೆ. ಗಾಯತ್ರೀ ಶಬ್ದದಿಂದ ಇಲ್ಲಿ ಬ್ರಹ್ಮವನ್ನೇ ಹೇಳುವದು. ನಾವು ನಿತ್ಯಲೂ ಜಪಿಸುವ ಸವಿತೃದೇವತಾಕವಾದ ಮಂತ್ರಕ್ಕೂ ಆ ಹೆಸರಿರುವದರಿಂದ—

(१) सवितृद्वारकब्रह्मविद्यानन्तरं तद्देवताक गायत्रीद्वारेण तद्विद्योपदिश्यते ॥ ॥ आ ॥

ಸವಿತೃದ್ವಾರಕ ಬ್ರಹ್ಮವಿದ್ಯ (ಮಧುವಿದ್ಯ)ದ ನಂತರ ಆ (ಸವಿತೃ) ದೇವತಾಕವಾದ ಗಾಯತ್ರೀದ್ವಾರಾ ಬ್ರಹ್ಮವಿದ್ಯವು ಉಪದೇಶಿಸಲ್ಪಡುತ್ತದೆಂದು ಆನಂದಗಿರಿ ಆಚಾರ್ಯರು,

अत्र गायत्री शब्देन । × । ब्रह्मैवाभिधीयते ॥ रं ॥

ಇಲ್ಲಿ ಗಾಯತ್ರೀ ಶಬ್ದದಿಂದ ಬ್ರಹ್ಮವೇ ನಿರೂಪಿಸಲ್ಪಡುತ್ತದೆಂದು ರಾಮಾನುಜಾಚಾರ್ಯರು,

सूर्यान्तर्गतस्यहरेः सर्ववेदप्रतिपाद्यत्वेन प्रकृतस्य वेदमातृ गायत्रीनामार्थत्वेनोपास्तिमाह गायत्रीत्यादिना ॥ रा ॥
एवं आदित्यान्तर्गतस्य भगवतो वस्वादिसर्वदेवतोपास्यत्वादिरूपं महिमानंनिरूप्य इदानीं तत्प्रतिपादक गायत्रीनिष्ठस्य गायत्रीनाम्नो भगवतः षड्विधत्वादि रूपोमहिमानिरूप्यते ॥ वे ॥

ಈ ರೀತಿ (ಮಧುವಿದ್ಯದಲ್ಲಿ ಹೇಳಿದಂತೆ) ಆದಿತ್ಯಾಂತರ್ಗತನಾದ ಪರಮಾತ್ಮನು ವಸು ಮೊದಲಾದ ಸಕಲ ದೇವತೆಗಳಿಂದಲೂ ಉಪಾಸಿಸಲ್ಪಡುವ ಮಹಾತ್ಮೆ ಉಳ್ಳವನೆಂದು ಹೇಳಿ, ಈಗ ಆ ಸೂರ್ಯಾಂತರ್ಗತನಾದ ಹರಿಯು ಸಕಲ ವೇದ ಪ್ರತಿಪಾದ್ಯನಾಗಿರುವ ಕಾರಣ, ಪ್ರಕೃತ ಆ ವೇದಗಳಿಗೆಲ್ಲ ಮಾತೃಸ್ಥಾನವಾದ ಗಾಯತ್ರೀನಿಷ್ಟನಾಗಿರುವ ಗಾಯತ್ರೀ ಎಂದು ಹೆಸರುಳ್ಳ ಭಗವಂತನು ಆ ಗಾಯತ್ರೀ ಶಬ್ದಕ್ಕೆ ೬ ವಿಧ ಮೊದಲಾದ ತರಹದ ಮಹಾತ್ಮೆ ಉಳ್ಳವನೆಂದು ಉಪಾಸಿಸಬೇಕೆಂಬದಾಗಿ ನಿರೂಪಿಸೋಣಾಗುತ್ತದೆಂದು ಮಾಧ್ವರು,

ಸಹ ಹೇಳುತ್ತಾರೆ.

(೨) ಈಗ ಮೇಲೆ ಹೇಳಿದ ನಮ್ಮ ಮಂತ್ರರೂಪವಾದ ಗಾಯತ್ರೀ ವೃತ್ತದಲ್ಲಿ ೩ ಪಾದಗಳು, ಪಾದ ೧ಕ್ಕೆ ೮ರಂತೆ ಒಟ್ಟು ೨೪ ಅಕ್ಷರಗಳು ಸಹ ಇರುವ ಸಂಗತಿ ಅನೇಕರು ಬಲ್ಲಾದದ್ಧೇ. ವೇದದಲ್ಲಿ ೪ ಪಾದಗಳುಳ್ಳ ಆ ಹೆಸರಿನ ಛಂದಸ್ ಕೂಡಾ ಇರುವ ಹಾಗೆ §ತೋರುತ್ತದೆ. ಈ ಕಾರಣದಿಂದಲೂ, ಈ ಪಾಠದ ೪ನೇ ವರೆಗಿನ ಶ್ರುತಿಗಳಲ್ಲಿ ಮೇಲೆ ಹೇಳಿದಂತೆ ಪ್ರಾಣಿಗಳು, ಪೃಥ್ವಿ, ಶರೀರ, ಹೃದಯ, ಇವುಗಳು ಕೂಡಾ ಗಾಯತ್ರಿಯೇ ಎಂದು ಹೇಳಿ, ಅನಂತರದ ೬–೭–೮ನೇ ಶ್ರುತಿಗಳಲ್ಲಿ ಹೇಳುವ ೩ ವಿಧದ ಆಕಾಶಕ್ಕೆ ಸ್ಪಷ್ಟವಾಗಿ ಆ ಸಂಜ್ಞೆಮಾಡದಿರುವ ಕಾರಣ, ಈ ಪ್ರಾಣಿಗಳು, ಪೃಥ್ವಿ, ಶರೀರ, ಹೃದಯ ಸಹ, ಪ್ರಸ್ತುತ ಗಾಯತ್ರೀ ಎಂಬ ಬ್ರಹ್ಮದ ೪ ಪಾದಗಳೆಂತಲೂ, ಅದೇ ೪ನೇ ವರೇಗಿನ ಶ್ರುತಿಗಳಲ್ಲಿ ಹೇಳುವ ಇದರ *ಬುಡದಲ್ಲಿ ಕಾಣಿಸಿದ ೬ ಲಕ್ಷಣಗಳನ್ನು ಆ ಪಾದಗಳ ಸಂಖ್ಯೆವಾದ ೪ರಿಂದ ಗುಣಿಸಿದರೆ ೨೪ಕ್ಕೆ ಭರ್ತಿ ಆಗುವದರಿಂದ, ಬ್ರಹ್ಮವು ಗಾಯತ್ರೀವೃತ್ತಸದೃಶವಾದದ್ದೆಂದು ಸಹ ರಂಗರಾಮಾನುಜಾಚಾರ್ಯರು ಅಭಿಪ್ರಾಯಪಡುತ್ತಾರೆ. ಇನ್ನು ಮೇಲೆ ಹೇಳಿದ ೩ ತರಹದ ಆಕಾಶದ ವಿಷಯದಲ್ಲಿ ಈ ಆಚಾರ್ಯರು ಹೇಳುವದೇನೆಂದರೆ:—

(६–७–८) एवं ब्रह्मतुल्यबाह्याकाशाभिन्नपुरुषान्तर्गताकाशाभेदं हृदयाकाशस्योक्त्वा एतादृशमहिमशाली हृदयाकाश इति स्तौति । योवैसोन्तर्हृदयआकाशः । अन्तर्हृदयेवर्तमानो यः आकाशः अयंसः । तादृशमहिमशालीत्यर्थः । अनया च हृदयाकाशस्तुत्या चतुर्थपादत्वेनोक्तं हृदयं स्तुतं

ಈ ರೀತಿ ಬ್ರಹ್ಮಕ್ಕೆ ಸದೃಶವಾದ ಬಾಹ್ಯಾಕಾಶದಿಂದ ಭಿನ್ನವಲ್ಲದ ಪುರುಷನ (ಶರೀರದ) ಒಳಗಿರುವ ಆಕಾಶಕ್ಕೂ ಹೃದಯಾಕಾಶಕ್ಕೂ ಅಭೇದವನ್ನು ಹೇಳಿ, ಈ ಹೃದ್ಗತಾಕಾಶವು (೮ನೇ ಶ್ರುತಿಯಲ್ಲಿ ಹೇಳಿರುವ) ಪೂರ್ಣ ಮತ್ತು ಅಪ್ರವರ್ತಿ ಸ್ವಭಾವರೂಪವಾದ ಮಹಿಮೆಯುಳ್ಳದೆಂದು

§ इन्द्रःशचीपतिः । बलेनपीडितः । दुश्च्यवनो वृषा । समित्सुसासहिः ॥ २ ॥

* (೧) ವಾಗಿಂದ್ರಿಯದಿಂದಾಗುವ ಗಾನ (ಶಬ್ದ) ಕರ್ಮ; ಮತ್ತು (೨) ಆದರಿಂದಾಗುವ ತ್ರಾಣ (ರಕ್ಷಣ) ಕರ್ಮ. (೩) ಸರ್ವಭೂತ ಪ್ರತಿಷ್ಠಾತ್ವ. (೪) ಸರ್ವಭೂತಾನತಿವರ್ತಿತ್ವ (ಮಿಕ್ಕುಹೋಗದೇ ಇರೋಣ). (೫) ಸರ್ವಪ್ರಾಣಿ ಪ್ರಾಣಪ್ರತಿಷ್ಠಾತ್ವ. (೬) ಸರ್ವಪ್ರಾಣಾನತಿವರ್ತಿತ್ವ.

भवति॥ ॥

ಸ್ತುತಿಸೋಣಾಗುತ್ತದೆ. ಇದರಿಂದ ೪ನೇ ಪಾದವೆಂದು ಹೇಳಿದ ಹೃದಯವು ಸ್ತುತಿಸಲ್ಪಡುತ್ತದೆಂದು ಆಗಿರುತ್ತದೆ.

॥ ५ ॥ अस्यपुरुषनाम्नोहरेः सर्वाः स र्वाणि भूतानि जीवचेतनानि एकः पादः । अस्य त्रिपादमृतं पादत्रयं नारायणवासुदे ववैकुंठनामकं दिविद्योतमानतया । × । द्युशब्दिते श्वेतद्वीपानन्तासनवैकुंठनामके दिवि क्रमात्तिष्ठतीत्यर्थः ॥ रा ॥.

ಮಾಧ್ವರು ಪ್ರಸ್ತುತ ಗಾಯತ್ರೀ ಎಂದು ಹೇಳಲ್ಪಡುವಬ್ರಹ್ಮವು ಆ ಹೆಸರಿನ ವೃತ್ತದ ಅಕ್ಷರಗಳಿಗೆ ಸರಿಬೀಳುತ್ತದೆಂದು ತೋರಿಸಲಿಕ್ಕೆ ಸ್ಪಷ್ಟವಾಗಿ ಪ್ರಯತ್ನಿಸಿದ್ದು ತೋರುವದಿಲ ವಾದರೂ, ಮೇಲೆ ಹೇಳಿದ ಪ್ರಾಣಿ ಎಂದರೆ ಜೀವ ಚೇತನಗಳೆಲ್ಲ ಅದರ ೧ ಪಾದ, ಮಿಕ್ಕ ೩ ಪಾದಗಳು ದ್ಯುಶಬ್ದವಾಚ್ಯಗಳಾದ ಶ್ವೇತದ್ವೀಪಾನಂತಾಸನ ವೈಕುಂಠವೆಂಬ ಸ್ಥಳಗಳಲ್ಲಿ ಅವುಗಳ ಕ್ರಮದಂತೆ ಇರುವ ನಾರಾಯಣ, ವಾಸುದೇವ, ವೈಕುಂಠ ಎಂಬ ಹೆಸರುಗಳುಳ್ಳ ೩ ರೂಪಗಳು, ಈ ರೀತಿ ೪ ಪಾದಗಳು ಎಂದು ಸಹ ಹೇಳುತ್ತಾರೆ.

ಇನ್ನು ಮೇಲೆ ಹೇಳಿದ ಆಕಾಶದ ಕುರಿತು ಈ ಮತದವರು ಹೇಳುವದೇನಂದರೆ.

(६-७-८) प्रकारान्तरेण गायत्रीना म्नो हरेश्चतुष्पात्त्वमाह यद्वैतदिति । × । ए तद्गायत्र्याख्यं रूपं ब्रह्म सर्वगतरूपात्मकमि त्यर्थः । × । स एकःपादो गायत्रीनाम्न इत्य र्थः । × । पुरुषाज्जीवाद्बहिः शरीरहृदयाका शगतः आकाशनामाद्वितीयः पादः । × । जीवान्तःस्थिताकाशगतः स त्रितीयः पादः । × । जीवहृदयान्तर्वर्त्याकाशगतः । एवं चतुष्पात्त्वमिति ॥ रा ॥

೬ನೇ ಶ್ರುತಿಯಲ್ಲಿ "ಯದ್ವಾ" (ಅಥವಾ) ಎಂದು ಆರಂಭಿಸಿಕೊಂಡು ಇನ್ನೊಂದು ವಿಧವಾಗಿ ಗಾಯತ್ರೀನಾಮಕನಾದ ಹರಿಗೆ ೪ ಪಾದಗಳು ಹೇಳೋಣಾಗುತ್ತದೆ. ಅವು ಯಾವವೆಂದರೆ—

(೧.) ಸರ್ವಗತವಾದಂಥಾ ಗಾಯತ್ರೀ ಎಂಬ ಬ್ರಹ್ಮ ಎಂದರೆ ಈ ಶರೀರದ ಹೊರಗೂ ಒಳಗೂ ವ್ಯಾಪ್ತವಾಗಿರುವ ರೂಪವು ಒಂದು ಪಾದ.

तथाचेदं शरीरान्तर्बहिर्व्याप्तरूपं प्रथमं । × । जीवस्वरूपात् बहिर्धा बहिर्जडहृदये × × जीवस्य बाह्यहृदयगं रूपं द्वितीयं । × ।

(೨.) ಜೀವನ ಸ್ವರೂಪದ ಹೊರಗೆ ಈ ಶರೀರದೊಳಗೆ, ಜೀವದ ಹೊರಗಿನ ಜಡ ಹೃದಯದಲ್ಲಿರುವ ಆಕಾಶವೆಂದು ಕರೆ

त्रितीयं रूपमाह । × । जीवान्तर्व्याप्य सं स्थितः आकाशः । × । तुरीयं पादमाह × × जीवस्वरूपहृदिसंस्थितः आकाशः ॥ ३ ॥

ಯಲ್ಪಡುವ ರೂಪವು ಎರಡನೇ ಪಾದ. (೩) ಜೀವನೊಳಗಿರುವ ಆಕಾಶದಲ್ಲಿ ವ್ಯಾಪ್ತವಾಗಿರುವ ರೂಪವು ೩ನೇ ಪಾದ.

(೪) ಜೀವನಸ್ವರೂಪ ಹೃದಯಾಕಾಶದಲ್ಲಿರುವ ಆಕಾಶರೂಪವು ೪ನೇ ಪಾದ.

ಈ ರೀತಿ ನಾಲ್ಕು ಪಾದ (ಅಂಶ)ಗಳು ಎಂದು ಆಗಿರುತ್ತದೆ. ಇದರಿಂದ ಈ ಮತದವರ ಸಿದ್ಧಾಂತಪ್ರಕಾರ ಜಡಶರೀರ, ಜಡಹೃದಯ, ಜೀವಶರೀರ, ಜೀವಹೃದಯ, ಎಂದು ಈ ರೀತಿ ಜೋಡು ಜೋಡು ಶರೀರಗಳು ಮತ್ತು ಹೃದಯಗಳು ಸಹಾ ಇರುತ್ತವೆಂದು ತಿಳಿದುಬರುತ್ತದೆ. ಹಾಗಾದ ಪಕ್ಷದಲ್ಲಿ ಪ್ರಾಣೇಂದ್ರಿಯದೇವತೆಗಳು ಕೂಡಾ ಅವುಗಳಂತೆಯೇ ಇಚ್ಛಡಿಯಾಗಿದ್ದಾವೆಂದು ಹೇಳಬೇಕಾಗುತ್ತದೆ. ಈ ಸಂಗತಿ ಹೇಗೆ ಇದ್ದರೂ, ೫ನೇ ಶ್ರುತಿಯಲ್ಲಿ ಸಕಲ ಪ್ರಾಣಿಗಳೂ ಒಟ್ಟು ಪುರುಷನ ೧ ಪಾದ, ಅವನ ಮಿಕ್ಕ ೩ ಪಾದಗಳು ದ್ಯುಲೋಕದಲ್ಲಿರುತ್ತವೆಂದು ಸ್ಪಷ್ಟವಾಗಿ ಹೇಳಿರುವದರಿಂದಲೂ, ೪ನೇ ವರೆಗಿನ ಶ್ರುತಿಗಳಲ್ಲಿ ಹೇಳುವ ಪ್ರಾಣಿ ಮೊದಲಾದವುಗಳೆಲ್ಲ ಈ ಭೂಲೋಕಕ್ಕಲ್ಲದೆ ದ್ಯುಲೋಕಕ್ಕೆ ಸಮ್ಮಂಧಪಟ್ಟವುಗಳಲ್ಲದ್ದರಿಂದಲೂ, ರಾಮಾನುಜಾಚಾರ್ಯರು ಹೇಳುವಂತೆ ಪ್ರಾಣಿಗಳು, ಪೃಥ್ವಿ, ಶರೀರ, ಹೃದಯ, ಇವುಗಳೇ ಗಾಯತ್ರೀನಾಮಕ ಬ್ರಹ್ಮದ ೪ ಪಾದಗಳೆಂದು ಹೇಳಿದರೆ ಆಗಲೀ, ಅಥವಾ ಮಾಧ್ವರ ಅಭಿಪ್ರಾಯ*ಪ್ರಕಾರ "ಪ್ರಕಾರಾಂತರವಾಗಿ ಗಾಯತ್ರೀನಾಮಕ ಬ್ರಹ್ಮದ ೪ ಪಾದಗಳನ್ನು" ತಿಳಿಸಿಕೊಡುವದಕ್ಕೋಸ್ಕರ ೬–೭–೮ನೇ ಶ್ರುತಿಗಳಲ್ಲಿ ಹೇಳುವ ಆಕಾಶವನ್ನು ೩ ವಿಧವಾಗಿ ಹೇಳಿದ್ದೆಂತಾಗಲೀ, ಹೇಳಿದ ಪಕ್ಷದಲ್ಲಿ ಆ ಶ್ರುತಿಗಳಿಗೆ ೫ನೇ ವರೆಗಿನ ಶ್ರುತಿಗಳ ಸಮ್ಮಂಧ ತಪ್ಪಿಹೋಗುವದಲ್ಲದೆ, ನಮ್ಮ ಹೃದಯದೊಳಗಿನ ಆಕಾಶ (ಆ ಹೆಸರಿನ ಬ್ರಹ )ಕ್ಕೆ ಇರುವ ದ್ಯುಲೋಕ ಸಮ್ಮಂಧವು ತೋರಿಸಿದ ಹಾಗಾಗುವದಿಲ್ಲ. ಈ ಕಾರಣಗಳಿಂದ ಈ ಆಕಾಶವು ೫ನೇ ಶ್ರುತಿಯಲ್ಲಿ ಹೇಳುವ ದ್ಯುಲೋಕದಲ್ಲಿರುವ ಬ್ರಹ್ಮದ ೩ ಪಾದಗಳಿಗೆ ಸಾಂಕೇತಿಕವಾಗಿ ಹೇಳಿದ್ದೆಂದು *ತಿಳಿಯಬೇಕಾಗುತ್ತದೆ. ಆದ್ದರಿಂದಲೇ,

यद्वैतत् त्रिपादमृतं गायत्रीमुखेनोक्तं ब्र

ಶಂಕರಾಚಾರ್ಯರು ಗಾಯತ್ರೀದ್ವಾ

* ಪ್ರೊಫೆಸ್ಸರ್ ಡ್ಯೂಸನ್ (123).

ह्मोति इदं वाव तत् इदमेवतत् योयं प्रसि
द्धो बहिर्धा बहिः पुरुषादाकाशः भौतिकः।×।
अयंवावसः योयमन्तः पुरुषे शरीर आकाशः
। × । अयं वावसः योयमन्तर्हृदये पुंडरीक
आकाशः । कथमेकस्य सत आकाशस्य त्रि
धाभेद इति उच्यते । बाह्येन्द्रियविषये जा
गरितस्थाने नभसिदुःखबाहुळ्यं दृश्यते ।
अन्तःशरीरे स्वप्नावस्थानभूते मन्दतरं
दुःखं भवति स्वप्नान् पश्यतः । हृदयस्थाने
नभसि नकञ्चन कामं कामयते न क
ञ्चनस्वप्नं पश्यति । अतः सर्वदुःखनिवृ
त्तिरूपमाकाशं सुषुप्तस्यस्थानं । अतो युक्तं
एकस्यापित्रिधाभेदानुव्याख्यानं । बहिर्धा
पुरुषादारभ्याकाशस्यहृदये सङ्कोचकरणं चे
तःसमाधानस्थानस्तुतये । तदेतद् हार्दाका
शाख्यं ब्रह्म ॥ शं ॥

೧೪ ಶಾಶ್ವತವಾದ ತ್ರಿಪಾತ್ (ಮುಕ್ಕಾಲು ಪಾಲು) ಬ್ರಹ್ಮವೆಂದು ಯಾವದು ಹೇಳಲ್ಪಟ್ಟಿತೋ ಅದು ಪ್ರಸಿದ್ಧವಾದ ಪುರುಷನ (ಸುತ್ತಲೂ) ಹೊರಗಿರುವ ಭೂತಾಕಾಶವಾಗಿರುತ್ತದೆ. ಅವನ ಶರೀರದೊಳಗಿರುವ ಆಕಾಶವೂ ಅದೇ. ಅವನ ಹೃದಯ ಪುಂಡರೀಕದೊಳಗಿರುವದೂ ಅದೇಯಾಗಿರುತ್ತದೆ. ಹೀಗೆ ಆ ಆಕಾಶವು ಒಂದೇಯಾಗಿರುತ್ತಾ ಅದನ್ನು ಮೂರು ವಿಧವಾಗಿ ವಿಂಗಡಿಸಿದ್ದು ಹೇಗೆ? ಎಂದರೆ, ಚಕ್ಷುರಾದಿ ಬಾಹ್ಯೇಂದ್ರಿಯ ವಿಷಯಗಳಿಗೆ ಆಶ್ರಯಭೂತವಾದ ಜಾಗ್ರದವಸ್ಥೆಗೆ ಸಮ್ಮಂಧಪಟ್ಟ ಆಕಾಶದಲ್ಲಿ ದುಃಖಾತಿಶಯವು ಕಂಡುಬರುತ್ತದೆ. ಶರೀರದೊಳಗೆ ಸ್ವಪ್ನಕ್ಕೆ ಆಶ್ರಯಭೂತವಾಗಿರುವದರಲ್ಲಿ ಸ್ವಪ್ನಕಾಣುವವಗೆ ಸಂಭವಿಸುವ ದುಃಖಗಳು ಅದಕ್ಕಿಂತಲೂ ಕಡಿಮೆ. ಹೃದಯಾಕಾಶದಲ್ಲಿ ಅವಗೆ ಯಾವ ಅಪೇಕ್ಷೆಯೂ ಆಗುವದಿಲ್ಲ, ಯಾವ ಸ್ವಪ್ನವನ್ನೂ ಆತ ಕಾಣುವದಿಲ್ಲ. ಸುಷುಪ್ತಿ ಸ್ಥಳವಾದ ಆ ಆಕಾಶವು ಸರ್ವದುಃಖ ನಿವೃತ್ತಿರೂಪವಾದದ್ದು. ಆದಪ್ರಯುಕ್ತ ಒಂದೇ ಆಕಾಶವನ್ನು ಮೂರು ವಿಧವಾಗಿ ಹೇಳಿದ್ದಾಗಿರುತ್ತದೆ. ಪುರುಷನ ಹೊರಗಿರುವದನ್ನು ಮೊದಲುಮಾಡಿಕೊಂಡು ಹೃದಯದ ತನಕ ಆಕಾಶವನ್ನು ಸಂಕೋಚಮಾಡಿದ್ದು ಮನಸು ಎರಗಬೇಕಾದ ಸ್ಥಳವಾದ ಆ ಆಕಾಶವನ್ನು ಸ್ತುತಿಸುವಗೋಸ್ಕರವಾಗಿರುತ್ತದೆ. ಹೃದಯಾಕಾಶವೆಂದರೆ ಆ ಹೆಸರಿನ ಬ್ರಹ್ಮವೇ ಎಂದು ಹೇಳುತ್ತಾರೆಂದು ತೋರುತ್ತದೆ. ೧೫ನೇ ಶ್ರುತಿಯಲ್ಲಿ ಹೇಳಿರುವ ಜ್ಯೋತಿಯ ಕುರಿತು —

॥ १५ ॥ इदंवाव इदमेवतत् यदिद
मस्मिन्पुरुषेऽन्तर्मध्ये ज्योतिः । चक्षु श्रोत्र

ಶಂಕರಾಚಾರ್ಯರು ಅದು ಈ ಪುರುಷನೊಳಗೆ ಮಧ್ಯದಲ್ಲಿ ಯಾವ ಜ್ಯೋತಿ ಉಂ

प्राधेन लिंगेनोष्णिमाशब्देन वाऽवगम्यते। यत्त्वचास्पर्शरूपेण गृह्यतेतच्चक्षुषैव । दृढ प्रतीतिकरत्वात्त्वचोऽविनाभूतत्वाच्चरूपस्प र्शयोः ॥ शं ॥

ಟೋ ಅದೇ. ಈ ಸಂಗತಿ ಚಕ್ಷು ಶ್ರೋತ್ರಗಳಿಂದ ತಿಕ್ಕುವ ಲಿಂಗದಿಂ(ನಿದರ್ಶನದಿಂ)ದ ಅಥವಾ (೧೫ನೇ ಶ್ರುತಿಯಲ್ಲಿ ಪ್ರಯೋಗಿಸಲ್ಪಟ್ಟಿರುವ) "ಉಷ್ಣಿಮಾ"(ಬಿಸಿ) ಈ ಶಬ್ದದಿಂದ ತಿಳಿದುಬರುತ್ತದೆ. ಯಾವದು ತ್ವಗಿಂದ್ರಿಯದಿಂದ ಸ್ಪರ್ಶರೂಪದಲ್ಲಿ ತಿಳದುಬರುತ್ತದೋ ಅದು ದೃಷ್ಟಿಗೆ ಗೋಚರವಾಗುವದೇ ಆಗಿರುತ್ತದೆ. ಯಾಕಂದರೆ ತ್ವಗಿಂದ್ರಿಯವು ದೃಢನಿಶ್ಚಯವನ್ನುಂಟುಮಾಡಿಕೊಡುವ ಶಕ್ತಿಯುಳ್ಳದ್ದು, ಮತ್ತು ರೂಪ ಸ್ಪರ್ಶ ಇವುಗಳೆರಡೂ ಅನ್ಯೋನ್ಯ ಸಹಚರ್ಯ ಉಳ್ಳವುಗಳಾಗಿರುತ್ತವೆ ಎಂದು ಹೇಳುತ್ತಾರೆ.

तत् दिवःपरस्ताद्दीप्यमानं त्रिपाद्ब्रह्म यदिदमस्मिन्नन्तःपुरुषे शरीरस्यान्तर्ज्योतिः इदंवाव कौक्षेय ज्योतिरेव । कौक्षेयज्योतिः शरीरकमेवेत्यर्थः ॥ रं ॥

ರಾಮಾನುಜಾಚಾರ್ಯರು ದ್ಯುಲೋಕದ ಆಚೇಕಡೆಯಲ್ಲಿ ಪ್ರಕಾಶಿಸುವ ಆ ತ್ರಿಪಾತ್ (ಮುಕ್ಕಾಲುಪಾಲು) ಬ್ರಹ್ಮವು ಈ ಪುರುಷನ ಶರೀರದೊಳಗಿರುವ ಕುಕ್ಷಿ (ಜಠರ) ಸಮ್ಮಂಧವಾದ ಜ್ಯೋತಿಯೇ ಆಗಿರುತ್ತದೆ. ಎಂದರೆ ಕೌಕ್ಷೇಯ ಜ್ಯೋತಿ (ಜಠರಾಗ್ನಿ)ಯೇ ಶರೀರವಾಗಿ ಉಳ್ಳ ಬ್ರಹ್ಮವೆಂದರ್ಥವೆಂದು ಹೇಳುತ್ತಾರೆ.

तस्यपुरुषान्तः प्राणाग्नौस्थितस्य ज्योति राख्यस्य॰हरेः ॥ रा ॥

ಮಾಧ್ವರು ಪುರುಷನೊಳಗೆ ಪ್ರಾಣಾಗ್ನಿಯಲ್ಲಿರುವ ಜ್ಯೋತಿ ಎಂದು ಹೆಸರುಳ್ಳ ಹರಿಯೇ ಎಂದು ಹೇಳುತ್ತಾರೆ.

(೩) ಇನ್ನು ಮಿಕ್ಕ ೯ನೇಯಿಂದ ೧೩ನೇ ವರೇಗಿನ ಶ್ರುತಿಗಳಲ್ಲಿ ನಮ್ಮ ಸುತ್ತಲೂ ಹೊರಗೆ ಸೂರ್ಯ, ಚಂದ್ರ, ಅಗ್ನಿ, ಪರ್ಜನ್ಯ, ಮತ್ತು ಆಕಾಶ ಸಹ ಇರುವಂತೆ, ನಮ್ಮ ಶರೀರದೊಳಗೂ ಪ್ರಾಣಾಪಾನಾದಿ ಪಂಚವಾಯುಗಳು ಮತ್ತು ಚಕ್ಷುರಾದೀಂದ್ರಿಯಗಳು ಇವುಗಳಿಗೆ ಸಮ್ಮಂಧಪಟ್ಟು ಇರುತ್ತವೆಂದು ಹೇಳೋಣಾಗಿದೆ. ಈ ಸಂದರ್ಭದಲ್ಲಿ ನಾವು ತಿಳಕೊಳ್ಳಬೇಕಾದ ಮುಖ್ಯ ಸಂಗತಿಗಳು (೧ನೇ) ಆ ಪ್ರಾಣಾದಿ ವಾಯುಗಳು ಮಾಡುವ ಕೆಲಸಗಳೇನು? (೨ನೇ) ಸ್ವರ್ಗದ್ವಾರಗಳೆಂಬ ನಮ್ಮ ಹೃದಯ ಛಿದ್ರಗಳನ್ನು ಕಾದುಕೊಂಡಿರುವ ಬ್ರಹ್ಮ ಪುರುಷರೆಂಬ ಪ್ರಾಣಾದಿ ಐದು ತರಹದ ವಾಯುಗಳೇ ಚಕ್ಷುರಾದಿ ಇಂದ್ರಿಯಗಳು, ಇವುಗಳೇ ಆದಿತ್ಯಾದಿಗಳು, ಎಂದು ಶ್ರುತಿಗಳು

ಹೇಳಬೇಕಾದರೆ ಅವುಗಳೊಳಗೆ ಪರಸ್ಪರ ಏನಾದರೂ ಸಮ್ಮಂಧವಿರಬೇಕು. ಆ ಸಮ್ಮಂಧ ಯಾವ ತರಹದ್ದು ಎಂಬವುಗಳಾಗಿರುತ್ತವೆ.

## ೧ನೇ ಪ್ರಾಣಾದಿ ವಾಯುಗಳ ವ್ಯಾಪಾರ.

॥ ९–१३ ॥ स प्रागनितीतिप्राणः ।×। स वीर्यवत्कर्मकुर्वन् विगृह्यवा प्राणापानौ नानावा अनितीतिव्यानः । × । समूत्रपुरीषाद्यपनयन् अधोऽनितीत्यपानः । × । सोऽशितपीते समं नयतीतिसमानः । × । सउदानः आपादतलादारभ्योर्ध्वमुत्क्रमणात् उत्कर्षार्थञ्चकर्मभित्युदानः ॥ शं ॥

ಶಂಕರಾಚಾರ್ಯರು ಪ್ರಾಣವಾಯುವು ಮೂಡುಕಡೆಯಲ್ಲಿ (ಎದುರು) ಸಂಚರಿಸುವದರಿಂದ ಅದಕ್ಕೆ ಆ ಹೆಸರು ಬಂದಿದೆ. ವ್ಯಾನವು ಪ್ರಾಣಾಪಾನಗಳನ್ನು ನಿರೋಧಿಸಿ ಶಕ್ತಿಕಾರ್ಯ, ಇಲ್ಲವೆ ಗಂಟುಗಳ ಸಂದುಗಳಲ್ಲಿ ನಾನಾ ವಿಧವಾಗಿ ಚೇಷ್ಟೆಮಾಡುವದರಿಂದ ಅದಕ್ಕೆ ಆ ಹೆಸರು. ಅಪಾನವು ಮಲಮೂತ್ರಗಳನ್ನು ಹೊರಗೆ ಹೊರಡಿಸಿ ಅಧೋಮುಖವಾಗಿ ಸಂಚರಿಸುವ ಕಾರಣ ಅದಕ್ಕೆ ಆ ಹೆಸರು. ಸಮಾನವಾಯುವು ತಿಂದ ಅನ್ನ ಕುಡಿದ ನೀರು ಇವುಗಳನ್ನು ಸರಿಯಾಗಿ ವಿಲೇವಾರಿಮಾಡುತ್ತದೆ. ಆದಕಾರಣ ಅದಕ್ಕೆ ಆ ಹೆಸರು. ಉದಾನವಾಯುವು ಅಂಗಾಲಿನಿಂದ ಆರಂಭಿಸಿಕೊಂಡು ಊರ್ಧ್ವಮುಖವಾಗಿ ಹೊರಟುಹೋಗುವದರಿಂದಲೂ, ಉತ್ಕರ್ಷ (ಮೇಲೆ ಎಬ್ಬಿಸುವದ)ಕ್ಕೋಸ್ಕರ ಪ್ರವರ್ತಿಸುವದರಿಂದಲೂ, ಅದಕ್ಕೆ ಆ ಹೆಸರು ಸಹ ಬಂದಿರುತ್ತದೆಂದು ಹೇಳುತ್ತಾರೆ.

—–0-

## ೨ನೇ ಸಂಗತಿಯ ಕುರಿತು.



॥ १ ॥ तेनैव संबद्धं अव्यतिरिक्तं तच्चक्षुः । तथैव (स आदित्यः) चक्षुरूपप्रतिष्ठाक्रमेण हृदिस्थितः । × । प्राणवायुदेवतैवह्येका चक्षुरादित्यश्च सहाश्रयेण ॥ शं ॥

तेनैवेति प्राणविषयस्तच्छब्दः । तदव्यतिरिक्तं स्वातन्त्र्येण चक्षुषोऽकिञ्चित्कर

(೧) ಶಂಕರಾಚಾರ್ಯರು (ಮೇಲೆ ಹೇಳಿದ) ಪ್ರಾಣವಾಯುವಿನ ಸಂಗಡ ಕೂಡಿಕೊಂಡು ಅದಕ್ಕೆ ವ್ಯತಿರಿಕ್ತವಾದದ್ದಲ್ಲದೇ ಇರುವ ಇಂದ್ರಿಯವು ಚಕ್ಷುರಿಂದ್ರಿಯ (ಕಣ್ಣು) ಆಗಿರುತ್ತದೆ. (ಯಾಕಂದರೆ ಪ್ರಾಣದ ಸಹಾಯ ವಿನಹ ಚಕ್ಷುರಿಂದ್ರಿ

त्वं । × । अधिष्ठातृत्वेनादित्यश्चक्षुषिप्रतिष्ठितः । चक्षुश्चग्राहकतयारूपे प्रतिष्ठितं रूपदर्शनकरणी भवति । रूपाणिच वासनात्मनाहृदये प्रतिष्ठितानि । तदनेनक्रमेणादित्यो हृदये तिष्ठतीत्यर्थः । × । एकदेवताभिन्नत्वादपि प्राणाभेदेन चक्षुरादित्ययोराध्यानं युक्तमित्याह प्राणेति ॥ आश्रयशब्देन रूपाणिहृदयञ्चोच्यते द्युलोकोवा ॥ आ ॥

ಯಕ್ಕೆ ನೋಡುವ ಶಕ್ತಿ ಇಲ್ಲ.) ಹಾಗೆಯೇ ಆದಿತ್ಯನು ಸಹ–ಎಂದರೆ, ಅವನು ಕಣ್ಣಿನಲ್ಲಿದ್ದುಕೊಂಡು ಅದರ ಪರಿಮುಖವಾಗಿ ಹೃದಯದಲ್ಲಿ ವಿದ್ಯಮಾನನಾಗಿರುತ್ತಾನೆ. (ಅದು ಹೇಗೆಂದರೆ; ಆದಿತ್ಯನು ಕಣ್ಣಿನಲ್ಲಿರುವ ದೇವತೆ. ಕಣ್ಣು ರೂಪವನ್ನು ಕಂಡುಕೊಳ್ಳುವ ಇಂದ್ರಿಯವಾಗಿದ್ದುಕೊಂಡು ರೂಪದಲ್ಲಿ ವಿದ್ಯಮಾನವಾಗಿದೆ. ಎಂದರೆ, ರೂಪವನ್ನು ಕಾಣುತ್ತದೆ. ರೂಪಗಳು ವಾಸನಾರೂಪದಲ್ಲಿ ಹೃದಯದಲ್ಲಿವೆ. ಈ ರೀತಿ ಆದಿತ್ಯನು ಪರಂಪರಾಸಂಬಂಧದಿಂದ ಹೃದಯದಲ್ಲಿ ವಿದ್ಯಮಾನನಾಗಿರುತ್ತಾನೆಂದು ಅರ್ಥವಾಗಿರುತ್ತದೆ. ದೇವತೆಗಳ ಭೇದ ಇಲ್ಲದೇ ಇರುವದರಿಂದ ಕೂಡಾ ಚಕ್ಷುರಿಂದ್ರಿಯ ಮತ್ತು ಆದಿತ್ಯ ಇವೆರಡೂ ಪ್ರಾಣದಿಂದ ಭಿನ್ನವಾದವುಗಳಲ್ಲೆಂದು ಧ್ಯಾನಿಸುವದು ಯುಕ್ತವಾಗಿರುತ್ತದೆ; ಆದ್ದರಿಂದ,) ಪ್ರಾಣವಾಯುದೇವತಾ ಚಕ್ಷುರಿಂದ್ರಿಯ ಮತ್ತು ಆದಿತ್ಯ ಸಹ ಇವುಗಳ ಆಶ್ರಯ ಎಂದರೆ ರೂಪಗಳು ಮತ್ತು ಹೃದಯ ಅಥವಾ ದ್ಯುಲೋಕ ಸಮೇತ ಒಂದೇಯಾಗಿರುತ್ತದೆ.

(२) तत्सम्बद्धमेव चतच्छ्रोत्रमिन्द्रियं । तथाचं चन्द्रमाः । × । सहाश्रयौपूर्ववत् ॥ शं ॥

यथाश्रोत्रस्यव्यानेनसम्बन्धः तथाचन्द्रमसोपि । × । सहाश्रयौ पूर्ववदिति । अनयोर्व्यानात्मकत्वं ॥ आ ॥

(೨) ವ್ಯಾನವಾಯುವಿಗೆ ಕೂಡಿಕೊಂಡು ಅದರಿಂದ ಭಿನ್ನವಲ್ಲದೇ ಇರುವ ಇಂದ್ರಿಯವೇ ಶ್ರೋತ್ರೇಂದ್ರಿಯ (ಕಿವಿಗಳು). ಹಾಗೆಯೇ ಚಂದ್ರ ಕೂಡಾ, ಎಂದರೆ ಶ್ರೋತ್ರೇಂದ್ರಿಯಕ್ಕೆ ವ್ಯಾನವಾಯು ಹೇಗೆ ಕೂಡಿಕೊಂಡಿದೆಯೋ, ಹಾಗೆಯೇ ಚಂದ್ರಗೂ ಕೂಡಿಕೊಂಡಿರುತ್ತದೆ. ಈ ಕಾರಣದಿಂದ ಶ್ರೋತ್ರೇಂದ್ರಿಯ ಚಂದ್ರ ಮತ್ತು ಇವುಗಳ ಆಶ್ರಯ (ಶಬ್ದ ಮತ್ತು ಹದಯ)ಕ್ಕೆ ವ್ಯಾನರೂಪಸ್ವಭಾವ ಉಂಟಾಗಿರುತ್ತದೆ.

(३) सातथावाक् । तत्सम्बन्धात्तथाग्निः ॥ शं ॥

(೩) ಅದೇ ಪ್ರಕಾರ ಅಪಾನವು ವಾಗಿಂದ್ರಿಯ. ಹಾಗೆಯೇ ಅದಕ್ಕೆ ಕೂಡಿಕೊಂ

यथाचक्षुरादिद्वारेणादित्यादेः प्राणादिरूपत्वमुक्तं तथावाचोऽधिष्ठातृत्वेन सम्बन्धादग्निस्तद्वारेणापानो भवतीत्याह तत्सम्बन्धादिति ॥ आ ॥

ಡು ಅಗ್ನಿ ಕೂಡಾ, ಎಂದರೆ ಹೇಗೆ ಚಕ್ಷು ರಾದಿಗಳ ದ್ವಾರಾ ಆದಿತ್ಯಾದಿಗಳಿಗೆ ಪ್ರಾಣಾದಿರೂಪತ್ವವು ಹೇಳಲ್ಪಟ್ಟಿತೋ, ಹಾಗೆಯೇ ವಾಗಿಂದ್ರಿಯಕ್ಕೆ ಅಧಿಷ್ಠಾನದೇವತೆಯಾಗಿರುವ ಅಗ್ನಿಯು ಅದರ ಪರಿಮುಖವಾಗಿ ಅಪಾನವಾಗಿರುತ್ತಾನೆ. (ಎಂದು ಅಭಿಪ್ರಾಯವಾಗಿರುತ್ತದೆ.)

(४) तत्सम्बद्धंमनः । अन्तःकरणं । स पर्जन्यः । वृष्टयात्मको देवः ॥ शं ॥

(೪) ಮನಸ್ಸು (ಅಂತರಿಂದ್ರಿಯ) ಸಮಾನವಾಯುವಿಗೆ ಕೂಡಿಕೊಂಡಿರುವಂಥಾದ್ದು. ಅದು ಪರ್ಜನ್ಯ, ವೃಷ್ಟಿರೂಪದೇವತೆ.

(५) सवायुः तदाधारश्चाकाशः ॥ शं ॥ वायोराकाशत्वं आधाराधेयसंम्बन्धात् ॥ आ ॥

(೫) ಉದಾನವಾಯು ಅದೇ (ಮುಖ್ಯ) ವಾಯು, ಮತ್ತು ಅದಕ್ಕೆ ಆಧಾರವಾದ ಆಕಾಶ ಸಹ ಎಂದು ಹೇಳುತ್ತಾರೆ.

(१—५) प्राणवृत्तिविशेषाप्यायित चक्षुरनुग्राहकादित्यस्य हृदयप्राक्सुषिरद्वारपालस्य ॥ × ॥ एवमुत्तरत्रापि ॥

पर्जन्यः देवताविशेषः । × । आकाशश्च देवताविशेषः । ते एते उक्तगुणविशिष्टा आदित्यचन्द्रमोऽग्निपर्जन्याकाशाख्याः ब्रह्मपुरुषाः × × स्वर्गलोकस्य भगवल्लोकस्य हृदयाकाशाख्यस्य द्वारपालकाः । यद्वाभगवल्लोकस्य द्वारपाः आतिवाहिकाः ॥ रं ॥

(೧—೫) ರಾಮಾನುಜಾಚಾರ್ಯರು ಪ್ರಾಣವಾಯುವಿನ ವೃತ್ತಿ ವಿಶೇಷದಿಂದ ಪೋಷಿಸಲ್ಪಡುವ ಚಕ್ಷುರಿಂದ್ರಿಯವನ್ನು ಅನುಗ್ರಹಿಸಿರುವ ಆದಿತ್ಯನು ಹೃದಯದ ಮೂಡದಿಕ್ಕಿನ ಬಾಗಲ ಕಾವಲುಗಾರನು. ಇದೇ ರೀತಿ ಮುಂದೆ ಸಹಾ (ಅರ್ಥ). ಪರ್ಜನ್ಯನೆಂದರೆ ಒಂದು ದೇವತಾವಿಶೇಷ. ಪ್ರಸಿದ್ಧರಾದ ಈ ಹೇಳಿದ ಗುಣಗಳುಳ್ಳ ಆದಿತ್ಯ, ಚಂದ್ರ, ಅಗ್ನಿ, ಪರ್ಜನ್ಯ, ಆಕಾಶ ಎಂಬ ಬ್ರಹ್ಮಭಟರು ಹೃದಯಾಕಾಶವೆಂಬ ಭಗವಂತನ ರಾಜ್ಯದ ದ್ವಾರಪಾಲಕರು. ಅಥವಾ ಆತಿವಾಹಿಕರು (ಸತ್ತವರನ್ನು ಪರಲೋಕಕ್ಕೆ ಕೊಂಡುಹೋಗುವವರು) ಆಗಿರುತ್ತಾರೆಂದು ಹೇಳುತ್ತಾರೆ.

(१) प्राङ्सुषिः पूर्वद्वारं । सः तद्वारपः प्राणःश्वासवायुमानीसोपिकः इत्यत आह तच्चक्षुरिति । × । तत् सप्राणमानी चक्षुश्चक्षुरभिमानी सोपिकः आहसचक्षुर्मानी आदित्यः इति ॥ रा ॥

तत्स्थो द्वारपः स आदित्यः सप्राणः प्राणनामकजडवायुवृत्यभिमानी तच्चक्षुश्चक्षुरभिमानी ॥ वे ॥

(೧) ಮಾಧ್ವರು ಮೂಡದಿಕ್ಕಿನ ಬಾಗಲ ಕಾವಲುಗಾರನು ಶ್ವಾಸರೂಪವಾದ ಪ್ರಾಣವೆಂಬ ಜಡವಾಯುವೃತ್ತ್ಯಭಿಮಾನಿ. ಅವನೇ ಚಕ್ಷುರಿಂದ್ರಿಯಾಭಿಮಾನಿ. ಚಕ್ಷುರಿಂದ್ರಿಯಾಭಿಮಾನಿಯೇ ಆದಿತ್ಯನು.

(२) दक्षिणद्वारं । स तद्वारपः व्यानः व्यानाख्यवाय्वभिमानी श्रोत्रमानीच । स चन्द्रमाः ॥ रा ॥

तत्स्थोद्वारपः स चन्द्रमाः सचव्यानः तन्नामकजडवायुवृत्यभिमानी तच्छ्रोत्रं तदभिमानी ॥ वे ॥

(೨) ದಕ್ಷಿಣ ದ್ವಾರಪಾಲನು ವ್ಯಾನವೆಂಬ ಜಡವಾಯು ವೃತ್ತ್ಯಭಿಮಾನಿ. ಅವನೇ ಶ್ರೋತ್ರೇಂದ್ರಿಯಾಭಿಮಾನಿ. ಇವನೇ ಚಂದ್ರನು.

(३) पश्चिमद्वारं । सोऽपानः तद्वाराधिपोऽपानवाय्वभिमानी वागिन्द्रियमानी । × । (अग्निः) रा ॥

तत्स्थो द्वारपः सोऽग्निः सोऽपानोऽपानाभिमानी सावाक् वागिन्द्रियाभिमानी । वे ।

(೩) ಪಶ್ಚಿಮ ದ್ವಾರಪಾಲನು ಅಪಾನವಾಯುವಿನ ಅಭಿಮಾನಿ. ವಾಗಿಂದ್ರಿಯಾಭಿಮಾನಿ. ಅವನೇ ಅಗ್ನಿ.

(४) उत्तरदिगवस्थितद्वारं । तत्समानः तदधिपः समानवायुमानी मनोभिमानी च । पर्जन्यः पर्जन्यनामेन्द्रः ॥ रा ॥

तत्स्थोद्वारपोयः स पर्जन्यनामेन्द्रः स समानस्तदभिमानी तन्मनःतदभिमानी ॥वे॥

(೪) ಉತ್ತರ ದಿಕ್ಕಿನಲ್ಲಿರುವ ದ್ವಾರಪಾಲನು ಸಮಾನವಾಯುವಿನ ಅಭಿಮಾನಿ; ಅವನೇ ಮನೋಭಿಮಾನಿ. (ಇವನು) ಪರ್ಜನ್ಯ—ಎಂದರೆ, ಆ ಹೆಸರುಳ್ಳ ಇಂದ್ರ.

(५) उपरितनं द्वारं । सऊर्ध्वद्वारपः उदानः उदानवायुमानी । उन्नतेरुदानना

(೫) ಊರ್ಧ್ವದ್ವಾರಪಾಲನು ಉದಾನವಾಯುವಿನ ಅಭಿಮಾನಿ, ಎತ್ತರದಲ್ಲಿ

माय: सवायुर्मुख्यवायु: । आकाश: सर्वज्ञत्वादाकाशनामा ॥ रा ॥

तत्स्योद्वारपोय: सवायु:प्रधानवायु:स उदानस्तदभिमानी । उन्नतेरुदानशब्दवाच्य: स आकाश: आकाशाभिमानी । सार्वज्ञादाकाशनामा ॥ वे ॥

ರುವದರಿಂದ ಉದಾನನೆಂದು ಹೇಳುವದು. ಅವನೇ ವಾಯು ಎಂದರೆ ಮುಖ್ಯವಾಯು ಆಗಿರುತ್ತಾನೆ. ಅವನು ಆಕಾಶ; ಸರ್ವಜ್ಞನಾದ್ದರಿಂದ ಅವಗೇನೇ ಆಕಾಶನೆಂದು ಹೆಸರು ಆಗಿರುತ್ತದೆ ಎಂದು ಹೇಳುತ್ತಾರೆ.

(೪) ಇನ್ನು ನಾವು ಈ ಪಾಠದಲ್ಲಿ ತಿಳಕೊಳ್ಳಲಿಕ್ಕೆ ಉಳದಿರುವ ಒಂದೇ ಸಂಗತಿಯು ೧೫ನೇ ಶ್ರುತಿಯಲ್ಲಿ ಹೇಳುವ ದ್ಯುಲೋಕವೆಂದರೆ ಯಾವದು ಎಂಬದಾಗಿರುತ್ತದೆ.

(१५) अमुष्माद्दिव: द्युलोकात्पर: । परमितिलिंगव्यत्ययेन ॥ शं ॥

ಶಂಕರಾಚಾರ್ಯರು ಆ (ಪ್ರತ್ಯಕ್ಷ ತೋರುವ) ದ್ಯುಲೋಕದ ಅತ್ತಕಡೆ (ಹೊರಗೆ) ಎಂತಲೂ,

अप्राकृतस्थानस्योपरिष्टात्समष्टिव्यष्टिबहिर्भूतेषु ॥

ರಂಗರಾಮಾನುಜಾಚಾರ್ಯರು ಅಪ್ರಾಕೃತಸ್ಥಳವು ಮೇಲೆ ಇರುವಂಥಾದ ಾದ್ದರಿಂದ ಸಮಷ್ಟಿ ವ್ಯಷ್ಟಿ (ಸಮುದಾಯರೂಪ ಮತ್ತು ಪ್ರತ್ಯೇಕ ವ್ಯಕ್ತಿರೂಪ) ಈ ೨ ವಿಧದ ಸ್ಥಳಗಳ ಹೊರಗೆ ಎಂದು ಹೇಳುತ್ತಾರೆ.

* पृथिव्यां द्यौरित्यादि प्रमाणेन द्युशब्दार्थत्वेन प्रसिद्धात् मेरुसूर्यमंडलेन्द्रसदनाख्यलोकत्रयात्क्रमात्पर: उपरिस्थंसत् ज्योति: शब्दितं नारायणादिरूपत्रयं दीप्यते प्रकाश

ಮಾಧ್ವರ ಅಭಿಪ್ರಾಯ ಪ್ರಕಾರ ಭೂಮಿಯಲ್ಲಿ ಮೇರು ಶಿಖರ (ಭೂಗೋಳದ ಉತ್ತರ ತುದಿ), ಆಕಾಶದಲ್ಲಿ ಸೂರ್ಯಮಂಡಲ, ದ್ಯುಲೋಕದಲ್ಲಿ ಇಂದ್ರನ ಅರ

---

* पृथिव्यांद्यौर्महामेरु। राकाशेसूर्यमंडलम् ॥ दिवीन्द्रसदनं चैव । तत्परेतु दिव:परे ॥ पृथिवीस्थेषु सर्वो द्यो । लोकोनन्तासनात्मक: ॥ अन्तरिक्षात्मकेभ्यश्च । श्वेतद्वीपेस्थितोहरि: ॥ द्यात्मकेभ्यश्च सर्वेभ्यो । वैकुंठश्चोच्चउच्यते ॥ पृथिव्यां ब्रह्मणो मेरौ । जयन्तन्त्वन्तरिक्षगं । त्रितीयं सत्यलोकञ्च । सदनं त्रिविधं स्मृतं ॥ नारायणो वासुदेवोवैकुंठ इतितेत्रय: ॥ म ॥

मानमास्ते ॥ २ ॥ ಮನೆ. ಇವುಗಳೆಲ್ಲ ದ್ಯುಲೋಕಗಳೇ. ಆದ್ದರಿಂದ ಪ್ರಸ್ತುತ ೧೫ನೇ ಶ್ರುತಿಯಲ್ಲಿ ಹೇಳಲ್ಪಡುವ ಜ್ಯೋತಿಯು ಅವುಗಳಲ್ಲಿ ಪ್ರತಿ ಒಂದರ ಮೇಲ್ಭಾಗದಲ್ಲಿದ್ದುಕೊಂಡು (ಆಯಾ ಸ್ಥಳಕ್ಕೆ ತಕ್ಕಂಥಾ) ಕ್ರಮವಾಗಿ ನಾರಾಯಣ, ವಾಸುದೇವ, ವೈಕುಂಠವೆಂಬ ಹೆಸರುಗಳನ್ನು ಪಡದಿರುತ್ತದೆಂದು ತಿಳಿದು ಬರುತ್ತದೆ.

## IVನೇ ಪಾಠ.

# ವೈಶ್ವಾನರವಿದ್ಯ

ಯಾನೆ

# ಪ್ರಾಣಾಗ್ನಿಹೋತ್ರದ ಕುರಿತು.



(१) तान् होवाचैते वैखलु यूयं पृथगिवेममात्मानं वैश्वानरं विद्वा॑ःसोऽन्नमत्थ। यस्त्वेतमेवं प्रादेशमात्रमभिविमानमात्मानं वैश्वानरमुपास्ते स सर्वेषु लोकेषु सर्वेषु भूतेषु सर्वेष्वात्मस्वन्नमत्ति ॥ (५-१८-१)

(೧.) ಅವರಿಗೆ (ಪ್ರಾಚೀನ ಶಾಲ ಮೊದಲಾದ ಗೃಹಸ್ಥರಿಗೆ ಅಶ್ವಪತಿಯು) ಹೇಳಿದ್ದೇನಂದರೆ:—ಪ್ರಸಿದ್ಧರಾದ ನೀವು ವೈಶ್ವಾನರರೂಪನಾದ ಆತ್ಮನು ಪ್ರಥಕ್ (ತುಂಡು ತುಂಡಾಗಿ–ಬೇರೆ ಬೇರೆ) ಇದ್ದಾನೆಂದು ತಿಳಿದು ಉಣ್ಣುತ್ತೀರಿ. ಪರಂತು ಆ ವೈಶ್ವಾನರನು "ಪ್ರಾದೇಶಮಾತ್ರನು" ಮತ್ತು "ಅಭಿವಿಮಾನ"ನಾದ ಆತ್ಮನೆಂದು ಯಾರು ಉಪಾಸಿಸುತ್ತಾನೋ ಅವನು ಸಕಲ ಲೋಕಗಳಲ್ಲಿ, ಸಕಲ ಪ್ರಾಣಿಗಳಲ್ಲಿ, ಸಕಲೇಂದ್ರಿಯಗಳಲ್ಲಿ (ಇದ್ದುಕೊಂಡು) ಅನ್ನ ತಿನ್ನು (ತಿಂದವನಾಗು)ತ್ತಾನೆ.

(२) तस्यहवा एतस्यात्मनो वैश्वानरस्य मूर्धैवसुतेजाश्चक्षुर्विश्वरूपः प्राणः पृथग्वर्त्मा ऽत्मा सन्देहोबहुलोवस्तिरेवरयिः पृथिव्येव पादावुर एव वेदिर्लोमानि बर्हिर्हृदयं

(೨) ಆ ವೈಶ್ವಾನರರೂಪನಾದ ಆತ್ಮನ ಶಿರಸು ಸುತೇಜಾ (ದ್ಯುಲೋಕ). ಚಕ್ಷು (ಕಣ್ಣು) ವಿಶ್ವರೂಪ (ಆದಿತ್ಯ)ನು. ಪ್ರಾಣವು ಪೃಥಗ್ವರ್ತ್ಮಾ (ವಾಯುವು). ಆತ್ಮ

गार्हपत्यो मनोऽन्वाहार्यपचन आस्यमाहवनीयः ॥ (५-१८-२).

ರೂಪವಾದ ಮಧ್ಯಶರೀರವೆ ಬಹುಳ (ಆಕಾಶ). ವಸ್ತಿಯು (ಮೂತ್ರಾಶಯವು) ರಯಿ (ಜಲ). ಪಾದಗಳು ಪೃಥ್ವಿ. ಹೊಟ್ಟೆಯು ವೇದಿ. ರೋಮಗಳು ದರ್ಭೆಗಳು. ಹೃದಯವು ಗಾರ್ಹಪತ್ಯ (ಆ ಹೆಸರಿನ ಅಗ್ನಿ). ಮನಸು ಅನ್ವಾಹಾರ್ಯಪಚನ (ದಕ್ಷಿಣಾಗ್ನಿ). ಬಾಯಿ ಆಹವನೀಯ (ಆ ಹೆಸರಿನ ಅಗ್ನಿ).

(३) तद्यद्भक्तं प्रथममागच्छेत्तद्धोमीयꣳ सयां प्रथमामाहुतिं जुहुयात्तां जुहुयात्प्राणाय स्वाहेति । प्राणस्तृप्यति ॥ (५-१९-१)

प्राणेतृप्यति चक्षुस्तृप्यति चक्षुषितृप्यत्यादित्यस्तृप्यत्यादित्येतृप्यति द्यौस्तृप्यति दिवितृप्यत्यां यत्किञ्चद्यौरादित्यश्चाधितिष्ठतस्तत्तृप्यति तस्यानुतृप्तिं तृप्यति प्रजया पशुभिरन्नाद्येन तेजसाब्रह्मवर्चसेनेति ॥ (५-१९-२)

(೩) ಆದಕಾರಣ (ಊಟಕ್ಕಾಗಿ) ಇಕ್ಕಿದ್ದರಲ್ಲಿ ಪ್ರಥಮತಃ ಕೈಗೆ ಬರುವ ತುತ್ತು ಹೋಮದ್ರವ್ಯವಾಗಿರುತ್ತದೆ. ಅವನು (ಉಣ್ಣುವವನು) ಮೊದಲು ಯಾವ ಆಹುತಿಯನ್ನು ಹೋಮಿಸುತ್ತಾನೋ ಅದನ್ನು "ಪ್ರಾಣಾಯ ಸ್ವಾಹಾ" ಎಂಬ ಮಂತ್ರದಿಂದ ಹೋಮಿಸಬೇಕು. ಪ್ರಾಣ(ವಾಯು)ವು ತೃಪ್ತಿಪಡುತ್ತದೆ. ಪ್ರಾಣ ತೃಪ್ತಿಪಡಲು, ಚಕ್ಷು ತೃಪ್ತಿಪಡುತ್ತದೆ; ಚಕ್ಷು ತೃಪ್ತಿಪಡಲು, ಆದಿತ್ಯಗೆ ತೃಪ್ತಿಯಾಗುತ್ತದೆ; ಆದಿತ್ಯಗೆ ತೃಪ್ತಿ ಉಂಟಾಗಲು, ದ್ಯು(ಸ್ವರ್ಗ)ಲೋಕಕ್ಕೆ ತೃಪ್ತಿ ಉಂಟಾಗುತ್ತದೆ; ಸ್ವರ್ಗ ತೃಪ್ತಿಪಡಲು, ಸ್ವರ್ಗಲೋಕ ಮತ್ತು ಆದಿತ್ಯ ಇವೆರಡೂ ಅಧಿಷ್ಠಿತವಾಗಿರುವದು ಏನು ಇದೆಯೋ ಅದು ತೃಪ್ತಿಪಡುತ್ತದೆ. ಅದು ತೃಪ್ತಿಪಟ್ಟ ನಂತರ (ಯಜಮಾನನು) ಸಂತತಿ, ಪಶುಗಳು, ಆರೋಗ್ಯ, ತೇಜಸ್, ಬ್ರಹ್ಮವರ್ಚಸ್, ಇವುಗಳಿಂದ (ಯುಕ್ತನಾಗಿ) ತೃಪ್ತಿಪಡುತ್ತಾನೆ.

(४) अथयां द्वितीयां जुहुयात्तांजुहुयाद्व्यानायस्वाहेति व्यानस्तृप्यति॥ (५-२०-१)

व्यानेतृप्यति श्रोत्रंतृप्यति श्रोत्रेतृप्यति चन्द्रमास्तृप्यति चन्द्रमसितृप्यति दिशस्तृप्यन्ति दिक्षुतृप्यतीषु यत्किञ्चदिशश्च चन्द्रमाश्चाधितिष्ठन्तितत्तृप्यति तस्यानुतृप्तिंतृ

(೪) ಅನಂತರ, ಯಾವ ಎರಡನೇ ಆಹುತಿಯನ್ನು ಹೋಮಿಸುತ್ತಾನೋ, ಅದನ್ನು "ವ್ಯಾನಾಯ ಸ್ವಾಹಾ" ಎಂಬ ಮಂತ್ರದಿಂದ ಹೋಮಿಸಬೇಕು. ವ್ಯಾನವು ತೃಪ್ತಿಪಡುತ್ತದೆ. ವ್ಯಾನವು ತೃಪ್ತಿಪಡಲು, ಶ್ರೋತ್ರವು ತೃಪ್ತಿಪಡುತ್ತದೆ; ಶ್ರೋ

प्यति प्रजयापशुभिरन्नाद्येन तेजसाब्रह्मवर्चसे नेति ॥(५-२०-२)

ತ್ರವು ತೃಪ್ತಿಪಡಲು, ಚಂದ್ರನು ತೃಪ್ತಿಪಡುತ್ತಾನೆ; ಚಂದ್ರನು ತೃಪ್ತಿಪಡಲು, ದಿಕ್ಕುಗಳು ತೃಪ್ತಿಪಡುತ್ತವೆ; ದಿಕ್ಕುಗಳಿಗೆ ತೃಪ್ತಿಉಂಟಾಗಲು, ದಿಕ್ಕುಗಳು ಮತ್ತು ಚಂದ್ರ ಇವುಗಳು ಅಧಿಷ್ಠಿತವಾಗಿರುವದು ಏನು ಇದೆಯೋ ಅದು ತೃಪ್ತಿಪಡುತ್ತದೆ. ಅದಕ್ಕೆ ತೃಪ್ತಿ ಆದನಂತರ, ಯಜಮಾನನು ಸಂತತಿ, ಪಶುಗಳು, ಆರೋಗ್ಯ, ತೇಜಸ್, ಬ್ರಹ್ಮವರ್ಚಸ್, ಇವುಗಳಿಂದ (ಯುಕ್ತನಾಗಿ) ತೃಪ್ತಿಪಡುತ್ತಾನೆ.

(५) अथयां तृतीयां जुहुयात्तां जुहुयादपानायस्वाहेत्यपानस्तृप्यति ॥ (५-२१-१) अपानेतृप्यति वाक्तृप्यति वाचितृप्यत्यामग्निस्तृप्यत्यग्नौ तृप्यति पृथिवीतृप्यति पृथिव्यां तृप्यत्यां यत्किञ्चपृथिवीचाग्निश्चाधितिष्ठतस्तत्तृप्यति तस्यानुतृप्तिं तृप्यति प्रजयापशुभिरन्नाद्येन तेजसाब्रह्मवर्चसेनेति। (५—२१—२)

(೫) ಅನಂತರ ಮೂರನೇ ಸಲ ಯಾವ ಆಹುತಿಯನ್ನು ಹೋಮಿಸುತ್ತಾನೋ ಅದನ್ನು "ಅಪಾನಾಯ ಸ್ವಾಹಾ" ಎಂಬ ಮಂತ್ರದಿಂದ ಹೋಮಿಸಬೇಕು. ಅಪಾನವು ತೃಪ್ತಿಪಡುತ್ತದೆ. ಅಪಾನ ತೃಪ್ತಿಪಡಲು, ವಾಕ್ (ಇಂದ್ರಿಯ) ತೃಪ್ತಿಪಡುತ್ತದೆ; ವಾಕ್ ತೃಪ್ತಿಪಡಲು, ಅಗ್ನಿ ತೃಪ್ತಿಪಡುತ್ತದೆ; ಅಗ್ನಿ ತೃಪ್ತಿಪಡಲು, ಪೃಥ್ವಿ ತೃಪ್ತಿಪಡುತ್ತದೆ; ಪೃಥ್ವಿ ತೃಪ್ತಿಪಡಲು, ಪೃಥ್ವಿ, ಅಗ್ನಿ, ಇವೆರಡೂ ಅಧಿಷ್ಠಿತವಾಗಿ ಉಳ್ಳದ್ದು ಏನು ಇದೆಯೋ ಅದು ತೃಪ್ತಿಪಡುತ್ತದೆ. ಅದಕ್ಕೆ ತೃಪ್ತಿಯಾದ ನಂತರ, (ಯಜಮಾನನು) ಸಂತತಿ, ಪಶುಗಳು, ಆರೋಗ್ಯ, ತೇಜಸ್, ಬ್ರಹ್ಮವರ್ಚಸ್, ಇವುಗಳಿಂದ (ಯುಕ್ತನಾಗಿ) ತೃಪ್ತಿಪಡುತ್ತಾನೆ.

(६) अथयां चतुर्थीं जुहुयात्तांजुहुयात् समानायस्वाहेति समानस्तृप्यति। (५—२२—१)

समानेतृप्यति मनस्तृप्यति मनसितृप्यति पर्जन्यस्तृप्यति पर्जन्येतृप्यति विद्युत्तृप्यति विद्युतितृप्यत्यां यत्किञ्चविद्युच्चपर्जन्यश्चाधितिष्ठतस्तत्तृप्यति तस्यानुतृप्तिं तृप्यति प्रजयापशुभिरन्नाद्येन तेजसाब्रह्मवर्चसेनेति। (५—२२—२)

(೬) ಅನಂತರ, ನಾಲ್ಕನೇ ಸಲ ಯಾವ ಆಹುತಿಯನ್ನು ಹೋಮಿಸುತ್ತಾನೋ ಅದನ್ನು "ಸಮಾನಾಯ ಸ್ವಾಹಾ" ಎಂಬ ಮಂತ್ರದಿಂದ ಹೋಮಿಸಬೇಕು. ಸಮಾನವು ತೃಪ್ತಿಪಡುತ್ತದೆ. ಸಮಾನ ತೃಪ್ತಿಪಡಲು, ಮನಸು ತೃಪ್ತಿಪಡುತ್ತದೆ; ಮನಸು ತೃಪ್ತಿಪಡಲು, ಪರ್ಜನ್ಯವು ತೃಪ್ತಿಪಡುತ್ತದೆ; ಪರ್ಜನ್ಯ ತೃಪ್ತಿಪಡಲು, ವಿದ್ಯುತ್ (ಮಿಂಚು) ತೃಪ್ತಿಪಡುತ್ತದೆ; ವಿದ್ಯುತ್

ತೃಪ್ತಿಪಡಲು, ವಿದ್ಯುತ್, ಪರ್ಜನ್ಯ, ಇವೆರಡೂ ಅಧಿಷ್ಠಿತವಾಗಿ ಉಳ್ಳದ್ದು ಏನು ಇದೆಯೋ ಅದು ತೃಪ್ತಿಪಡುತ್ತದೆ. ಅದಕ್ಕೆ ತೃಪ್ತಿಯಾದ ನಂತರ (ಯಜಮಾನನು) ಸಂತತಿ, ಪಶುಗಳು, ಆರೋಗ್ಯ, ತೇಜಸ್, ಬ್ರಹ್ಮವರ್ಚಸ್ ಇವುಗಳಿಂದ (ಯುಕ್ತನಾಗಿ) ತೃಪ್ತಿಪಡುತ್ತಾನೆ.

(७) अथयां पञ्चमीं जुहुयात्तां जुहुयादुदानायस्वाहेत्युदानस्तृप्यति ॥ (५—२३—१)

उदानेतृप्यति वायुस्तृप्यति वायौतृप्यत्याकाशस्तृप्यत्याकाशेतृप्यति यत्किञ्चवायुश्चाकाशश्चाधितिष्ठतस्तत्तृप्यति तस्यानुतृप्तिं तृप्यति प्रजयापशुभिरन्नाद्येन तेजसाब्रह्मवर्चसेनेति ॥ (५—२३—२)

(೭) ಅನಂತರ ಐನೇ ಸಲ ಯಾವ ಆಹುತಿಯನ್ನು ಹೋಮಿಸುತ್ತಾನೋ ಅದನ್ನು "ಉದಾನಾಯ ಸ್ವಾಹಾ" ಎಂಬ ಮಂತ್ರದಿಂದ ಹೋಮಿಸಬೇಕು. ಉದಾನವು ತೃಪ್ತಿಪಡುತ್ತದೆ. ಉದಾನ ತೃಪ್ತಿಪಡಲು, ವಾಯುವು ತೃಪ್ತಿಪಡುತ್ತದೆ; ವಾಯು ತೃಪ್ತಿಪಡಲು, ಆಕಾಶವು ತೃಪ್ತಿಪಡುತ್ತದೆ; ಆಕಾಶ ತೃಪ್ತಿಪಡಲು, ವಾಯು ಮತ್ತು ಆಕಾಶ ಇವೆರಡೂ ಅಧಿಷ್ಠಿತವಾಗಿ ಉಳ್ಳದ್ದು ಏನು ಇದೆಯೋ ಅದು ತೃಪ್ತಿಪಡುತ್ತದೆ. ಅದು ತೃಪ್ತಿಪಟ್ಟನಂತರ (ಯಜಮಾನನು) ಸಂತತಿ, ಪಶುಗಳು, ಆರೋಗ್ಯ, ತೇಜಸ್, ಬ್ರಹ್ಮವರ್ಚಸ್, ಇವುಗಳಿಂದ (ಯುಕ್ತನಾಗಿ) ತೃಪ್ತಿಪಡುತ್ತಾನೆ.

(८) सयइदमविद्वानग्निहोत्रं जुहोति यथाङ्गारानपोह्य भस्मनि जुहुयात्तादृक्तत् स्यात् ॥ (५—२४—१)

अथय एतदेवं विद्वानग्निहोत्रं जुहोति तस्य सर्वेषु लोकेषु सर्वेषु भूतेषु सर्वेष्वात्मसु हुतंभवति ॥ (५—२४—२)

(೮) ಯಾರು ಇದನ್ನು ತಿಳಿಯದೆ ಅಗ್ನಿಹೋತ್ರವನ್ನು ಮಾಡುತ್ತಾನೋ ಅವನು ಕೆಂಡಗಳನ್ನು ತೆಗದುಹಾಕಿ ಬೂದಿಯಲ್ಲಿ ಹೋಮಿಸಿದರೆ ಹೇಗೋ ಅದರಂತೆಯೇ ಅದು (ಅವನ ಅಗ್ನಿಹೋತ್ರವು) ಆಗುತ್ತದೆ.

ಪರಂತು ಯಾರು ಇದನ್ನು ಈ ರೀತಿ ತಿಳಿದು ಅಗ್ನಿಹೋತ್ರವನ್ನು ಮಾಡುತ್ತಾನೋ ಅವನ ಆ ಅಗ್ನಿಹೋತ್ರವು ಸಕಲ ಲೋಕಗಳಲ್ಲಿಯೂ, ಸಕಲ ಪ್ರಾಣಿಗಳಲ್ಲಿಯೂ, ಸಕಲೇಂದ್ರಿಯಗಳಲ್ಲಿಯೂ, ಮಾಡಲ್ಪಟ್ಟಿದ್ದಾಗುತ್ತದೆ.

 ೬೧

IVನೇ ಪಾಠದ

# ವ್ಯಾಖ್ಯಾನ ಸಂಗ್ರಹ.

(೧) ಈ ಪಾಠದಲ್ಲಿ ವಿವರಿಸುವ ವಿದ್ಯವು ಕೆಲವು ಗೃಹಸ್ಥರು "ನಮ್ಮ ಆತ್ಮನು ಯಾರು ಬ್ರಹ್ಮ ಯಾವದು" ಎಂದು ನಿರ್ಣಯಿಸುವದಕ್ಕಾಗಿ ಕೇಕಯರಾಜನ ಬಳಿಗೆ ಹೋಗಿ ಅವನಿಂದ ಕಲಿತಂಥಾದೆಂದು ಇದರ ಉಪೋದ್ಘಾತದಲ್ಲಿ ಈ ಮೊದಲೇ ಹೇಳೋಣಾಗಿರುತ್ತದೆ. ಛಾಂದೋಗ್ಯದಲ್ಲಿ ದಕ್ಷಿಣಮಾರ್ಗದಿಂದ ಪರಲೋಕಕ್ಕೆ ಪ್ರಯಾಣ ಮಾಡಿ (Xನೇ ಪಾಠ) ಕಡೆಗೆ ಭಕ್ತಯಾವಾದಿ ಭಾವಗಳನ್ನೂ, ಕ್ಷುದ್ರಜಂತು ಜನ್ಮಗಳನ್ನೂ, ಪಡೆಯುವವರ ವಿಷಯ ಹೇಳಿದೊಡನೆ ಈ ವಿದ್ಯವನ್ನು ಹೇಳೋಣಾಗಿರುವ ಕಾರಣ ಆ ಉಭಯ ಅವಸ್ಥೆಗಳನ್ನು ತಪ್ಪಿಸುವದಕ್ಕಾಗಿ ವೈಶ್ವಾನರ ರೂಪವಾದ ಭಕ್ಷಕ ಸ್ವಭಾವವನ್ನು ಸಂಪಾದಿಸುವಗೋಸ್ಕರ ಇದನ್ನು ಉಪದೇಶಿಸೋಣಾಗುತ್ತದೆಂದು ಶಂಕರಾಚಾರ್ಯರು ಅಭಿಪ್ರಾಯ ಪಡುತ್ತಾರೆ.

दक्षिणेन पथागच्छतामन्नभावतक्तः।×। क्षुद्रजन्तुलक्षणाच कष्टासंसारगतिरुक्ता । तदुभयदोषपरिजिहीर्षया वैश्वानरात्तृभावप्रतिपत्यर्थमुत्तरोग्रन्थआरभ्यते ॥ शं ॥

(೨) ಇದರ ೧ನೇ ಶ್ರುತಿಯಲ್ಲಿ "ಪ್ರಾದೇಶಮಾತ್ರ"ನಾದಂಥಾ "ಅಭಿವಿಮಾನ"ನಾದ "ವೈಶ್ವಾನರ"ನೇ ಆತ್ಮನೆಂದು ವಗೈರೆ ಹೇಳೋಣಾಗುತ್ತದೆ. ಆದ್ದರಿಂದ ಆ ಶಬ್ದಗಳ ಅರ್ಥವಿಚಾರವೇ ಇಲ್ಲಿ ಮುಖ್ಯವಾದದ್ದು.

(१) द्युमूर्धादिभिर्विशिष्टमेकं प्रादेशमात्रं । [एकं समस्तं त्रैलोक्यात्मकामिति यावत् । आ.] प्रादेशैः द्युमूर्धादिभिः पृथिवीपादान्तैरध्यात्मंमीयते ज्ञायत इति प्रादेशमात्रं । [यथोक्तैराधिदैविकावयवैरध्यात्मं प्रत्यगात्मन्येवायंमीयत इतिव्युत्पत्या प्रादेशमात्रः तमिति यावत् । आ.] मुखादिषुवा

ಶಂಕರಾಚಾರ್ಯರು ದ್ಯುಲೋಕ ರೂಪವಾದ ಶಿರಸ್ಸು ಮೊದಲುಗೊಂಡು ೨ನೇ ಶ್ರುತಿಯಲ್ಲಿ, ಹೇಳುವ ಆಯಾ ವಸ್ತುಗಳೇ ಅವಯವಗಳಾಗಿ ವಿಶಿಷ್ಟ ಒಬ್ಬನೇ (ಇಡೀ)ಯಾಗಿರುವವನು;

ಅದೇ ದ್ಯುಲೋಕ ಮೊದಲುಗೊಂಡು ಪಾದರೂಪವಾದ ಪೃಥ್ವಿ ಪರ್ಯಂತರದ

करणे स्वकर्तृत्वेनमीयत इतिप्रादेशमात्रः। [अकर्तृत्वेन साक्षितया। आ.] द्युलोकादि पृथिव्यन्तप्रदेशपरिमाणोवाप्रादेशमात्रः।

प्रत्यगात्मतयाऽभिविमीयते अहमिति ज्ञायत इत्यभिविमानः।

विश्वान्नरान्नयतिपुण्यपापानुरूपांगतिं स र्वात्मैष ईश्वरः वैश्वानरः। विश्वोनर एववा सर्वात्मत्वात्। विश्वैर्वानरैः प्रत्यगात्मतया प्रविभज्यनीयत इतिवैश्वानरः॥ शं॥

ಪ್ರದೇಶಗಳೇ ಅವಯುವಗಳಾಗಿ ಉಳ್ಳವನಾಗಿದ್ದುಕೊಂಡು ಪ್ರತ್ಯಗಾತ್ಮನಲ್ಲಿಯೇ ಯಾರು ತಿಳಿದುಬರುತ್ತಾನೋ ಅವನು;

ಅಥವಾ (ನಮ್ಮ) ಮುಖ ಮೊದಲಾದ ಕರಣಗಳಲ್ಲಿದ್ದುಕೊಂಡು ಸಾಕ್ಷಿತ್ವೇನ ತಿಳಿದುಬರುವವನು ಯಾರೋ ಅವನು;

ಅಥವಾ ದ್ಯುಲೋಕ ಮೊದಲುಗೊಂಡು ಪೃಥ್ವಿ ಪರ್ಯಂತರದ ಪ್ರದೇಶಗಳು ಎಷ್ಟು ವಿಸ್ತಾರವಾಗಿವೆಯೋ ಅಷ್ಟು ವಿಸ್ತಾರವಾಗಿ ಉಳ್ಳವನು "ಪ್ರಾದೇಶ ಮಾತ್ರನು" ಎಂತಲೂ;

ಪ್ರತ್ಯಗಾತ್ಮಭಾವದಿಂದ "ನಾನು" ಎಂದು ತಿಳಿದುಬರುವವನು ಯಾರೋ ಅವನೇ "ಅಭಿವಿಮಾನ"ನೆಂತಲೂ;

ಸಕಲ ಜನರಿಗೂ ಅವರ ಪುಣ್ಯಪಾಪಗಳಿಗನುಸಾರವಾದ ಗತಿಯನ್ನು ದೊರಕಿಸಿ ಕೊಡುವ ಸರ್ವಾತ್ಮಕನಾದ ಈಶ್ವರನು ಯಾರೋ, ಅಥವಾ ಸರ್ವಾತ್ಮನಾಗಿರುವ ಕಾರಣ ವಿಶ್ವವೇ ನರ(ಪುರುಷರೂಪ)ನಾಗಿರುವವನು ಯಾರೋ, ಅಥವಾ ಸಕಲ ಜನರಿಂದಲೂ ಪ್ರತ್ಯಗಾತ್ಮಭಾವದಿಂದ ಪ್ರತ್ಯೇಕ ಪ್ರತ್ಯೇಕವಾಗಿ ಗ್ರಹಿಸಲ್ಪಡುವವನು ಯಾರೋ ಅವನು "ವೈಶ್ವಾನರ"ನೆಂತಲೂ ಹೇಳುತ್ತಾರೆ.

द्युलोकादि प्रदेशसम्बधिनीप्रादेशीं प्रादेशीमात्रायस्यतं प्रादेशमात्रं द्युप्रभृति प्रदेश परिच्छन्नं।

अभिविमानं सर्वाभिव्याप्ततया विगत मानं।

वैश्वानरं विश्वेषांनराणां नेतारं॥ रं॥

ರಂಗರಾಮಾನುಜಾಚಾರ್ಯರು ದ್ಯುಲೋಕ ಮೊದಲಾದ ಪ್ರದೇಶ (ಸ್ಥಳ)ಗಳಷ್ಟು ಪರಿಮಾಣವುಳ್ಳವನು "ಪ್ರಾದೇಶಮಾತ್ರ"ನೆಂತಲೂ;

ಸಕಲದರಲ್ಲಿಯೂ ವ್ಯಾಪ್ತಿಭಾವ ಉಳ್ಳ ದೆಸೆಯಿಂದ ಪರಿಮಿತಿ ಇಲ್ಲದವನಾದ ಕಾರಣ "ಅಭಿವಿಮಾನ"ನೆಂತಲೂ ಅರ್ಥ ಹೇಳುವದಲ್ಲದೆ, "ವೈಶ್ವಾನರ"ನೆಂದರೆ ಸಕಲ ಪ್ರಾಣಿಗಳಿಗೂ ನಿಯಾಮಕನಾದವನೆಂದು ಸಹ ಹೇಳುತ್ತಾರೆ.

प्रादेशमात्रं प्रादेशपरिमितहृदयकमल व्याप्तित्वाद्वा तावत्परिमाणव्यक्त्यावा प्रादेशमात्रं ॥ रा ॥

ಮಾಧ್ವರು, ಒಂದು ಗೇಣಿನಷ್ಟು ವಿಸ್ತೀರ್ಣ ಉಳ್ಳ ಹೃದಯಕಮಲವನ್ನು ವ್ಯಾಪಿಸಿಕೊಂಡಿರುವದರಿಂದ ಅಥವಾ ಅಷ್ಟೇ ಪರಿಮಾಣ ಉಳ್ಳವನಾಗಿ ಕಂಡುಬರುವದರಿಂದ ಪ್ರಾದೇಶಮಾತ್ರನೆಂತಲೂ,

अभिविमानं अभितोविगतमानं मर्यादा यस्येत्यभिविमानं ॥ रा. वे. ॥

ಅಭಿವಿಮಾನನೆಂದರೆ ಎಲ್ಲಿಯೂ ಪರಿಮಿತವಿಲ್ಲದವನೆಂತಲೂ, ಅರ್ಥ ಹೇಳುತ್ತಾರೆ.

वैश्वानराख्यविष्णोस्तु सम्यग्ज्ञानेन सर्वशः ॥ म ॥

ವೈಶ್ವಾನರ ಶಬ್ದದ ವಿಷಯದಲ್ಲಿ ಇವರ ಮತ ಪ್ರಕಾರ ಅದು ವಿಷ್ಣುವಾಚಿಯಾಗಿರುತ್ತದೆ.

(೩) ಈಗ ಈ ಪಾಠವು ಹಿಂದೆ ಹೋದ IIIನೇದಕ್ಕೆ ಸಮ್ಮಂಧಿಸಿಕೊಂಡುಂಟೆಂಬದು ವಾಚಕರಿಗೆ ತೋರದೇ ಇರಲಾರದು. ಯಾವ್ಯಾವ ತರಹದ ವಾಯುವಿಗೆ ಯಾವ್ಯಾವ ಇಂದ್ರಿಯ ಮತ್ತು ದೇವತೆ ಸಮ್ಮಂಧಪಟ್ಟದೆಂದು ಅದರಲ್ಲಿ ಹೇಳೋಣಾಯಿತೋ ಆ ಎಲ್ಲ ತರಹದ ವಾಯುಗಳು, ಇಂದ್ರಿಯಗಳು, ಮತ್ತು ದೇವತೆಗಳು ಸಹ ಇದರಲ್ಲಿ ಹೇಳುವ ಪ್ರಾಣಾಗ್ನಿಹೋತ್ರದಿಂದ ತೃಪ್ತಿಪಡುತ್ತವೆಂದು ಈ ಪಾಠದಲ್ಲಿ ಹೇಳೋಣಾಗಿದೆ.

(१) प्राणवायोरभिमानिभूतं यदादित्यस्यरूपं × चक्षुर्मानियदादित्यस्य स्वरूपं × आदित्यः रविबिम्बमानिसूर्यरूपं ॥
द्युलोकमानिश्रीः × द्यौर्वायुपत्नी ॥

(२) व्यानवायुश्रोत्रचन्द्रमानितया त्रिरूपश्चन्द्रः ।
दिङ्मानिरमादेवी दिशः तन्नामकवायुपत्नी ॥

(३) अपानवायुवाग्भूम्यभिमानित

ಮಾಧ್ವರು, ಅವರು ಹೇಳುವ ದೇವತೆಗಳಲ್ಲಿ ಪ್ರತಿ ಒಂದಕ್ಕೂ ಕೆಳಗೆ ಬರದ ಯಂತ್ರದಲ್ಲಿ ತೋರಿಸಿರುವಂತೆ ೩–೩ ರೂಪಗಳುಂಟೆಂತಲೂ,

ದ್ಯುಲೋಕ, ದಿಕ್ಕುಗಳು, ವಿದ್ಯುತ್, ಇವುಗಳೆಲ್ಲ ವಾಯುಪತ್ನಿಗಳು. ಅವುಗಳು ಮತ್ತು ಆಕಾಶ ಇವೆಲ್ಲಕ್ಕೂ ರಮಾದೇವಿ (ಶ್ರೀ) ಅಭಿಮಾನಿ ಎಂತಲೂ, ಹೇಳುವದಲ್ಲದೆ ಪ್ರಸ್ತುತ (೩–೭) ಶ್ರು

या त्रिरूपोदेवः । (अग्निः) । पृथिवीमानी भूदेवी ॥

(४) समानवायुमनःपर्जन्याभिमानितया त्रिरूपइन्द्रः × विद्युत् विद्युन्मानीवायुपत्नी ॥

(५) उदानवाय्वाकाशमानितया त्रिरूपोमुख्यवायुः × वायुः प्रसिद्धवायुमानी । आकाशमानी विशेषेण लक्ष्म्याविष्टतयाऽऽकाशइत्युक्तो मुख्यवायुः । आकाशश्चवायौ विशेषसन्निधियुतालक्ष्मीरित्यर्थः ।

यत्किञ्च यत्किञ्चिज्ज्ञानानंदादिरूपं ब्रह्माख्यं वस्तु ॥ रा. वे. ॥

ತಿಗಳಲ್ಲಿ ದ್ಯು, ಆದಿತ್ಯ, ಮೊದಲಾದವು ಗಳು ಅಧಿಷ್ಠಾನವಾಗಿರುವದು ಏನು ಇದೆಯೋ॰ ಅದು ಎಂದರೆ ಜ್ಞಾನಾನಂದ ರೂಪವಾದ ಬ್ರಹ್ಮವೆಂಬ ವಸ್ತು ಎಂದು ಅರ್ಥ ಹೇಳುತ್ತಾರೆ.

| | ದೇವತೆಗಳು | ೧ನೇ ರೂಪ | ೨ನೇ ರೂಪ | ೩ನೇ ರೂಪ | |
|---|---|---|---|---|---|
| ೧ | ಸೂರ್ಯ | ಪ್ರಾಣವಾಯು | ಚಕ್ಷುಸ್ | ಆದಿತ್ಯ | ದ್ಯು |
| ೨ | ಚಂದ್ರ | ವ್ಯಾನವಾಯು | ಶ್ರೋತ್ರ | ಚಂದ್ರ | ದಿಕ್ಕುಗಳು |
| ೩ | ಅಗ್ನಿ | ಅಪಾನವಾಯು | ವಾಕ್ | ಭೂಮಿ | ಪೃಥ್ವಿ |
| ೪ | ಇಂದ್ರ | ಸಮಾನ ವಾಯು | ಮನಸ್ಸು | ಪರ್ಜನ್ಯ | ವಿದ್ಯುತ್ |
| ೫ | ಮುಖ್ಯ ವಾಯು | ಉದಾನ ವಾಯು | ವಾಯು | ಆಕಾಶ | |

## V ನೇ ಪಾಠ.

# ಜಾಗ್ರದವಸ್ಥೆ.

(१) अन्नमशितंत्रेधाविधीयते । तस्य यः स्थविष्ठो धातुस्तत्पुरीषं भवति । योमध्यमस्तन्मांꣳसंयोऽणिष्ठस्तन्मनः ॥ (६—५—१).

(೧) ತಿಂದ ಅನ್ನವು ೩ ವಿಧವಾಗಿ ವಿಂಗಡಿಸಲ್ಪಡುತ್ತದೆ. ಅದರ ಅತ್ಯಂತ ಸ್ಥೂಲವಾದ ಧಾತು (ಅಂಶ) ಯಾವದೋ ಅದು ಮಲವಾಗುತ್ತದೆ. ಮಧ್ಯತರಹದ್ದು ಯಾವದೋ ಅದು ಮಾಂಸ(ವಾಗುತ್ತದೆ). ಅತ್ಯಂತ ಸೂಕ್ಷ್ಮವಾದದ್ದು ಯಾವದೋ ಅದು ಮನಸು (ಆಗುತ್ತದೆ).

(२) आपः पीतास्त्रेधाविधीयन्ते । तासां यःस्थविष्ठो धातुस्तन्मूत्रं भवति । यो मध्यमस्तल्लोहितं । योऽणिष्ठः सप्राणः ॥ (६—५—२).

(೨) ಕುಡಿದ ನೀರು ೩ ವಿಧವಾಗಿ ವಿಂಗಡಿಸಲ್ಪಡುತ್ತದೆ. ಅದರ ಅತ್ಯಂತ ಸ್ಥೂಲವಾದ ಧಾತು ಯಾವದೋ ಅದು ಮೂತ್ರವಾಗುತ್ತದೆ. ಮಧ್ಯಮ ತರಹದ್ದು ಯಾವದೋ ಅದು ರಕ್ತ(ವಾಗುತ್ತದೆ). ಅತ್ಯಂತ ಸೂಕ್ಷ್ಮವಾದದ್ದು ಯಾವದೋ ಅದು ಪ್ರಾಣ(ವಾಗುತ್ತದೆ).

(३) तेजोऽशितंत्रेधाविधीयते । तस्य यःस्थविष्ठोधातुस्तदस्थि भवति । योमध्यमः समज्जा । योऽणिष्ठः सावाक् ॥ (६—५—३).

(೩) ತಿಂದಂಥಾ ತೇಜಸ್ (ಸ್ನೇಹ ಪದಾರ್ಥ) ೩ ವಿಧವಾಗಿ ವಿಂಗಡಿಸಲ್ಪಡುತ್ತದೆ. ಅದರ ಅತ್ಯಂತ ಸ್ಥೂಲವಾದ ಧಾತು ಯಾವದೋ ಅದು ಎಲುಬು ಆಗುತ್ತದೆ. ಮಧ್ಯತರಹದ್ದು ಯಾವದೋ ಅದು ಮಜ್ಜಾ (ಎಲುವಿನೊಳಗಿರುವ ಸ್ನೇಹ ಪದಾರ್ಥ). ಅತ್ಯಂತ ಸೂಕ್ಷ್ಮವಾದದ್ದು ಯಾವದೋ ಅದು ವಾಕ್ (ಆಗುತ್ತದೆ).

(४) अन्नमयꣳ हि सोम्य! मन आपोमयः प्राणस्तेजोमयीवागिति ॥ भूयऐव मे भगवान् विज्ञापयत्विति । तथासोम्येतिहोवाच ॥ (६—५—४).

(೪) ಆದಕಾರಣ ಹೇ ಸೋಮ್ಯ! (ಶ್ವೇತಕೇತು) ಮನಸು ಅನ್ನಮಯ(ವಾದದ್ದು); ಪ್ರಾಣವು ಜಲಮಯ(ವಾದದ್ದು); ವಾಕ್ ತೇಜೋಮಯ(ವಾದದ್ದು); ಎಂದು

(ಉದ್ದಾಲಕರು ಅಪ್ಪಣೆಕೊಟ್ಟರು. ಆಗ ಅವನು) "ಪುನಃ ನನಗೆ ಅಪ್ಪಣೆ ಕೊಡಬೇಕು ಸ್ವಾಮಿ!" ಎಂದು (ಕೇಳಿಕೊಳ್ಳಲು), ಹಾಗಾಗಲಿ ಸೋಮ್ಯ! ಎಂದು (ಆ ಋಷಿಗಳು) ಹೇಳಿದರು.

(५) दध्नः सोम्य! मथ्यमानस्य योऽणिमासऊर्ध्वः समुदीषतितत्सर्पिर्भवति ॥ (६—६—१)

एवमेवखलुसोम्यान्नस्याश्यमानस्य योऽणिमासऊर्ध्वः समुदीषतितन्मनो भवति ॥ (६—६—२).

(೫) ಹೇ ಸೋಮ್ಯ! ಕಡೆಯುವ ಮೊಸರಿನ ಯಾವ ಸೂಕ್ಷ್ಮವಾದ ಧಾತು ಇದೆಯೋ ಅದು ಮೇಲೆ ಏರುತ್ತದೆ. ಅದು ತುಪ್ಪವಾಗುತ್ತದೆ.

ಅದೇ ರೀತಿ ಹೇ ಸೋಮ್ಯ! ತಿಂದ ಅನ್ನದ ಯಾವ ಸೂಕ್ಷ್ಮವಾದ ಧಾತು ಇದೆಯೋ ಅದು ಮೇಲೆ ಏರುತ್ತದೆ. ಅದು ಮನಸ್ಸು ಆಗುತ್ತದೆ.

(६) अपांःसोम्यपीयमानानां योऽणिमासऊर्ध्वः समुदीषति सप्राणो भवति ॥ (६—६—३).

(೬) ಹೇ ಸೋಮ್ಯ! ಕುಡಿದ ನೀರಿನ ಯಾವ ಸೂಕ್ಷ್ಮವಾದ ಧಾತು ಇದೆಯೋ ಅದು ಮೇಲೆ ಏರುತ್ತದೆ. ಅದು ಪ್ರಾಣವಾಗುತ್ತದೆ.

(७) तेजसः सोम्याश्यमानस्य योऽणिमासऊर्ध्वः समुदीषति सावाग्भवति ॥ (६—६—४).

(೭) ಹೇ ಸೋಮ್ಯ! ತಿಂದಂಥಾ ತೇಜಸ್ಸಿನ ಯಾವ ಸೂಕ್ಷ್ಮವಾದ ಧಾತು ಇದೆಯೋ ಅದು ಮೇಲೆ ಏರುತ್ತದೆ. ಅದು ವಾಕ್ ಆಗುತ್ತದೆ.

(८) अन्नमयः हि सोम्य! मन आपोमयः प्राणस्तेजोमयीवागिति ॥ भूयएव मा भगवान् विज्ञापयत्विति । तथासोम्येति होवाच ॥ (६—६—५).

(೮) ಆದಕಾರಣ, ಹೇ ಸೋಮ್ಯ! ಮನಸ್ಸು ಅನ್ನಮಯ(ವಾದದ್ದು). ಪ್ರಾಣವು ಜಲಮಯ(ವಾದದ್ದು); ವಾಕ್ ತೇಜೋಮಯ(ವಾದದ್ದು) ಎಂದರು. (ಆಗ ಅವನು) "ಪುನಃ ನನಗೆ ಅಪ್ಪಣೆ ಕೊಡಬೇಕು ಸ್ವಾಮಿ!" ಎಂದು (ಕೇಳಿಕೊಳ್ಳಲು), ಹಾಗಾಗಲಿ ಸೋಮ್ಯ! ಎಂದರು.

(९) षोडशकलः सोम्य! पुरुषः पञ्चदशाहानिमाशीः काममपः पिबाऽपोमयः प्रा

(೯) ಹೇ ಸೋಮ್ಯ! ಪುರುಷನು ೧೬ ಕಲೆಗಳುಳ್ಳವನು. ೧೫ ದಿವಸಗಳ

णोनापिबतोविच्छेत्स्यत इति ॥ (६–७–१). ತನಕ ಉಣ್ಣಬೇಡ, ಬೇಕಾದಷ್ಟು ನೀರು ಕುಡಿ. ಪ್ರಾಣವು ಜಲಮಯವಾದದ್ದು. (ಆದಕಾರಣ) ನೀರು ಕುಡಿಯುವವನ ಪ್ರಾಣವು ಹೋಗದು ಎಂದರು.

(१०) सहपञ्चदशाहानि नाशाथैहेन मुपससाद । किंब्रवीमि भो इत्यृचः सोम्य! यजूꣳषिसामानीति ॥ सहोवाच नवैमा प्र तिभान्ति भो इति ॥ (६–७–२).

(೧೦) ಅವನು ೧೫ ದಿವಸಗಳ ತನಕ ಉಣ್ಣಲಿಲ್ಲ. ಅನಂತರ ಅವನ (ತಂದೆಯು) ಬಳಿಗೆ ಹೋದನು; (ಮತ್ತು) ಸ್ವಾಮಿ! ನಾನು ಏನು ಹೇಳಬೇಕು? ಎಂದು (ಕೇಳಿದನು). ಋಕ್ (ಮಂತ್ರ)ಗಳು, ಎಜುರ್ (ಮಂತ್ರ)ಗಳು, ಸಾಮಗಳು (ಪಠಿಸು) ಎಂದರು. (ಶ್ರದಕ್ಷವನು) ಸ್ವಾಮಿ! (ಅವುಗಳು) ನನ್ನ ಮನಸ್ಸಿಗೆ ಹೊಳೆಯುವದೇ ಇಲ್ಲ ಎಂದು ಉತ್ತರ ಹೇಳಿದನು.

(११) तꣳहोवाच यथासोम्य! मह तोऽभ्याहितस्यैकोऽङ्गारः खद्योतमात्रः प रिशिष्टः स्यात्तेन ततोपि नबहुदहेदेवꣳ सो म्य! ते षोडशानां कलानामेकाकलाऽति शिष्टास्यात्तयैतर्हिवेदान्नानुभवस्यशानाथमे विज्ञास्यसीति ॥ (६–७–३).

(೧೧) (ಆಗ) ಅವಗೆ (ಉದ್ಧಾಲಕರು) ಹೇಳಿದ್ದೇನಂದರೆ:— ಹೇ ಸೋಮ್ಯ! ಮಹತ್ತಾದ ವೃದ್ಧಿಹೊಂದಿದಂಥಾ ಅಗ್ನಿಯದಾದ ಒಂದು ಹೊನ್ನೆಹುಳದ (ಬೆಳಕಿನ)ಷ್ಟು ಮಾತ್ರ (ಚಿಕ್ಕದಾಗಿ) ಉಳದಿರುವ ಕೆಂಡವು ಅದಕ್ಕಿಂತಲೂ ಹೆಚ್ಚಾಗಿ ಹೇಗೆ ಜ್ವಲಿಸದೋ ಹಾಗೆ ಹೇ ಸೋಮ್ಯ! ನಿನ್ನ ೧೬ ಕಲೆಗಳಲ್ಲಿ ಒಂದು ಕಲೆ ಮಾತ್ರ ಉಳದಿದೆ. ಅದರಿಂದ ವೇದಗಳು ನಿನಗೆ ಅನುಭವವಾಗುವದಿಲ್ಲವಾದ ಪಕ್ಷದಲ್ಲಿ ಭೋಜನ ಮಾಡು. ಅನಂತರ ನಾನು ಹೇಳುವದು ನಿನಗೆ ತಿಳದೀತು ಎಂದು.

(१२) सहाशाथैहेनमुपससाद । तꣳह यत्किञ्चपप्रच्छ सर्वꣳहप्रतिपेदे । तꣳहो वाच ॥ (६–७–४).

(೧೨) ಅವನು (ಶ್ವೇತಕೇತು) ಅಶನಮಾಡಿ ಅನಂತರ ತಂದೆಯ ಬಳಿಗೆ ಹೋದನು. ತಂದೆಯು ಮಗನ ಕೂಡೆ ಏನೋ ಕೇಳಿದರು. ಅವನು ಎಲ್ಲ ಹೇಳಿದನು. (ಆಗ) ಅವನಿಗೆ (ಉದ್ಧಾಲಕರು) ಹೇಳಿದ್ದೇನಂದರೆ:—

(१३) यथासोम्य! महतोऽभ्याहित स्यैकमङ्गारं खद्योतमात्रं परिशिष्टं तंतृणैरु

(೧೩) ಹೇ ಸೋಮ್ಯ! ಮಹತ್ತಾದಂಥಾ ವೃದ್ಧಿಯನ್ನು ಪಡದ ಅಗ್ನಿಯು

षसमाधायप्राज्वलयेत्तेन ततोऽपि बहुदहेत् (६–७–५). ಒಂದು ಹೊನ್ನೇಹುಳದ (ಬೆಳಗಿನ)ಷ್ಟು ಚಿಕ್ಕದಾಗಿ ಉಳದ ಕೆಂಡವು ತೃಣಗಳಿಂದ ಉಪಚರಿಸಿ ಉರಿಸಿದರೆ, ಅದಕ್ಕಿಂತಲೂ ಹೆಚ್ಚಾಗಿ ಹೇಗೆ ಜ್ವಲಿಸೀತೋ,

(१४) एवं सोम्य! तेषोडशानां कलानामेका कलाऽतिशिष्टाऽभूत्साऽन्नेनोपसमाहिता प्राज्वलीतयैतर्हिवेदाननुभवस्यन्नमयं हि सोम्य! मन आपोमयः प्राणस्तेजोमयीवागिति ॥ तद्धास्यविजज्ञाविति विजज्ञाविति ॥ (६–७–६).

(೧೪) ಹಾಗೆ ಹೇ ಸೋಮ್ಯ! ನಿನ್ನ ೧೬ ಕಲೆಗಳಲ್ಲಿ ಒಂದು ಕಲೆಯು ಉಳಿದಿತ್ತು. ಅದು ಅನ್ನದಿಂದ ಉಪಚರಿಸಲ್ಪಟ್ಟ ಕಾರಣ ಜ್ವಲಿಸಿತು. ಅದರಿಂದ ಈಗ ನಿನಗೆ ವೇದಗಳು ಗೋಚರವಾಗುತ್ತವೆ. ಯಾಕಂದರೆ, ಹೇ ಸೋಮ್ಯ! ಮನಸು ಅನ್ನಮಯ(ವಾದದ್ದು), ಪ್ರಾಣವು ಜಲಮಯ(ವಾದದ್ದು), ವಾಕ್ ತೇಜೋಮಯ(ವಾದದ್ದು), ಎಂದರು. ಅದನ್ನು (ಶ್ವೇತಕೇತು) ಗ್ರಹಿಸಿದನು, ಗ್ರಹಿಸಿದನು ಎಂದು (ಹೇಳೋಣಾಗುತ್ತದೆ).

(१५) अशनापिपासे मेसोम्य! विजानीहीति । यत्रैतत्पुरुषोऽशिशिषति नामाऽपएवतदशितं नयन्ते । तद्यथागोनायोऽश्वनायः पुरुषनाय इत्येवंतदप आचक्षतेऽशनायेति । तत्रैतच्छुङ्गमुत्पतितं सोम्य! विजानीहि । नेदममूलं भविष्यतीति ॥ (६–८–३)-

(೧೫) ಹೇ ಸೋಮ್ಯ! ಹಸಿವೆ ತೃಷೆಗಳ ವಿಷಯವನ್ನು ನೀನು ನನ್ನಿಂದ ಚನ್ನಾಗಿ ತಿಳದುಕೊ. ಯಾವಾಗ ಈ ಪುರುಷನು ಉಣ್ಣಲಿಕ್ಕೆ ಇಚ್ಛಿಸುತ್ತಾನೆಂದು ಹೇಳಲ್ಪಡುತ್ತಾನೋ (ಆಗ) ಅವನು ತಿಂದ ಅನ್ನವನ್ನು ಜಲವೇ ಕೊಂಡುಹೋಗುತ್ತದೆ. ಆದಕಾರಣ, ಹೇಗೆ (ದನ ಮೇಯಿಸುವವಗೆ) ಗೋನಾಯ, (ಕುದುರೆ ತಿರುಗಿಸುವವಗೆ) ಅಶ್ವನಾಯ, (ಅರಸು ಅಥವಾ ಸೇನಾಧಿಪತಿಗೆ) ಪುರುಷನಾಯ, ಎಂದು ಹೇಳುತ್ತಾರೋ, ಹಾಗೆ ಜಲಕ್ಕೆ ಅಶನಾಯ ಎಂದು ಹೇಳುತ್ತಾರೆ. ಅದರಿಂದ ಹೇ ಸೋಮ್ಯ! ಈ (ದೇಹರೂಪವಾದ) ಕಾರ್ಯವು ಉಂಟಾಗಿದೆ. ಇದು ಮೂಲ (ಕಾರಣ) ರಹಿತವಾದದ್ದಲ್ಲ ಎಂದು ನಿಶ್ಚಯವಾಗಿ ತಿಳದುಕೋ.

(१६) तस्यक्वमूलं स्यादन्यत्रान्नादेवमेवखलुसोम्यान्नेन शुङ्गेनापोमूलमन्विच्छा

(೧೬) ಅದಕ್ಕೆ ಅನ್ನವಲ್ಲದೆ ಬೇರೆ ಎಲ್ಲಿ ಮೂಲವಿದ್ದೀತು? ಹೇ ಸೋಮ್ಯ!

द्भिः सोम्य! शुङ्गेनतेजोमूलमन्विच्छ। ते जसासोम्म! शुङ्गेन सन्मूलमन्विच्छ।सन्मूलाः सोम्येमाः सर्वाःप्रजाः सदायतनाः सत्प्रतिष्ठाः॥ (६—८—४).

ಹಾಗೆಯೇ ಅನ್ನದ ಕಾರ್ಯದಿಂದ ಜಲಮೂಲವನ್ನು ಅನ್ವೇಷಣಮಾಡು. ಜಲದ ಕಾರ್ಯದಿಂದ ತೇಜೋಮೂಲವನ್ನು ಅನ್ವೇಷಣ ಮಾಡು. ತೇಜಸಿನ ಕಾರ್ಯದಿಂದ ಸನ್ಮೂಲವನ್ನನ್ವೇಷಣ ಮಾಡು. ಹೇ ಸೋಮ್ಯ! ಈ ಸಕಲ ಪ್ರಜೆಗಳೂ ಸನ್ಮೂಲವಾಗಿ ಉಳ್ಳವುಗಳು. ಸದಾಶ್ರಯವಾಗಿ ಉಳ್ಳವುಗಳು. ಸತ್‌ದಲ್ಲಿ ಸ್ಥಾಪಿಸಲ್ಪಟ್ಟವುಗಳು ಆಗಿರುತ್ತವೆ.

(१७) अथयत्रैतत्पुरुषः पिपासति नाम तेजएवतत्पीतं नयते। तद्यथागोनायोऽश्वनायः पुरुषनाय इत्येवं तत्तेज आचष्ट उदन्येति। तत्रैतदेवशुङ्गमुत्पतितं सोम्य विजानीहि। नेदममूलं भविष्यतीति॥ (६—८—५).

(೧೭) ಅನಂತರ ಯಾವಾಗ ಈ ಪುರುಷನು ನೀರು ಕುಡಿಯಲಿಕ್ಕೆ ಇಚ್ಛಿಸುತ್ತಾನೆಂದು ಹೇಳಲ್ಪಡುತ್ತಾನೋ (ಆಗ) ಅವನು ಕುಡಿದ ನೀರನ್ನು ತೇಜಸ್ಸೇ ಕೊಂಡುಹೋಗುತ್ತದೆ. ಆದ ಕಾರಣ, ಹೇಗೆ ಗೋನಾಯ, ಅಶ್ವನಾಯ, ಪುರುಷನಾಯ, ಎಂದು ಹೇಳುತ್ತಾರೋ ಹಾಗೆ ತೇಜಸ್ಸಿಗೆ "ಉದನ್ಯ" ಎಂದು ಹೇಳುತ್ತಾರೆ. ಅದರಿಂದಲೂ ಹೇ ಸೋಮ್ಯ! ಈ (ದೇಹರೂಪವಾದ) ಕಾರ್ಯವು ಉಂಟಾಗಿದೆ. ಇದು (ಮೂಲ)ರಹಿತವಾದದ್ದಲ್ಲ ಎಂದು ಚನ್ನಾಗಿ ತಿಳಿದುಕೊ.

(१८) • तस्यक्कमूलं स्यादन्यत्राद्भ्योऽद्भिःसोम्य! शुङ्गेन तेजोमूलमन्विच्छ तेजसासोम्य! शुङ्गेन सन्मूलमन्विछ।सन्मूलाः सोम्येमाः सर्वाःप्रजाः सदायतनाः सत्प्रतिष्ठा यथातुखलुसोम्येमास्तिस्रोदेवताः पुरुषं प्राप्य त्रिवृत्त्रिवृदेकैका भवति तदुक्तं पुरस्तादेव भवति॥ (६—८—६).

(೧೮) ಅದಕ್ಕೆ ಜಲವಲ್ಲದೇ ಬೇರೆ ಎಲ್ಲಿ ಮೂಲವಿದ್ದೀತು? ಹೇ ಸೋಮ್ಯ! ಜಲದ ಕಾರ್ಯದಿಂದ ತೇಜೋಮೂಲವನ್ನು ಅನ್ವೇಷಣ ಮಾಡು. ತೇಜಸ್ಸಿನ ಕಾರ್ಯದಿಂದ ಹೇ ಸೋಮ್ಯ! ಸನ್ಮೂಲವನ್ನು ಅನ್ವೇಷಣ ಮಾಡು. ಹೇ ಸೋಮ್ಯ! ಈ ಸಕಲ ಪ್ರಜೆಗಳೂ ಸನ್ಮೂಲವಾಗಿ ಉಳ್ಳವುಗಳು. ಸತ್ ಆಶ್ರಯವಾಗಿ ಉಳ್ಳವುಗಳು. ಸತ್‌ದಲ್ಲಿ ಸ್ಥಾಪಿಸಲ್ಪಟ್ಟವುಗಳು ಆಗಿವೆ. ಹೇ ಸೋಮ್ಯ! ಈ (ತೇಜಸ್ ಮೊದಲಾದ) ೩ ದೇವತೆಗಳು ಪುರುಷನನ್ನು ಪ್ರಾಪಿಸಿ (ಅವುಗಳಲ್ಲಿ) ಪ್ರತಿ ಒಂದು ದೇವತೆಯು ಹೇಗೆ ತ್ರಿವೃತ್ ತ್ರಿವೃತ್ ಆಗಿದೆ ಎಂಬದನ್ನು ಈ ಮೊದಲೇ (I) ಹೇಳೋಣಾಗಿದೆ.

Vನೇ ಪಾಠದ

## ವ್ಯಾಖ್ಯಾನ ಸಂಗ್ರಹ.

अन्नमशितं भुक्तंत्रेधाविधीयते जाठरेणाग्निनापच्यमानं त्रिधाविभज्यते । कथं? तस्य अन्नस्य त्रेधाविधीयमानस्य यःस्थविष्टः स्थूलतमोधातुः स्थूलतमं वस्तुविभक्तस्य स्थूलोऽशःतत्पुरीषं भवति । योमध्यमोऽशः धातुरन्नस्यतद्रसादिक्रमेण परिणम्य मांसं भवति । योऽणिष्टः अणुतमोधातुः स ऊर्ध्वं हृदयं प्राप्य सूक्ष्मासुहिताख्यासु नाडीष्वनुप्रविश्य वागादिकरणसंघातस्यस्थितिमुत्पादयन्मनोभवति मनोरूपेण परिणमन्मनसउपचयं करोति । ततश्चान्नोपचितत्वान्मनसो भौतिकमेव । × । तेजोऽशितं तैलघृतादिभक्षितं त्रेधाविधीयते । × । तैलघृतादिभक्षिणाद्धिवाग्विशदाभषणेसमर्था भवतीति प्रसिद्धं लोके ॥ शं ॥ अशितं पुरुषेणभुक्तं जाठराग्निनापच्यमानमन्नं स्थविष्ठमध्यमाणिष्ठरूपेण त्रेधाविभक्तं भवति।×। अणिष्ठांशस्तुमनस आप्यायकतामापद्यते । मनसः आहंकारिकत्वेन अन्नविकारत्वाभावादितिभावः । × अपांसूक्ष्मांशः प्राणाप्यायको भवतीत्यर्थः । घृततैलादेः पीतस्यसूक्ष्मांशोवागाप्यायकइत्यर्थः ॥ रं ॥ प्रत्यहं भुज्यमानाश्नादिमध्यमाणिमाभ्यां मांसमनःप्रभृतेर्भवनं नामोपचयोध्येयः ॥ रा ॥

ಈ ಪಾಠದ ೪ನೇ ವರೇಗಿನ ಶ್ರುತಿಗಳಲ್ಲಿ ಪ್ರಾಣಿಗಳ ವಾಕ್, ಪ್ರಾಣ, ಮನಸು ಇವುಗಳು ಅವರು ಭಕ್ಷಿಸುವ ತೇಜೋಬನ್ನಸಮ್ಬಂಧವಾದ ಪದಾರ್ಥಗಳ ಅತ್ಯಂತ ಸೂಕ್ಷ್ಮವಾದ ಧಾತುಗಳಿಂದ ಉಂಟಾಗುತ್ತವೆಂದು ಹೇಳಿರುವದರ ತಾತ್ಪರ್ಯವು ಇಲ್ಲದಿದ್ದ ಆ ಕರಣಗಳು ಹೊಸದಾಗಿ ಉಂಟಾಗುತ್ತವೆಂದು ಅಲ್ಲ. ಪರಂತು ಹುಟ್ಟುವಾಗ ಇದ್ದವುಗಳೇ ಆ ತಿಂದಂಥಾ ವಸ್ತುಗಳಿಂದ ವೃದ್ಧಿಯನ್ನು ಪಡೆಯುತ್ತವೆಂದು ಆಗಿರುವದಾಗಿ ಎಲ್ಲ ಆಚಾರ್ಯರು ಅಭಿಪ್ರಾಯ ಪಡುತ್ತಾರೆ.

ಆ ಪ್ರಕಾರ ಮನಸ್ಸು ಶಂಕರಾಚಾರ್ಯರ ಅಭಿಪ್ರಾಯ ಪ್ರಕಾರ (ಪಾಂಚ) ಭೌತಿಕ, ರಾಮಾನುಜಾಚಾರ್ಯರ ಅಭಿಪ್ರಾಯ ಪ್ರಕಾರ ಅಹಂಕಾರಿಕ ಸಹ ಆಗಿರುತ್ತದೆ.

(೧) ಈಗ ಇಲಿ ಹೆಗ್ಗಣ ಮೊದಲಾದ ಕೆಲವು ಜಂತುಗಳು ಕೇವಲ ಅನ್ನ (ಭತ್ತ ಮೊದಲಾದ ಕಠಿಣ ಪದಾರ್ಥ) ವನ್ನೇ ತಿಂದು ಜೀವಿಸುವಂಥವು. ಇವುಗಳಿಗೆ ವಾಗಿಂದ್ರಿಯ ಮತ್ತು ಪ್ರಾಣ ಸಹ ಇಲ್ಲವೋ? ಹಾಗೆಯೇ ಸಮುದ್ರದಲ್ಲಿರುವ ಮೊಸಳೆ, ಮೀನು ಇತ್ಯಾದಿಗಳು ಜಲವನ್ನು ಮಾತ್ರ ಸೇವಿಸುವಂಥವು. ಇವುಗಳಿಗೆ ಮನಸ್ಸು ಮತ್ತು ವಾಗಿಂದ್ರಿಯ ಇವುಗಳಿಲ್ಲವೋ? ಇನ್ನು ಕೆಲವು ಪ್ರಾಣಿಗಳು ಎಣ್ಣೆ, ತುಪ್ಪ ಇತ್ಯಾದಿ ತೇಜೋ ಪದಾರ್ಥಗಳನ್ನೇ ತಿಂದು ಜೀವಿಸುವಂಥವು. ಇವುಗಳಿಗೆ ಮನಸ್ಸು, ಮತ್ತು ಪ್ರಾಣ, ಇವುಗಳಿಲ್ಲವೋ? ಇರುವದಾದ ಮೇಲೆ, ೫ನೇ ಶ್ರುತಿಯಲ್ಲಿ ಮನಸ್ಸುಅನ್ನಮಯವಾದದ್ದು, ಪ್ರಾಣ ಜಲಮಯವಾದದ್ದು, ವಾಕ್ ತೇಜೋಮಯವಾದದ್ದೆಂದು ಹೇಳಿದ್ದು ಮೇಲೆ ಹೇಳಿದ ಪ್ರಾಣಿಗಳ ಸಂಗತಿಯಲ್ಲಿ ಹೇಗೆ ಸರಿ ಬೀಳುತ್ತದೆಂದರೆ:—

सर्वस्यत्रिवृत्करणस्योक्तत्वात्सर्वस्य सर्वोपपत्तेः । नह्यत्रिवृत्कृतमन्नं अश्नातिकश्चित् । आपोवाऽत्रिवृत्कृताः पीयन्ते । तेजोवाऽत्रिवृत्कृतमश्नातिकश्चिदित्यन्नादानामाखुप्रभृतीनां वाग्मित्वं प्राणवत्वं चेत्याद्यविरुद्धं ॥ शं ॥ सर्वस्यापि त्रिवृत्कृतत्वेन सर्वस्यापि भक्ष्यस्य तेजोऽबन्नरूपतया अन्नमयं हि सोम्य मन आपोमयः प्राणः तेजोमयीवागित्युपपद्यतइति नक्षतिरितिद्रष्टव्यं ॥ रं ॥

ಪ್ರಸ್ತುತ ತೇಜೋಬನ್ನಗಳಿಗೆ ಈ ಮೊದಲು ಹೇಳಿದಂತೆ ತ್ರಿವೃತ್ ಮಾಡಲ್ಪಟ್ಟಿರುವದರಿಂದ ಇವೆಲ್ಲಕ್ಕೂ ಎಲ್ಲ ಕೆಲಸಗಳನ್ನು ಮಾಡುವ ಶಕ್ತಿಯುಂಟು. ಹಾಗೆ ಇತರ ೨ ವಸ್ತುಗಳ ಬೆರಿಕೆ ಇಲ್ಲದ ಶುದ್ಧ ತೇಜಸ್, ಅಥವಾ ಜಲ, ಯಾ ಅನ್ನವನ್ನು ಯಾವ ಪ್ರಾಣಿಯೂ ಭಕ್ಷಿಸುವದಿಲ್ಲ; ಆದಕಾರಣ, ಮನಸು ಅನ್ನಮಯವಾದದ್ದು ಎಂದು ವಗೈರೆ ಹೇಳಿದ್ದು ಇಲಿ ಮೊದಲಾದ ಪ್ರಾಣಿಗಳ ಸಂಗತಿಯಲ್ಲಿಯೂ ಸರಿಬೀಳುತ್ತದೆಂದು ಶಂಕರಾಚಾರ್ಯರು ಮತ್ತು ರಾಮಾನುಜಾಚಾರ್ಯರು ಸಹ ಅಭಿಪ್ರಾಯ ಪಡುತ್ತಾರೆ.

(೨) ಮಧ್ವಾಚಾರ್ಯರ ಮತಪ್ರಕಾರ ಮೇಲೆ ಹೇಳಿದ ತೇಜೋಬನ್ನಗಳೊಂದಿಗೆ Iನೇ ಪಾದದಲ್ಲಿ ಹೇಳಿದ ಅವುಗಳ ಅಭಿಮಾನಿಗಳೆಂಬ ಶ್ರೀ, ಪ್ರಾಣ, ರುದ್ರ, ಇವರನ್ನೂ ಸೇರಿಸಿಕೊಳ್ಳಬೇಕು. ಯಾಕಂದರೆ ಆ ಮತದವರು,

अन्नादिशब्दैश्च पृथिव्यप्तेजोऽभिमान्यं

(ಪ್ರಸ್ತುತ) ಅನ್ನಾದಿಶಬ್ದಗಳಿಂದ ಪೃ

शैरुपेतान्येवाद्यमानजडानि ग्राह्याणि अभिमान्यंशानामद्यमानत्वं प्राणिभिरुपजीव्यत्वमेव । चिदचिन्मिलितमेवान्नादिकमद्यमानं सत्स्वांशैस्त्रेधा भूत्वामांसाद्यात्मकं भवति । चिदंशस्य मांसादिभवः तत्र सन्निधिविशेषएवेतिज्ञेयं ॥ ९ ॥

ಥ್ವಿ, ಜಲ, ತೇಜಸ್, ಇವುಗಳ ಅಭಿಮಾನ್ಯಂಶಗಳಿಂದ ಯುಕ್ತವಾದಂಥಾ ಭಕ್ಷಿಸಲ್ಪಡುವ ಜಡಪದಾರ್ಥಗಳನ್ನೇ ಗ್ರಹಿಸಬೇಕು; ಯಾಕಂದರೆ ಅಭಿಮಾನ್ಯಂಶಗಳ ಮಟ್ಟಿಗೆ ಅದ್ಯಮಾನತ್ವ (ಭಕ್ಷಿಸಲ್ಪಡುವ ಸ್ವಭಾವ) ಎಂದರೆ ಪ್ರಾಣಿಗಳಿಂದ ಉಪಜೀವನ (ಪ್ರಾಣ ಧಾರಣ) ಮಾಡಲ್ಪಡುವ ಸ್ವಭಾವ ಮಾತ್ರವಾಗಿರುತ್ತದೆ. ಜಡ ಚೇತನ ಇವೆರಡೂ ಮಿಶ್ರವಾದ ಅನ್ನಾದಿಗಳು ಭಕ್ಷಿಸಲ್ಪಡುವವುಗಳಾಗಿದ್ದುಕೊಂಡು ಆಯಾ ಅಂಶಗಳ•ಸಮೇತ ಮೂರು ವಿಧವಾಗಿ ವಿಂಗಡಿಸಲ್ಪಟ್ಟು ಮಾಂಸಾದಿ ಭಾವಗಳನ್ನು ಪಡೆಯುತ್ತವೆ. (ಆ ಪೈಕಿ) ಚೇತನಾಂಶವು ಮಾಂಸಾದಿಗಳಾಗೋಣವೆಂದರೆ ಅವುಗಳಲ್ಲಿ ಸನ್ನಿಧಿವಿಶೇಷವಾಗಿರೋಣ ಮಾತ್ರವೇ ಆಗಿರುತ್ತದೆಂದು ತಿಳಿಯುಬೇಕಾಗಿ ಹೇಳುತ್ತಾರೆ.

(೩) ೯ನೇ ಶ್ರುತಿಯಲ್ಲಿ ಹೇಳುವ ಪುರುಷನ ಕಲೆಗಳ ಕುರಿತು—

अन्नस्य भुक्तस्ययोऽणिष्ठो धातुःसमनसिशक्तिमधात् । साऽन्नोपचिता मनसः शक्तिः षोडशधाप्रविभज्य पुरुषस्य कलात्वेन निर्दिदिक्षिता । तयामनस्यन्नोपचितया शक्त्या षोडशधाप्रविभक्तयासंयुक्तः तद्वान् कार्यकारणसंघातलक्षणो जीवविशिष्टः षोडशकलउच्यते । यस्यांसत्यांद्रष्टा श्रोता मन्ता बोद्धा कर्त्ता विज्ञाता सर्वक्रिया समर्थः पुरुषो भवति । हीयमानायाश्च यस्यांसामर्थ्यहानिः । × । सर्वस्य कार्यकारण संघातस्य सामर्थ्यं मनःकृतमेव । मानसेन हिबलेन संपन्नाबलिनोदृश्यन्ते लोके ध्यानाहाराश्चकेचित् । अन्नस्य सर्वात्मकत्वात् ।

ಶಂಕರಾಚಾರ್ಯರು, ತಿಂದ ಅನ್ನದ ಯಾವ ಅತ್ಯಂತ ಸೂಕ್ಷ್ಮವಾದ ಧಾತು ಇದೆಯೋ, ಅದು ಮನಸ್ಸಿಗೆ ಶಕ್ತಿ ಕೊಡುತ್ತದೆ. ಅನ್ನದಿಂದ ವೃದ್ಧಿಹೊಂದಿದ ಆ ಮನಸ್ಸಿನ ಶಕ್ತಿಯನ್ನು ೧೬ ಪ್ರಕಾರ ವಿಂಗಡಿಸಿ, ಪುರುಷನ ಕಲೆಗಳಾಗಿ ತೋರಿಸಲಿಕ್ಕೆ (ಇಲ್ಲಿ) ಅಪೇಕ್ಷಿಸುವದಾಗುತ್ತದೆ. ಅನ್ನದಿಂದ ವೃದ್ಧಿಹೊಂದಿದಂಥಾ ೧೬ ಪ್ರಕಾರ ವಿಂಗಡಿಸಲ್ಪಟ್ಟ ಶಕ್ತಿಯುಕ್ತವಾದ ಮನಸು ಮತ್ತು ಜೀವ ಸಮೇತ ಕಾರ್ಯಕಾರಣ ಸಮೂಹರೂಪನಾದ ಪುರುಷನು ೧೬ ಕಲೆಗಳುಳ್ಳವನೆಂದು ಹೇಳುವದಾಗಿರುತ್ತದೆ. ಆ ಶಕ್ತಿ ಯಾರಲ್ಲಿ ಉಂಟೋ

अतोऽन्नकृतं मानसंवीर्यं ॥ शं ॥

ಆ ಪುರುಷನು ದ್ರಷ್ಟಾ* (ನೋಡುವವನು) ಶ್ರೋತಾ (ಕೇಳುವವನು), ಮಂತಾ (ಯೋಚಿಸುವವನು), ಬೋದ್ಧಾ (ತಿಳಿಯುವವನು), ಕರ್ತಾ (ಮಾಡುವವನು), ವಿಜ್ಞಾತಾ (ಜ್ಞಾನಸ್ವರೂಪನಾದವನು), ಸಕಲ ಕೆಲಸಗಳನ್ನು ಮಾಡಲಿಕ್ಕೆ ಸಾಮರ್ಥ್ಯ ಉಳ್ಳವನಾಗುತ್ತಾನೆ. ಅದು ಕಡಿಮೆಯಾದರೆ (ಇವನಿಗೂ) ಸಾಮರ್ಥ್ಯ ಕಡಿಮೆಯಾಗುತ್ತದೆ. ಸಕಲ ಕಾರ್ಯಕಾರಣ ಸಂಘಾತಕ್ಕೂ ಸಾಮರ್ಥ್ಯ ಉಂಟುಮಾಡಿಕೊಡುವದು ಮನಸ್ಸೇ ಆಗುತ್ತದೆ. ಅನ್ನವು ಸರ್ವಾತ್ಮಕವಾಗಿರುವದರಿಂದ ಲೋಕದಲ್ಲಿ ಕೆಲವರು ಮನೋಬಲ ಸಂಪನ್ನರಾಗಿ ಧ್ಯಾನರೂಪವಾದ ಆಹಾರದಿಂದ ಬಲವಂತರಾಗಿರುವಂಥವರು ಕಂಡುಬರುತ್ತಾರೆ. ಆದ್ದರಿಂದ ಮನಸ್ಸಿನ ಸಾಮರ್ಥ್ಯವು ಅನ್ನದಿಂದ ಉಂಟಾಗುವದಾಗಿರುತ್ತದೆ ಎಂದು ಹೇಳುತ್ತಾರೆ.

षोडशांशयुक्तमन आदिकलायुक्तः पुरुषः । ततश्च मनआदेष्षोडशांशः प्रत्यहं भुज्यमानैरन्नादिभिराप्यायितो भवति ॥ रं॥

ರಾಮಾನುಜಾಚಾರ್ಯರು ಈ ಪುರುಷನು ೧೬ ಅಂಶಗಳುಳ್ಳ ಮನಸು ಮೊದಲಾದ ಕಲೆಗಳುಳ್ಳವನು. ಆದ್ದರಿಂದ (ಇವನು) ದಿನವಹೀ ತಿನ್ನುವ ಅನ್ನಾದಿಗಳಿಂದ ಮನಸು ಮೊದಲಾದವುಗಳ ೧/೧೬ ಅಂಶವು ವೃದ್ಧಿಹೊಂದುತ್ತದೆಂದು ಹೇಳುತ್ತಾರೆ.

प्राणवाणीविनायकप्राणसुतमरुत्पावकबुधशनीन्द्ररुद्रचन्द्रवरुणवह्नि स्वाहापुष्करपर्जन्योषाख्यषोडशदेवैरभिमन्यमान प्राणश्रद्धाखवायुज्योतिरप्पृथिवीन्द्रियमनोन्न वीर्यतपोमन्त्रकर्मलोकनामाख्यषोडशकलः ॥ ॥ रा ॥ पुरुषो जीवः षोडशकलः । षोडशकलादेवताः यस्यासौ तथोक्तः । कला देवताश्चान्यत्रोक्ताः ॥ वे ॥

ಮಾಧ್ವರು, ಪುರುಷನೆಂದರೆ ಜೀವನು. ಅವನು ೧೬ ಕಲಾದೇವತೆಗಳ ಸಮೇತನಾಗಿರುವದರಿಂದ ೧೬ ಕಲೆಗಳುಳ್ಳವನೆಂದು ಹೇಳುವದು ಎಂದು ಹೇಳುತ್ತಾರೆ. ಅವರು ಹೇಳುವ ಆ ೧೬ ಕಲೆಗಳು ಮತ್ತು ಅವುಗಳ ಅಭಿಮಾನಿ ದೇವತೆಗಳು ಸಹ ಕೆಳಗೆ ಬರೆಯಲ್ಪಟ್ಟವುಗಳಾಗಿರುತ್ತವೆ.

*ಪ್ರ. ಉ. ೪–೯.

## ೧೬ ಕಲೆಗಳು ಮತ್ತು ಅವುಗಳ ದೇವತೆಗಳು.

| ಸಂಖ್ಯೆ | ಕಲೆಗಳ ಹೆಸರುಗಳು | ಅವುಗಳ ಅಭಿಮಾನಿದೇವತೆಗಳು | ಸಂಖ್ಯೆ | ಕಲೆಗಳ ಹೆಸರುಗಳು | ಅವುಗಳ ಅಭಿಮಾನಿದೇವತೆಗಳು |
|---|---|---|---|---|---|
| ೧ | ಪ್ರಾಣ | ಪ್ರಾಣ | ೯ | ಮನಸು | ರುದ್ರ |
| ೨ | ಶ್ರದ್ಧಾ | ವಾಣೀ | ೧೦ | ಅನ್ನ | ಚಂದ್ರ |
| ೩ | ಖ (ಆಕಾಶ) | ವಿನಾಯಕ | ೧೧ | ವೀರ್ಯ | ವರುಣ |
| ೪ | ವಾಯು | ಪ್ರಾಣಸುತ ಮರುತ್ | ೧೨ | ತಪಸ್ | ವಸ್ಥಿ |
| ೫ | ಜ್ಯೋತಿ | ಪಾವಕ | ೧೩ | ಮಂತ್ರ | ಸ್ವಾಹಾ |
| ೬ | ಅಪ್ (ಜಲ) | ಬುಧ | ೧೪ | ಕರ್ಮ | ಪುಷ್ಕರ |
| ೭ | ಪೃಥ್ವಿ | ಶನಿ | ೧೫ | ಲೋಕ | ಪರ್ಜನ್ಯ |
| ೮ | ಇಂದ್ರಿಯ | ಇಂದ್ರ | ೧೬ | ನಾಮ (ಹೆಸರು) | ಉಷಾ |

(೪) ಮೇಲೆ ಹೇಳಿದಂತೆ ಪುರುಷನು ಅವನ ಇಷ್ಟಪ್ರಕಾರ ತೇಜೋಬನ್ನ ಸಂಬಂಧವಾದ ಪದಾರ್ಥಗಳನ್ನು ಸೇವಿಸಲಿಕ್ಕೆ ಕಾರಣವಾದ ಹಸಿವೆ ಮತ್ತು ತೃಷೆ ಇವುಗಳೇ ಅವನ ಜಾಗ್ರದವಸ್ಥೆಯ ಮುಖ್ಯ ಲಕ್ಷಣಗಳಾಗಿವೆ. ಆ ಪೈಕಿ—

### ೧ನೇ ಹಸಿವೆಯ ಕುರಿತು.

---

यत्र यस्मिन्काले एतन्नामपुरुषो भवति किंतत्? अशिशिषति अशितुमिच्छतीति। तदातस्यपुरुषस्य किं निमित्तं नामभवतीति आह यत्तत्पुरुषेणाशितमन्नं कठिनं पीता आपोनयन्ते। द्रवीकृत्यरसादिभावेन परिणमयन्ते। तदाभुक्तमन्नं जीर्यते। अथ च भवत्यस्य नामाशिशिषतीतिगौणं। जीर्णे

ಶಂಕರಾಚಾರ್ಯರು, ಯಾವ ಕಾಲದಲ್ಲಿ ಪುರುಷನು ಈ ಹೆಸರು ಪಡೆಯುತ್ತಾನೋ; ಯಾವ ಹೆಸರು? "ಅಶನಮಾಡಲಿಕ್ಕೆ ಇಚ್ಛಿಸುತ್ತಾನೆ" ಎಂಬದು. (ಎಂದರೆ ಹಾಗೆ ಹೇಳಲ್ಪಡುತ್ತಾನೋ) ಆಗ ಆ ಪುರುಷನಿಗೆ ಯಾವ ಕಾರಣದಿಂದ (ಆ) ಹೆಸರು ಬರುತ್ತದೆ? ಎಂದರೆ, ಹೇಳೋಣಾಗುತ್ತದೆ.

ह्यन्नेऽशितुमिच्छति सर्वोहि जन्तुः ॥ तत्रापामशितनेत्वादशनायाइति नामप्रसिद्धं । । × । तत्र एवंसत्यद्भीरसादिभावं नीतेनाशितेनान्नेननिष्पादितमिदं शरीरं वटकणिकायामिवशुंगः अङ्कुरउत्पतितः उद्गतः । तमिमं शुङ्गं कार्यं शरीराख्यं वटादिशुङ्गवदुत्पतितं हे सोम्य विजानीहीति । किं तत्र विज्ञेयमिति उच्यते शृणु । इदं शुङ्गवत्कार्यत्वाच्छरीरं नामूलं मूलरहितं भविष्यति ॥ ॥ शं ॥

ಆ ಪುರುಷನು ತಿಂದಂಥಾ ಅನ್ನವೆಂಬ ಕಠಿಣ ಪದಾರ್ಥವನ್ನು ಕುಡಿದ ನೀರು ಕೊಂಡುಹೋಗುತ್ತದೆ (ಎಂದರೆ) ಅದನ್ನು ದ್ರವೀಕರಿಸಿ ರಸಾದಿಗಳಾಗಿ ಪರಿಣಾಮವನ್ನು ಹೊಂದಿಸುತ್ತದೆ. ಆಗ ತಿಂದಂಥಾ ಅನ್ನವು ಜೀರ್ಣವಾಗುತ್ತದೆ. ಅನಂತರ ಅವಗೆ "ಅಶನಮಾಡಲಿಕ್ಕೆ ಇಚ್ಛಿಸುತ್ತಾನೆ" ಎಂಬ ಗೌಣ (ಅಮುಖ್ಯ)ವಾದ ಹೆಸರು ಉಂಟಾಗುತ್ತದೆ. ಯಾಕಂದರೆ, ಅನ್ನ ಜೀರ್ಣವಾದರೆ ಸಕಲ ಜಂತುಗಳೂ ಉಣ್ಣಲಿಕ್ಕೆ ಇಚ್ಛಿಸುವದು ಪ್ರಸಿದ್ಧವಾಗಿರುತ್ತದೆ. ಆ (ಅನ್ನ ಮತ್ತು ಜಲ ಇವುಗಳ) ಪೈಕಿ ಜಲಕ್ಕೆ ತಿಂದದ್ದನ್ನು ಒಯ್ಯುವ ಸ್ವಭಾವವಾದ್ದರಿಂದ ಅದಕ್ಕೆ ಅಶನಾಯಾ ಎಂಬ ಹೆಸರು ಪ್ರಸಿದ್ಧವಾಗಿದೆ. ಹೀಗಾಗುತ್ತಿರಲಾಗಿ ನೀರಿನಿಂದ ರಸಾದಿ ಭಾವವನ್ನು ಪ್ರಾಪಿಸಿದಂಥಾ ಉಂಡ ಅನ್ನದಿಂದ ನಿಷ್ಪನ್ನವಾದ ಈ ಶರೀರವು ವಟಬೀಜದಲ್ಲಿ ಚಿಗುರಿದ ಮೊಳಿಕೆಯಂತೆ ಕಾರ್ಯರೂಪವಾಗಿ ಉತ್ಪನ್ನವಾಗಿರುತ್ತದೆ. ಹೇ ಸೋಮ್ಯ! ಈ ಶರೀರವೆಂಬ ಕಾರ್ಯರೂಪವಾದ ಮೊಳಿಕೆಯು ವಟ ಮೊದಲಾದ ವೃಕ್ಷದ ಮೊಳಿಕೆಯಂತೆಯೇ ಉತ್ಪನ್ನವಾಗಿ ಇದೆ ಎಂದು ತಿಳಿ. ಆ ಕುರಿತು ವಿಶೇಷವಾಗಿ ಏನು ತಿಳಿಯತಕ್ಕದು? ಎಂದರೆ (ಅಪ್ಪಣೆ ಕೊಡುತ್ತೇವೆ) ಕೇಳು. "ಈ ಶರೀರವು (ವೃಕ್ಷದ) ಮೊಳಿಕೆಯಂತೆಯೇ ಕಾರ್ಯವಾಗಿರುವದರಿಂದ (ಇದು) ಮೂಲ (ಕಾರಣ) ರಹಿತವಾದದ್ದಲ್ಲ" ಎಂದು ಹೇಳುತ್ತಾರೆ.

यत्रयदापुरुषोऽशिशिषतीत्येतन्नाम पुरुषोऽशिशिषतीतिशब्दं यदालोकाः प्रयुञ्जत इत्यर्थः । यदापुरुषस्याशिशिषा भवतीति यावत् । नामशब्दः प्रसिध्यर्थोवा । तदा आपस्तदशितं नयन्ते जीर्णतां प्रापय्यरस रूपेण शरीरं नयन्ते । तेनाशिते जीर्णे पुनर

ರಾಮಾನುಜಾಚಾರ್ಯರ ಅಭಿಪ್ರಾಯವೂ ಅದೇ ಆಗಿರುತ್ತದೆ.

ಇವರು ಕಾರ್ಯವೆಂಬದಕ್ಕೆಲ್ಲ ಕಾರಣ ಉಂಟೆಂದು ಹೇಳುತ್ತಾರೆ.

शिशिषाजायत इत्यर्थः । × । एवमशितने
त्रीरप अशनायेत्याचक्षत इत्यर्थः । अद्भीर
सभावं नीतेऽन्ने उत्पन्नमेतच्छरीराख्यं शु
ङ्गसदृशं कार्यं विजानीहीत्यर्थः । नन्वमूलमे
वेदं भवत्वित्यत्राह नेदं अमूलं भविष्यती
ति । कार्यमात्रस्य सकारणकत्वादित्यर्थः ॥
॥ रं ॥

यत्रेति । एतत्पुरुषः एषजीवः यत्रयदा
अशिशिषति अशितुं भोक्तुं इच्छतितदा आ
पएवाबभिमानी प्राणएवान्नेच्छामुत्पाद्य प
श्चादशितं भुक्तमन्नं पाकेन तेजःसयोगेनर
सवीर्यादिकरणेन नयन्ते । × । अशित ने
तृत्वं अपांकुतइत्यतोऽशनायाशब्दवाच्यत्वा
दितिसदृष्टान्तमाहतद्यथेति । × । एवं तद
पस्ता आपः अशनं नयन्तीत्यशनायेत्याच
क्षते । अबभिमानीच प्राणः तेजोमानिश्री
द्वाराभगवदधीन इति सिद्धमेवेतिभावः ॥
तत्रभगवतो जगत्कर्तृत्वेन प्राधान्येच ए
तत् शुंगं अङ्कुराख्यं कार्यज्ञापकमुत्पतित
मुत्पन्नं । प्राप्तमितिवा । सोम्यविजानीही
दं शुङ्गं जगद्वृक्षांकुरममूलं अकारणकं नभवि
ष्यति ॥ रा ॥

पुरुषः संसारी । × । एवं तत्तस्माद
शितनेतृत्वादपस्तदभिमानिदेवतां प्राणम
शनायेत्याचक्षते विद्वांसः । × । तत्रैवंसति
अद्भीरसादि भावेनाशितस्यजीर्णो भावेसति
तद्रेतोद्वाराएतत्प्रत्यक्षसिद्धं शिशुशरीरं उत्प

ಮಾಧ್ವರು ಈ ಸಂದರ್ಭದಲ್ಲಿ ಪುರುಷ
ನೆಂದರೆ ಸಂಸಾರಿಯಾದ ಜೀವನೆಂತಲೂ,
ಅವನಲ್ಲಿ ಅನ್ನದ ಅಪೇಕ್ಷೆ (ಹಸಿವೆ) ಹು
ಟ್ಟಿಸಿ ಅನಂತರ ತಿಂದ ಅನ್ನವನ್ನು ತೇಜ
ಸ್ಸಂಯೋಗದಿಂದ ಪಚನಮಾಡಿ ರಸ ವೀ
ರ್ಯಾದಿ ಭಾವದಲ್ಲಿ ಪರಿಣಾಮಗೊಳಿಸು
ವದು ಜಲಾಭಿಮಾನಿ ಪ್ರಾಣನೇ ಆಗಿರು
ತ್ತಾನೆ; ಆದ್ದರಿಂದ ವಿದ್ವಾಂಸರು ಪ್ರಾಣ
ನಿಗೆ ಅಶನಾಯಾ ಎಂದು ಹೇಳುವದಾಗಿ
ರುತ್ತದೆ. (ಎಂದರೆ) ಜಲಾಭಿಮಾನಿ ಪ್ರಾಣ
ನು ತೇಜಸ್ಸಿನ ಅಭಿಮಾನಿ ಲಕ್ಷ್ಮೀದ್ವಾರಾ
ಭಗವದಧೀನನೆಂದು ಸ್ಥಾಪಿಸಲ್ಪಡುತ್ತದೆಂ
ದು ತಾತ್ಪರ್ಯವೆಂತಲೂ;

ಹೀಗಾಗುತ್ತಿರಲಾಗಿ ಜಲದಿಂದ ರಸಾ
ದಿ ಭಾವವನ್ನು ಪಡದಂಥಾ ಉಂಡ ವಸ್ತು
ಜೀರ್ಣವಾಗಲು, ರೇತೋದ್ವಾರಾ ಪ್ರತ್ಯಕ್ಷ
ಸಿದ್ಧವಾದಂಥಾ ಈ ಶಿಶುಶರೀರ (ಜಗದ್ವೃ
ಕ್ಷದ ಮೊಳಕೆ ಎಂಬ ಕಾರ್ಯರೂಪವಾದ
ಜ್ಞಾಪಕ) ವು, ವಟಬೀಜದಿಂದ ಪರಿಣಮಿ
ಸಿದ ಮೊಳಕೆಯಂತೆ, ಉತ್ಪನ್ನವಾಗಿ ಇದೆ.

तितं सोम्यविजानीहि । शुंगमितिदृष्टान्तो
क्तिः । वटबीजात्परिणताच्छुंगमङ्कुरमिवे
त्यर्थः । किंतत इत्यत्राहनेति । हे सोम्मेदमु
त्पतितं शरीररूपं कार्यममूलमकर्तृकं न भ
विष्यतीति विजानीहि ॥ वे ॥

ಹೇ ಸೋಮ್ಯ! ಈ ರೀತಿ ಉತ್ಪನ್ನವಾದಂ
ಥಾ ಶರೀರರೂಪವಾದ ಕಾರ್ಯ (ಜಗತ್
ಎಂಬ ವೃಕ್ಷದ ಅಂಕುರ)ವು ಕಾರಣ (ಕ
ರ್ತೃ) ರಹಿತವಾದ್ದೆಂದು ತಿಳಿಯಬೇಡ.
ಈ ಜಗತ್ತಿಗೆ ಪರಮಾತ್ಮನೇ ಕರ್ತೃ. ಅವ
ನೇ ಮುಖ್ಯನಾಗಿರುತ್ತಾನೆಂಬುದಾಗಿ ಸಹ ಹೇಳುತ್ತಾರೆ.

ಇನ್ನು ಮೇಲೆ ಹೇಳಿದ ರಸಾದಿಗಳೆಂದರೆ:—

तस्यक्वमूलं स्यादन्यत्रान्नात् ॥ १६ ॥
अन्नमूलमित्यभिप्रायः । कथं? अशितंह्यन्न
मद्भिर्द्रवीकृतं जाठरेणाग्निनापच्यमानं रसा
दिभावेन परिणमते । रसाच्छोणितं शोणि
तान्मांसं मांसान्मेदः मेदसोऽस्थीनि अस्थि
भ्योमज्जामज्जातः शुक्रं । तथायोषिद्भुक्तं चा
न्नंरसादिक्रमेणैवं परिणतं लोहितंभवति ।
ताभ्यां शुक्रशोणिताभ्यामन्नकार्याभ्यां संयु
क्ताभ्यामन्नेनैव प्रत्यहं भुज्यमानेनापूर्यमा
णाभ्यां कुड्यमिवमृत्पिण्डैः प्रत्यहमुपचीयमा
नोऽन्नमूलोदेहशुङ्गः परिनिष्पन्नइत्यर्थः ॥
यत्तुदेहशुंगस्यमूलं अन्नं निर्दिष्टं तदपि देह
वद्विनाशोत्पत्तिमत्वात् कस्माच्चिन्मूलादु
त्पतितं शुंगमेवेतिकृत्वाह । यथादेहशुंगोऽ
न्नमूलः।एवमेव खलुसोम्यान्नेन शुङ्गेन का
र्यभूतेनापोमूलमन्नस्य शुंगस्यान्विच्छ । प्र
तिपद्यस्व । अपामपिविनाशोत्पत्तिमत्वाच्छुं
गत्वमेवेति अद्भिः सोम्य शुंगेन कार्येण का
रणं तेजोमूलमन्विच्छ । तेजसोपि विनाशो

ಶಂಕರಾಚಾರ್ಯರು ಅದಕ್ಕೆ (ಶರೀರ
ಕ್ಕೆ) ಅನ್ನವಲ್ಲದೆ ಬೇರೆ ಏನು ಮೂಲವಿ
ದ್ದೀತು? ಅನ್ನ ಮೂಲವೆಂದು ಅಭಿಪ್ರಾ
ಯ. ಅದು ಹೇಗೆ? (ಎಂದರೆ) ತಿಂದ ಅ
ನ್ನವು ಕುಡಿದ ನೀರಿನಿಂದ ದ್ರವೀಕರಿಸಲ್ಪ
ಟ್ಟು ಜಾಠರಾಗ್ನಿಯಿಂದ ಕರಗಿ ರಸ ಮೊ
ದಲಾದ ರೂಪದಲ್ಲಿ ಪರಿಣಮಿಸುತ್ತದೆ.
ಪ್ರಥಮತಃ ರಸ, ರಸದಿಂದ ಶೋಣಿತ
(ರಕ್ತ), ಶೋಣಿತದಿಂದ ಮಾಂಸ, ಮಾಂ
ಸದಿಂದ ಮೇದಸ್ (ಚರ್ಬಿ), ಮೇದಸ್
ನಿಂದ ಎಲು, ಎಲುಗಳಿಂದ ಮಜ್ಜಾ (ಅದ
ರೊಳಗಿರುವ ಜಿಡ್ಡುಳ ಪದಾರ್ಥ), ಮ
ಜ್ಜದಿಂದ ಶುಕ್ರ, (ಪುರುಷನ ವೀರ್ಯ).
ಹಾಗೆಯೇ ಒಬ್ಬಳು ಸ್ತ್ರೀ ತಿಂದಂಥಾ ಅ
ದೇ ರಸಾದಿಕ್ರಮದಲ್ಲಿಯೇ ಪರಿಣಮಿಸಿದ
ಅನ್ನವು (ಅವಳ) ಲೋಹಿತ (ರಜಸ್) ಆ
ಗುತ್ತದೆ. ಆ ಅನ್ನ ಕಾರ್ಯಗಳಾದಂಥಾ
ದಿನವಹಿ ತಿನ್ನುವ ಅನ್ನದಿಂದಲೇ ತುಂಬಿ
ಕೊಂಡು ಬರುವ ಶುಕ್ರಶೋಣಿತಗಳ ಸಂ

त्पत्तिमत्वाच्छुङ्गत्वमिति तेजसासोम्य शुङ्गे न सन्मूलमेकमेवाद्वितीयं परमार्थसत्यं यस्मिन् सर्वमिदं वाचारंभणं विकारो नामधेयमनृतं रज्वामिवसर्पादि विकल्पजातमध्यस्तमविद्यया तदस्यजगतोमूलं । अतः सन्मूलाः सत्कारणाः हेसोम्येमाः स्थावरजंगमलक्षणाः सर्वाः प्रजाः । न केवलं सन्मूलाएव इदानीमपि स्थितिकाले सदायतनाः सदाश्रयाएव । × । तन्मूलत्वात्सदायतनाः प्रजाः । अन्तेच सत्प्रतिष्ठाः । सदेवप्रतिष्ठालयः समाप्तिः अवसानं परिशेषोयासांताः सत्प्रतिष्ठाः ॥ शं ॥

ಯೋಗದಿಂದ ಮಣ್ಣುಮುದ್ದೆಗಳಿಂದ ದಿನ ದಿನ ಏರುವ ಗೋಡೆಯಂತೆ ಬೆಳೆಯುವ ಅನ್ನಮೂಲವಾದ ದೇಹಶುಂಗ (ಕಾರ್ಯ)ವು ನಿಷ್ಪನ್ನವಾಗಿರುತ್ತದೆ. ದೇಹರೂಪವಾದ ಕಾರ್ಯಕ್ಕೆ ಮೂಲವಾಗಿ ಯಾವ ಅನ್ನವನ್ನು ನಿರ್ದೇಶಮಾಡೋಣಾಯಿತೋ ಅದು ಕೂಡಾ ದೇಹದಂತೆಯೇ ವಿನಾಶ ಮತ್ತು ಉತ್ಪತ್ತಿಉಳ್ಳದ್ದಾದ್ದರಿಂದ (ಅದು) ಯಾವ ಮೂಲದಿಂದ ಉತ್ಪನ್ನವಾದ ಕಾರ್ಯವೆಂಬದನ್ನು ಹೇಳುತ್ತಾರೆ. ಹೇಗೆ ದೇಹರೂಪ ಕಾರ್ಯವು ಅನ್ನಮೂಲವಾದದ್ದೋ ಹಾಗೆಯೇ ಸೋಮ್ಯ! ಕಾರ್ಯಭೂತವಾದಂಥಾ ಅನ್ನದಿಂದ ಅದಕ್ಕೆ ಜಲಮೂಲವನ್ನು ತಿಳಿ. ಜಲವೂ ವಿನಾಶೋತ್ಪತ್ತಿ ಉಳ್ಳದಾದ್ದರಿಂದ ಕಾರ್ಯವೇ ಆಗಿರುವ ಪ್ರಯುಕ್ತ ಹೇ ಸೋಮ್ಯ! ಕಾರ್ಯಭೂತವಾದ ಜಲದಿಂದ ಕಾರಣಭೂತವಾದ ತೇಜೋಮೂಲವನ್ನು ತಿಳಿ. ತೇಜಸ್ ಕೂಡಾ ವಿನಾಶೋತ್ಪತ್ತಿ ಉಳ್ಳದ್ದಾದ್ದರಿಂದ ಕಾರ್ಯವಾಗಿರುವ ಪ್ರಯುಕ್ತ, ತೇಜೋರೂಪವಾದ ಕಾರ್ಯದಿಂದ ಪರಮಾರ್ಥ ಸತ್ಯವಾದಂಥಾ ಒಂದೇ ಮತ್ತು ಅದ್ವಿತೀಯವಾಗಿ ಉಳ್ಳ ಸದ್ರೂಪಮೂಲವನ್ನು (ತಿಳಿ). ಅಜ್ಞಾನದಿಂದ ಹಗ್ಗದಲ್ಲಿ ಆರೋಪಿಸಿದ ಸರ್ಪಾದಿ ವಿಕಲ್ಪಸಮೂಹದಂತೆ ಸತ್ಯವಲ್ಲದಂಥಾ ಬಾಯಿಯಿಂದ ಉಚ್ಚರಿಸಲ್ಪಡುವ ವಿಕಾರ ನಾಮಮಾತ್ರವೇ ಆಗಿರುವ ಇದೆಲ್ಲ ಯಾವದರಲ್ಲಿ ಆರೋಪಿಸಲ್ಪಟ್ಟಿದೆಯೋ ಆ ಸತ್ ಈ ಜಗತ್ತಿಗೆ ಮೂಲವಾಗಿರುತ್ತದೆ. ಆದಕಾರಣ ಹೇ ಸೋಮ್ಯ! ಸ್ಥಾವರಜಂಗಮರೂಪಗಳಾದಂಥಾ ಈ ಸಕಲ ಪ್ರಜೆಗಳು ಸತ್ ಕಾರಣವಾಗಿ ಉಳ್ಳವುಗಳಾಗಿವೆ. ಕೇವಲ ಸನ್ಮೂಲವಾಗಿ ಇರುವದು ಮಾತ್ರವಲ್ಲ, ಪ್ರಕೃತ ಸ್ಥಿತಿಕಾಲದಲ್ಲಿಯೂ ಸತ್ ಆಶ್ರಯವಾಗಿ ಉಳ್ಳವುಗಳು. ಸನ್ಮೂಲಕವಾದವುಗಳಾದ್ದರಿಂದ ಪ್ರಜೆಗಳು ಸದಾಶ್ರಯ ಉಳ್ಳವುಗಳು, ಅಂತ್ಯದಲ್ಲಿ ಸತ್ ಪ್ರತಿಷ್ಠೆ ಎಂದರೆ ಸತ್ಏ-ಲಯ-ಸಮಾಪ್ತಿ ಅವಸಾನವಾಗಿ ಉಳ್ಳವುಗಳು ಎಂದು ಹೇಳುತ್ತಾರೆ.

कार्यशरीरस्य सन्मूलकत्वान्मूलान्तरस्य चानुपलंभात् उपलब्धमन्नमेव मूलमित्यर्थ: । × । यथाशरीरेण कार्यभूतेनोपचीयमानेन तत्कारणमन्नमनुमीयते एवमेषान्नेन कार्येण अप:कारण मनुमिनुहीतियावत् । एवमुत्तरत्रापि सत्पर्यन्तां कारणपरंपरामनुमिनुहीत्यर्थ: । तत: किमित्यत्राह । सन्मूला: सोम्येमा: सर्वा: प्रजा: सदायतना: सत्प्रतिष्ठा: । एतस्यवाक्यस्यार्थ: पूर्वमुक्त एव ॥ ४ ॥

ರಂಗರಾಮಾನುಜಾಚಾರ್ಯರು ಕಾರ್ಯರೂಪವಾದ ಶರೀರಕ್ಕೆ ಸತ್ ಮೂಲಕವಾದ್ದರಿಂದಲೂ, ಬೇರೆ ಮೂಲ ಕಂಡುಬಾರದೇ ಇರುವದರಿಂದಲೂ, ತಿಳದು ಬಂದ ಅನ್ನವೇ (ಅದಕ್ಕೆ) ಮೂಲವೆಂದು ಅರ್ಥ. ಕಾರ್ಯರೂಪವಾಗಿ ವೃದ್ಧಿಯಾಗುವ ಶರೀರದಿಂದ ಅದಕ್ಕೆ ಕಾರಣವಾದ ಅನ್ನವು ಹೇಗೆ ಅನ್ವಯಿಸಲ್ಪಡುತ್ತದೋ, ಹಾಗೆಯೇ ಕಾರ್ಯರೂಪವಾದ ಅನ್ನದಿಂದ ಜಲಕಾರಣವನ್ನು ಅನ್ವಯಿಸು ಎಂದು ತಾತ್ಪರ್ಯ. ಇದೇ ರೀತಿ ಮುಂದೆ ಸತ್ ಪರ್ಯಂತರವೂ ಕಾರಣ ಪರಂಪರೆಯನ್ನು ಅನ್ವಯಿಸು ಎಂದು ಅರ್ಥ. (ಆದ್ದರಿಂದ) ಹೇ ಸೋಮ್ಯ! ಈ "ಸಕಲ ಪ್ರಜೆಗಳು ಸನ್ಮೂಲವಾಗಿ ಉಳ್ಳವುಗಳು, ಸದಾಶ್ರಯವಾಗಿ ಉಳ್ಳವುಗಳು, ಸತ್‌ದಲ್ಲಿ ಸ್ಥಾಪಿಸಲ್ಪಟ್ಟವುಗಳು" ಎಂದು (ಶ್ರುತಿಯು ಹೇಳುತ್ತದೆ.) ಈ ವಾಕ್ಯಕ್ಕೆ ಅರ್ಥ ಈ ಮೊದಲೇ ಹೇಳುವಣಾಗಿದೆ ಎಂದು ಹೇಳುತ್ತಾರೆ. ಆ ಅರ್ಥದ ಮುಖ್ಯ ಅಭಿಪ್ರಾಯವು ಕೆಳಗೆ ಬರದಂತೆ ಆಗಿರುತ್ತದೆ.

"प्रजाशब्देन सजीवं जगन्निर्दिश्यते प्रजाशरीकं ब्रह्मोच्यते शरीरभूत चेतनाचेतनमात्रमेवाभिधीयते । प्रजाशब्द: केवलाचिदचिन्मात्रपर: नतुब्रह्मपर: । सच्छब्देन चिदचिद्विशिष्टमेवोच्यते विशेष्यमात्रमेवाभिधीयते । सच्छब्दोपि केवल ब्रह्ममात्रपर: । सन्मूला: सत्प्रतिष्ठाइति पदद्वयं सच्छब्दवाच्य ब्रह्माधीनोत्पत्तिलयत्वपरं । सदायतना इति सदाधारकत्वमुच्यते । अनेनजगत: शरीरकत्वं फलितं । प्रतिष्ठानिष्ठापर्यवसानं

"ಪ್ರಜಾಶಬ್ದದಿಂದ ಜೀವ ಉಳ್ಳ (ಬದುಕಿಕೊಂಡಿರುವ) ಜಗತ್, ಅದೇ ಶರೀರವಾಗಿ ಉಳ್ಳ ಬ್ರಹ್ಮ, ಶರೀರಭೂತವಾದ ಚೇತನಾಚೇತನ ಮಾತ್ರವೇ ಹೇಳಲ್ಪಡುತ್ತದೆ. ಪ್ರಜಾಶಬ್ದವು ಕೇವಲ ಚಿದಚಿತ್‌ಪರವಲ್ಲದೆ ಬ್ರಹ್ಮಪರವಲ್ಲ. ಸತ್ ಶಬ್ದವು ಚಿದಚಿದ್ವಿಶಿಷ್ಟವಾದದ್ದನ್ನೇ ಹೇಳುತ್ತದೆ. ವಿಶೇಷ್ಯಮಾತ್ರವನ್ನೇ ನಿರೂಪಿಸುತ್ತದೆ. ಸತ್ ಶಬ್ದವು ಕೇವಲ ಬ್ರಹ್ಮಮಾತ್ರ ಪರವಾಗಿರುತ್ತದೆ. ಸನ್ಮೂಲವಾದವುಗಳು, ಸತ್

लयइतियावत्" ॥ र ॥

ದಲ್ಲಿ ಸ್ಥಾಪಿಸಲ್ಪಟ್ಟವು, ಎಂಬ ಶಬ್ದಗಳು ಸತ್ ಶಬ್ದವಾಚ್ಯವಾದ ಬ್ರಹ್ಮದ ಅಧೀನವಾಗಿರುವ ಉತ್ಪತ್ತಿ ಲಯ ಇರೋಣವನ್ನು ಹೇಳುತ್ತದೆ. ಸತ್ ಆಶ್ರಯವಾಗಿ ಉಳ್ಳವುಗಳೆಂಬದರಿಂದ ಸದಾಧಾರಕತ್ವವು ಹೇಳಲ್ಪಡುತ್ತದೆ. ಇದರಿಂದ ಜಗತ್ತಿಗೆ ಶರೀರಕತ್ವವು ಫಲಿಸುತ್ತದೆ. ಪ್ರತಿಷ್ಠಾ (ಎಂದರೆ) ನಿಷ್ಠಾ-ಪರ್ಯವಸಾನ-ಲಯ ಎಂದು ಫಲಿತಾರ್ಥ" ಎಂದು.

तस्यान्नात्पृथिवीमानितः शिवादन्यत्रान्यत् क्वकिंमूलं स्यात्? अन्नशब्दितः शिव एवमूलं कर्तेत्यर्थः । अन्नेन च शुङ्गेन कार्येणा ब्रूपमूलमन्विच्छ विजानीहीति यावत् ॥ रा ॥ तस्य शरीरस्यान्नादन्यत्र क्वकिंमूलं स्यात्? न किमपि । तस्मादन्नमेव परिशेषेण मूलमित्यर्थः । अत्रान्नमिति तदभिमानीरुद्रः । × । यथाशरीरे एवमेव खलुसोम्यान्नेन कार्येण शुंगेन दृष्टान्तेन कर्तसामान्यमनुमायपरिशेषेणापो मूलमन्विच्छानुमातुमिच्छेत्यर्थः । आपइति तदभिमानी प्राणः । एवमेव हे सोम्याद्भिः कार्येण शुङ्गेन दृष्टान्तेन कर्तसामान्यमनुमाय परिशेषेण तेजोमूलमन्विच्छ । तेजइति श्रीः । एवमेव हे सोम्य तेजसा कार्येण शुङ्गेन दृष्टान्तेन कर्त सामान्यमनुमाय सत्परंब्रह्ममूलमन्विच्छेत्यर्थः । । × । हे सोम्येमाः सर्वाः प्रजाः सत्परंब्रह्म मूलं कर्तयासांताः सन्मूलाः । न केवलमेतावत् । किन्तुसत्परंब्रह्मायतनमाश्रयोयासांताः सदायतनाश्च । न केवलमुक्तरीत्या जीवस्य संसारएव भगवदधीनत्वं किंतुमो

ಮಾಧ್ವರು ಈ ಮೊದಲು ಹೇಳಿದಂತೆ ಅನ್ನ, ಅಪ್ (ಜಲ), ತೇಜಸ್ ಇವುಗಳ ಬದಲಾಗಿ ಇವುಗಳ ಅಭಿಮಾನಿಗಳೆಂಬ ರುದ್ರ (ಶಿವ), ಪ್ರಾಣ, ಶ್ರೀ (ಲಕ್ಷ್ಮೀ), ಈ ದೇವತೆಗಳನ್ನು ಹೇಳುತ್ತಾರೆ. ಆದ್ದರಿಂದ ಇವರ ವ್ಯಾಖ್ಯಾನ ಪ್ರಕಾರ ಶರೀರಕ್ಕೆ ಶಿವನೇ ಸಾಧಾರಣ ಮೂಲ (ಕರ್ತೃ) ವಾಗಿರುತ್ತಾನೆ. ಅವನ ಕಾರ್ಯದ ದೃಷ್ಟಾಂತದಿಂದ ಜಲಾಭಿಮಾನಿಯಾದ ಪ್ರಾಣ ಸಾಧಾರಣ ಕಾರಣ, ಇವನ ಕಾರ್ಯದ ದೃಷ್ಟಾಂತದಿಂದ ತೇಜೋಽಮಾನಿಯಾದ ಲಕ್ಷ್ಮೀ ಸಾಧಾರಣ ಕಾರಣ, ಇವಳ ಕಾರ್ಯದ ದೃಷ್ಟಾಂತದಿಂದ ಸತ್ (ಬ್ರಹ್ಮ) ಕಾರಣವನ್ನು ಅನ್ವಯಿಸಬೇಕು. ಅದೇ ಸಕಲ ಪ್ರಜೆಗಳಿಗೂ ಕರ್ತೃ. ಅದೇ ಅವುಗಳಿಗೆ ಆಶ್ರಯವು. ಈ ಜೀವನು ಈಗ ಹೇಳಿದಂತೆ ಸಂಸಾರಿಯಾಗಿರುವಾಗ ಮಾತ್ರವಲ್ಲ, ಮುಕ್ತಿಯಲ್ಲಿ ಕೂಡಾ ಅದರ ಅಧೀನನಾಗಿರುತ್ತಾನೆಂದು ಹೇಳುತ್ತಾರೆ. ಪ್ರತಿಷ್ಠಾ ಶಬ್ದಕ್ಕೆ ಇವರು ಹೇಳುವ ಅರ್ಥವು ಸ್ಥಾಪಕ ಎಂದು ಆಗಿರು

श्ये पीत्याह सत्प्रतिष्ठाइति । सत्परं ब्रह्मप्रतिष्ठा प्रतिस्थापकं यासां मुक्तप्रजानांताः सत्प्रतिष्ठाइत्यर्थः ॥ वे ॥

ತ್ತದೆ. ಆದ್ದರಿಂದ ಜೀವನು ಬ್ರಹ್ಮಾಧೀನನೆಂದು ಹೇಳುವದು.

## (೨) ತೃಷೆ.

यत्रयस्यिन्काले एतन्नामपिपासति पातुमिच्छतीति पुरुषो भवति अशिशिषतीतिवदिदमपि गौणमेवनाम भवति । द्रवीकृतस्याशितस्यान्नस्य नेत्र्य आपोऽन्नशुङ्गं देहं क्लेदयन्त्यः शिथिलीकुर्युरब्बाहुळ्यादिदितेजसा नशोष्यन्ते । नितराञ्च तेजसाशोष्यमाणास्वप्सुदेहभावेन परिणममानासुपातुमिच्छा पुरुषस्य जायते । तदापुरुषः पिपासतिनाम । तदेतदाह तेजएवतत् तदापीतमबादि शोषयद्देहगतलोहितप्राणभावेन नयते परिणमयति । × । तत्तेज आचष्टे लोकः उदन्येति । उदकं नयतीत्युदन्यं । × । अपामप्येतदेवशरीराख्यं शुङ्गं । नान्यदित्येवमादि ॥ समानमन्यत् ॥ शं ॥

ಈ ಕುರಿತು ಶಂಕರಾಚಾರ್ಯರು ಯಾವಾಗ ಪುರುಷನು "ನೀರು ಕುಡಿಯಲಿಕ್ಕೆ ಇಚ್ಛಿಸುತ್ತಾನೆ" ಎಂಬ ಈ ಹೆಸರುಳ್ಳವನಾಗುತ್ತಾನೋ, (ಹೀಗೆ ಹೇಳಲ್ಪಡುತ್ತಾನೋ), ಉಣ್ಣಲಿಕ್ಕೆ ಇಚ್ಛಿಸುತ್ತಾನೆಂಬ ಹೆಸರಿನಂತೆಯೇ ಇದು ಕೂಡಾ ಅಮುಖ್ಯವಾದ ಹೆಸರು ಪಡೆಯುವದೇ ಆಗಿರುತ್ತದೆ. ತಿಂದ ಅನ್ನವನ್ನು ದ್ರವೀಕರಿಸಿಕೊಂಡು ಹೋಗುವ ಜಲವು ಅಧಿಕವಾಗಿರುವದರಿಂದ ತೇಜಸ್‌ನಿಂದ ಶೋಷಿಸಲ್ಪಡದೇ ಇದ್ದ ಪಕ್ಷದಲ್ಲಿ, ಅನ್ನಕಾರ್ಯವಾದ ದೇಹವನ್ನು ನೆನಸಿ ಸಡಲಿಸಿ ಬಿಟ್ಟೀತು. ದೇಹಭಾವದಲ್ಲಿ ಪರಿಣಮಿಸಿದಂಥಾ ಜಲವು ತೇಜಸ್ಸಿನಿಂದ ಪೂರಾ ಶೋಷಿಸಲ್ಪಟ್ಟರೆ ಪುರುಷನಿಗೆ ನೀರು ಕುಡಿಯುವ ಇಚ್ಛೆಯುಂಟಾಗುತ್ತದೆ. ಆಗ ಪುರುಷನು "ಕುಡಿಯಲಿಕ್ಕಿಚ್ಛಿಸುತ್ತಾನೆ" ಎಂಬ ಹೆಸರನ್ನು ಪಡೆಯುತ್ತಾನೆ. ಆಗ ಕುಡಿದ ಜಲ ಮೊದಲಾದದ್ದನ್ನು ತೇಜಸ್ಸೇ ಶೋಷಿಸಿ ದೇಹದಲ್ಲಿರುವ ರಕ್ತ ಮತ್ತು ಪ್ರಾಣಭಾವದಲ್ಲಿ ಸೇರಿಸುತ್ತದೆ (ಪರಿಣಾಮಗೊಳಿಸುತ್ತದೆ). ಆದಕಾರಣ ಜನರು ತೇಜಸ್ಸಿಗೆ ಉದನ್ಯ ಎಂದು ಹೇಳುವದಾಗಿರುತ್ತದೆ. (ಯಾಕಂದರೆ) ಅದು ನೀರನ್ನು ಒಯ್ಯುತ್ತದೆ. ಜಲದ ಕಾರ್ಯವೂ ಈ ಶರೀರವೇ ಆಗಿರುತ್ತದೆ. ಬೇರೆ ಯಾವದೂ ಅಲ್ಲ. ಮಿಕ್ಕ ಸಂಗತಿಯಲ್ಲಿ ಮೊದಲು ಹೇಳಿದಂತೆಯೇ ಅರ್ಥವೆಂದು ಹೇಳುತ್ತಾರೆ.

उदकनेतृत्वात्तेजउदन्येत्युच्यत इत्यर्थः। तत्रतेजसा शोष्यमाणास्वप्सुतत्पन्नं देहाख्यं शुङ्गमित्यर्थः ॥ शिष्टं पूर्ववत् ॥ रं ॥

ರಂಗರಾಮಾನುಜಾಚಾರ್ಯರು, ನೀರನ್ನು ಕೊಂಡುಹೋಗುವದರಿಂದ ತೇಜಸ್ಸಿಗೆ ಉದನ್ಯವೆಂದು ಹೆಸರು ಬಂದಿದೆ. ತೇಜಸ್ಸಿನಿಂದ ಜಲವು ಶೋಷಿಸಲ್ಪಡುತ್ತಿರಲು ಉತ್ಪನ್ನವಾದ ಕಾರ್ಯವು ದೇಹವಾಗಿರುತ್ತದೆಂದು ಅರ್ಥ. ಮಿಕ್ಕದೆಲ್ಲ ಮೊದಲು (ಮೇಲೆ) ಹೇಳಿದಂತೆಯೇ ಎಂದು ಹೇಳುತ್ತಾರೆ.

तत्तेज आचष्टे विद्वान् उदन्येति । उदं नयतीतिव्युत्पत्तेः । पूर्वं अन्नकार्यस्य प्रक्रान्तत्वाच्छरीरेणान्नद्वारासदनुमानामिहत्वप्कार्यस्य प्रक्रान्तत्वात्तद्वारैवानुमानामित्यवधेयं ॥ वे ॥

ಮಾಧ್ವರು ತೇಜಸ್ ಜಲವನ್ನು ಕೊಂಡುಹೋಗುವದರಿಂದ ಅದಕ್ಕೆ ಉದನ್ಯ ಎಂದು ವಿದ್ವಾಂಸರು ಹೇಳುತ್ತಾರೆಂದು ಹೇಳುವದಲ್ಲದೆ, ಈ ಮೊದಲು (ಮೇಲೆ) ಅನ್ನಕಾರ್ಯ ವಿಷಯ ಮಾತ್ರ ಪ್ರಕೃತವಾಗಿತ್ತು. ಆದ್ದರಿಂದ ಅಲ್ಲಿ ಅನ್ನದ್ವಾರಾ ಶರೀರದಿಂದ ಸತ್ (ಬ್ರಹ್ಮವ)ನ್ನು ಅನುಮಾನಿಸಿದ್ದು. ಇಲ್ಲಿ ಜಲದ ಕಾರ್ಯವು ಪ್ರಕೃತವಾಗಿರುವದರಿಂದ ಅದರ (ಜಲದ) ಪರಿಮುಖವಾಗಿಯೇ ಅನುಮಾನಿಸತಕ್ಕದಾಗಿರುತ್ತದೆಂದು ಹೇಳುತ್ತಾರೆ.

सामर्थ्यात्तेजसोप्येतदेवशरीराख्यं शुङ्गं । अतोऽप्छुङ्गेन देहेनापोमूलं गम्यते अद्भिः शुङ्गेन तेजोमूलं गम्यते । तेजसा शुङ्गेन सन्मूलं गम्यते । पूर्ववत् । × । येनप्रकारेणेमाः तेजोबन्नाख्यास्तिस्रो देवताः पुरुषं प्राप्य त्रिवृत्त्रिवृदेकैका भवति तदुक्तं पुरस्तादेव भवति ॥ शं ॥

ಶಂಕರಾಚಾರ್ಯರು (ತೇಜೋಬನ್ನಗಳೆಲ್ಲ) ತ್ರಿವೃತ್ ಮಾಡಲ್ಪಟ್ಟಿರುವ ಕಾರಣ ತೇಜಸ್ಸಿನ ಮೊಳಕೆ (ಕಾರ್ಯ) ಕೂಡಾ ಈ ಶರೀರವೆಂಬದೇ ಆಗಿರುತ್ತದೆ. ಆದ್ದರಿಂದ ಜಲಶುಂಗವಾದ ದೇಹದಿಂದ ಜಲರೂಪವಾದ ಮೂಲವು ತಿಳದುಬರುತ್ತದೆ. ಜಲರೂಪವಾದ ಶುಂಗ (ಕಾರ್ಯ)ದಿಂದ ತೇಜೋರೂಪವಾದ ಮೂಲವು ತಿಳದುಬರುತ್ತದೆ. ತೇಜೋರೂಪವಾದ ಶುಂಗ (ಕಾರ್ಯ)ದಿಂದ ಸತ್ (ಬ್ರಹ್ಮ) ಮೂಲವು ತಿಳದುಬರುತ್ತದೆ. ಮಿಕ್ಕ ವಾಕ್ಯಗಳಿಗೆ ಮೊದಲು ಹೇಳಿದಂತೆಯೇ ಅರ್ಥ. ಪ್ರಸ್ತುತ ತೇಜೋಬನ್ನಗಳೆಂಬ ೩ ದೇವತೆಗಳು ಪುರುಷನನ್ನು ಪ್ರಾಪಿಸಿ ಪ್ರತಿ ಒಂದು ಹೇಗೆ ತ್ರಿವೃತ್ ತ್ರಿವೃತ್ ಆಗಿದೆ ಎಂಬದನ್ನು ಈ ಮೊದಲೇ ಹೇಳಿರುತ್ತದೆಂದು ವ್ಯಾಖ್ಯಾನಮಾಡಿರುತ್ತಾರೆ.

पूर्ववदर्थः ॥ रं ॥ ರಾಮಾನುಜಾಚಾರ್ಯರು ಈ ಮೊದಲು ಹೇಳಿದಂತೆಯೇ ಅರ್ಥವೆಂದು ಹೇಳುತ್ತಾರೆ.

अद्भ्यः अबभिमानि प्राणात्तेजोरूपं मूलं श्रीतत्वमन्विच्छ। तेजसासोम्य शुङ्गेन सच्छब्दितं मूलं कर्तृ अन्विच्छ । इमाः प्रजाः सन्मूलाः सच्छब्दितब्रह्मकर्तृकाः । सदायतनाः सत्स्थितिकाः मुक्तौ सत्प्रतिष्ठाः । × । इमाः श्रीप्राणशिवाख्याः देवताः शरीरादिकर्तृत्वाल्लक्ष्म्याद्याध्येयाः । तदीशितृत्वेन भगवांश्चावश्यं मुमुक्षुणाध्येयः॥ रा॥ हेसोम्येमास्तिस्रो देवतास्तेजोबन्नाभिमानिन्योलक्ष्म्याद्याः पुरुषं शरीरिणं प्राप्य यथा तुयेनैव प्रकारेणैकैकादेवतात्रिवृत् त्रिवृत् भवति तत्पुरस्ता देवोक्तं भवति ॥ वे ॥

ಮಾಧ್ವರು ಜಲಾಭಿಮಾನಿ ಪ್ರಾಣನಿಂದ ತೇಜೋರೂಪಮೂಲವಾದ ಶ್ರೀತತ್ವವನ್ನು ತಿಳಿ. ತೇಜಸ್ಸಿನ ಶುಂಗ (ಕಾರ್ಯ)ದಿಂದ ಹೇ ಸೋಮ್ಯ! ಸತ್ ಎಂಬ ಮೂಲ ಕರ್ತೃವನ್ನು ತಿಳಿ. ಈ ಪ್ರಜೆಗಳು ಸತ್ ಎಂದು ಹೇಳಲ್ಪಡುವ ಬ್ರಹ್ಮ ಕರ್ತೃವಾಗಿ ಉಳ್ಳವರು, ಸತ್ ಸ್ಥಿತಿಯಾಗಿ ಉಳ್ಳವರು, ಮುಕ್ತಿಯಲ್ಲಿ ಸತ್‌ದ ಅಧೀನವಾಗಿರುವವರು. ಈ ಶ್ರೀ, ಪ್ರಾಣ, ಶಿವ ಎಂಬ ದೇವತೆಗಳು ಶರೀರಾದಿಗಳ ಕರ್ತೃಗಳಾದ್ದರಿಂದ (ಈ) ಲಕ್ಷ್ಮ್ಯಾದಿಗಳು ಧ್ಯಾನಿಸಲ್ಪಡತಕ್ಕವರಾಗಿರುತ್ತಾರೆ. ಭಗವಂತನು ಅವರಿಗೆ ಸ್ವಾಮಿಯಾದ್ದರಿಂದ ಮೋಕ್ಷವನ್ನಪೇಕ್ಷಿಸುವವನು ಆ ಸ್ವಾಮಿಯನ್ನು ಅವಶ್ಯಕವಾಗಿ ಧ್ಯಾನಿಸಬೇಕು. ತೇಜೋಬನ್ನಾಭಿಮಾನಿಗಳಾದ ಮೂರು ದೇವತೆಗಳು ಶರೀರಿಯಾದ (ಜೀ)ವನನ್ನು ಪ್ರಾಪಿಸಿ ಆ ಪ್ಯೈಕಿ ಪ್ರತಿ ಒಂದು ಹೇಗೆ ತ್ರಿವೃತ್ ತ್ರಿವೃತ್ ಆಗಿರುತ್ತದೆಂಬದು ಹೇ ಸೋಮ್ಯ (ಈ) ಮೊದಲೇ ಹೇಳೋಣಾಗಿರುತ್ತದೆಂದು ವಿವರಿಸುತಾರೆ.

## VIನೇ ಪಾಠ.

# ನಿದ್ರಾವಸ್ಥೆ.



(१) वायुर्वावसंवर्गो यदावाअग्निरुद्वायति वायुमेवाप्येति । यदासूर्योऽस्तमेति वायुमेवाप्येति । यदा चन्द्रोऽस्तमेति वायुमेवाप्येति ॥ (४—३—१)

(೧) ವಾಯುವು ಸಂವರ್ಗ. ಬೆಂಕಿ ನೊಂದಿದಾಗ ವಾಯುವಿನಲ್ಲಿಯೇ ಶೇರಿಕೊಳ್ಳುತ್ತದೆ. ಸೂರ್ಯನು ಅಸ್ತಮಿಸಿದಾಗ ವಾಯುವಿನಲ್ಲಿಯೇ ಶೇರಿಕೊಳ್ಳುತ್ತಾನೆ. ಚಂದ್ರನು ಅಸ್ತಮಿಸಿದಾಗ ವಾಯುವಿನಲ್ಲಿಯೇ ಶೇರಿಕೊಳ್ಳುತ್ತಾನೆ.

(२) यदाऽऽपउच्छुष्यन्ति वायुमेवापियन्ति । वायुर्ह्येवैतान्सर्वान्संवृङ्क्त इत्यधिदैवतं ॥ (४—३—२)

(೨) ನೀರು ಆರಿದಾಗ ವಾಯುವಿನಲ್ಲಿಯೇ ಶೇರಿಕೊಳ್ಳುತ್ತದೆ. ಆದಕಾರಣ ಇವುಗಳನ್ನೆಲ್ಲ ವಾಯುವೇ ಸಂಗ್ರಸನ (ಸಂಗ್ರಹ) ಮಾಡುತ್ತಾನೆ. ದೇವತೆಗಳ ಕುರಿತು ಇಷ್ಟೇ.

(३) अथाध्यात्मं । प्राणोवाव संवर्गः । सयदास्वपिति प्राणमेववागप्येति प्राणं चक्षुः प्राणं श्रोत्रं प्राणं मनः प्राणोह्येवैतान् सर्वान् संवृङ्क्त इति ॥ (४—३—३)

(೩) ಈಗ ಆತ್ಮವಿಷಯವಾಗಿ * ಪ್ರಾಣನೇ ಸಂವರ್ಗ. ಪುರುಷನು ನಿದ್ರೆಗೈದಾಗ ಪ್ರಾಣನಲ್ಲಿಯೇ ವಾಕ್ ಶೇರಿಕೊಳ್ಳುತ್ತದೆ. ಪ್ರಾಣನಲ್ಲಿ ಚಕ್ಷು, ಪ್ರಾಣನಲ್ಲಿ ಶ್ರೋತ್ರ, ಪ್ರಾಣನಲ್ಲಿ ಮನಸ್ಸು, (ಸಹ ಶೇರಿಕೊಳ್ಳುತ್ತವೆ). ಆದಕಾರಣ ಇವುಗಳನ್ನೆಲ್ಲ ಪ್ರಾಣನು ಸಂಗ್ರಸನ (ಸಂಗ್ರಹ) ಮಾಡುತ್ತಾನೆ. ಇಷ್ಟೇ.

(४) तौवाएतौद्वौ संवर्गौ वायुरेव देवेषु । प्राणः प्राणेषु ॥ (४—३—४).

(೪) ಇವರೇ ಇಬ್ಬರು ಸಂವರ್ಗರು. (ಯಾರೆಂದರೆ) ದೇವತೆಗಳಲ್ಲಿ ವಾಯು, ಪ್ರಾಣ (ಇಂದ್ರಿಯಾದಿ)ಗಳಲ್ಲಿ ಪ್ರಾಣನು.

* XI ೨೦ ನೋಡು.

(५) उद्दालको हारुणिः श्वेतकेतुं पुत्रमुवाच स्वप्नान्तं मेसोम्य! विजनीहीति । यत्रैतत्पुरुषः स्वपिति नाम । सतासोम्य! तदासम्पन्नो भवति । स्वमपीतोभवति । तस्मादेनꣳ स्वपितीत्याचक्षते । स्वꣳ ह्यपीतो भवति ॥ (६—८—१)

(೫) ಅರುಣ ಋಷಿಗಳ ಮಕ್ಕಳಾದ ಉದ್ದಾಲಕರು (ತಮ್ಮ) ಮಗನಾದ ಶ್ವೇತಕೇತುಗೆ ಹೇಳಿದ್ದೇನಂದರೆ:—ಹೇ ಸೋಮ್ಯ! ಸುಷುಪ್ತಿಯ ತತ್ವವನ್ನು ನನ್ನಿಂದ ನೀನು ಸ್ಪಷ್ಟವಾಗಿ ತಿಳಿದುಕೊ. ಯಾವಾಗ ಈ ಪುರುಷನು "ಸ್ವಪಿತಿ" (ನಿದ್ರೆ ಮಾಡಿದ್ದಾನೆ) ಎಂದು ಹೇಳಲ್ಪಡುತ್ತಾನೋ ಆಗ ಹೇ ಸೋಮ್ಯ! ಸತ್‌ಸೊಟ್ಟಿಗೆ ಸಂಪನ್ನನಾಗು (ಶೇರಿಕೊಳ್ಳು)ತ್ತಾನೆ; ತನ್ನಲ್ಲಿ ತಾನು ಶೇರಿಕೊಂಡಿರುತ್ತಾನೆ. ಆದಕಾರಣ ಇವನನ್ನು "ಸ್ವಪಿತಿ" ಎಂದು ಹೇಳುತ್ತಾರೆ. ಯಾಕಂದರೆ (ತನ್ನ) ಸ್ವರೂಪವನ್ನು ಪಡೆದಿರುತ್ತಾನೆ.

(६) सयथाशकुनिः सूत्रेण प्रबद्धो दिशं दिशं पतित्वाऽन्यत्रायतनमलब्ध्वा बन्धनमेवोपश्रयत एवमेव खलुसोम्य! तन्मनोदिशं दिशं पतित्वाऽन्यत्रायतनमलब्ध्वा प्राणमेवोपश्रयते प्राणबन्धनꣳ हिसोम्य! मनइति ॥ (६—८—२)

(೬) ಹಗ್ಗದಿಂದ ಬಿಗಿಯಲ್ಪಟ್ಟ ಪಕ್ಷಿಯು ದಿಕ್ಕು ದಿಕ್ಕಿಗೆ ಹಾರಿ ಬೇರೆ ಎಲ್ಲಿಯೂ ಆಶ್ರಯ ಶಿಕ್ಕದೆ ಬಂಧನ(ಗೂಟ)ವನ್ನೇ ಹೇಗೆ ಆಶ್ರಯಿಸಿಕೊಳ್ಳುತ್ತದೋ ಹಾಗೆಯೇ ನಿಶ್ಚಯವಾಗಿ ಹೇ ಸೋಮ್ಯ! (ಪುರುಷನ) ಮನಸ್ಸು ದಿಕ್ಕು ದಿಕ್ಕಿಗೆ ಓಡಿ ಬೇರೆ ಎಲ್ಲಿಯೂ ಠಿಕಾಣಿ ದೊರೆಯದೆ ಪ್ರಾಣನನ್ನೇ ಆಶ್ರಯಿಸುತ್ತದೆ. ಯಾಕಂದರೆ, ಮನಸ್ಸು ಪ್ರಾಣರೂಪ ಬಂಧನ ಉಳ್ಳದ್ದಾಗಿದೆ. (ಪ್ರಾಣಾಧೀನವಾಗಿದೆ).

(७) अथ याएताहृदयस्य नाड्यस्ताः पिङ्गलस्याणिम्नस्तिष्ठन्ति शुक्लस्य नीलस्य पीतस्य लोहितस्येत्यसौवा आदित्यः पिङ्गल एषशुक्ल एषनील एषपीत एषलोहितः ॥ (८—६—१)

(೭) ಈಗ (ನಮ್ಮ) ಹೃದಯದ ಯಾವ ನಾಡಿಗಳು ಇವೆಯೋ ಅವು ಪಿಂಗಳ (ಕಪಿಲ), ಶುಕ್ಲ (ಬಿಳಿದು), ನೀಲ, ಪೀತ (ಹಳದಿ), ಲೋಹಿತ (ಕೆಂಪು) ಬಣ್ಣಗಳುಳ್ಳ (ಅನ್ನರಸ) ಕಣಗಳಿಂದ ತುಂಬಿಕೊಂಡಿವೆ. ಆ ಆದಿತ್ಯನೂ ಪಿಂಗಳ, ಅವನು ಶುಕ್ಲ, ಅವನು ನೀಲ, ಅವನು ಪೀತ, ಅವನು ಲೋಹಿತ (ವರ್ಣಗಳುಳ್ಳವನು).

(८) तद्यथामहापथ आततउभौ ग्रा

(೮) ದೀರ್ಘವಾದಂಥಾ (ಒಂದು)

मौ गच्छतीमञ्चामुञ्चैवमेवैता आदित्यस्य रश्मयउभौ लोकौगच्छन्ती मञ्चामुञ्चामु ष्मादादित्यात्प्रतायन्ते । ता आसुनाडीषु सृ प्ता आभ्योनाडीभ्य: प्रतायन्ते । तेऽमुष्मि न्नादित्ये सृप्ता: ॥ (८—६—२)

ರಾಜಮಾರ್ಗವು ಈ ಗ್ರಾಮ ಆ ಗ್ರಾಮ ಇವೆರಡಕ್ಕೂ ಹೇಗೆ ಹೋಗು(ತಗಲು)ತ್ತದೋ ಹಾಗೆಯೇ ಸೂರ್ಯನ ಆ ರಶ್ಮಿಗಳು ಈ ನಾಡಿಗಳು ಮತ್ತು ಆ ಮಂಡಲ ಇವೆರಡು ಲೋಕಗಳಿಗೂ ಹೋಗು(ಸಂಚರಿಸು)ತ್ತವೆ. ಆ ಸೂರ್ಯನಿಂದ ಹೊರಡುತ್ತವೆ. ಅವು ಈ ನಾಡಿಗಳಲ್ಲಿ ಹೊಕ್ಕು ಇವುಗಳಿಂದ ಹೊರಡುತ್ತವೆ. ಅವು ಆ ಆದಿತ್ಯನಲ್ಲಿ ಹೊಕ್ಕೊಂಡಿವೆ.

(९) तद्यत्रैतत्सुप्त: समस्त: सम्प्रस न्न: स्वप्नं नविजानात्यासु तदानाडीषु सृप्तो भवति । तन्नकश्चनपाप्मास्पृशति तेजसा हितदासम्पन्नो भवति ॥ (८—६—३)

(೯) ಆದಕಾರಣ ಸುಪ್ತನಾದವನು ಯಾವಾಗ ಸಮಸ್ತ (ಮತ್ತು) ಸಂಪ್ರಸನ್ನನಾಗಿ ಸ್ವಪ್ನವನ್ನು ಕಾಣುವದಿಲ್ಲವೋ ಆಗ ಈ ನಾಡಿಗಳಲ್ಲಿ ಶೇರಿಕೊಳ್ಳುತ್ತಾನೆ. (ಆಗ) ಯಾವ ಪಾಪವೂ ಅವನನ್ನು ಮುಟ್ಟುವದಿಲ್ಲ. ಯಾಕಂದರೆ ಆಗ ಅವನು ತೇಜಸ್ಸಿನಿಂದ ವ್ಯಾಪ್ತನಾಗಿರುತ್ತಾನೆ.

(१०) यथासोम्म! मधु मधुकृतो निस्तिष्ठन्ति । नानाऽत्ययानां वृक्षाणाꣳर सान् समवहारमेकताꣳरसंगमयन्ति ॥ (६—९—१)

तेयथातत्र न विवेकं लभन्तेऽमुष्याहं वृक्षस्य रसोस्म्यमुष्याहं वृक्षस्य रसोऽस्मी त्येवमेव खलुसोम्येमा: सर्वा: प्रजा: सतिसं पद्यनविदु: सतिसम्पद्यामह इति ॥ (६—९—२)

(೧೦) ಹೇ ಸೋಮ್ಯ! ಹೇಗೆ ಜೇನು ನೊಣಗಳು ಜೇನುತುಪ್ಪವನ್ನುಂಟುಮಾಡುತ್ತವೋ, ಬೇರೆ ಬೇರೆ ಜಾತಿಯು ವೃಕ್ಷಗಳ ರಸಗಳನ್ನು ಒಟ್ಟುಕೂಡಿಸಿ ಒಂದೇ ತರಹದ ರಸವನ್ನುಂಟುಮಾಡುತ್ತವೋ;

ಆ ರಸಗಳು ಆ ಸ್ಥಿತಿಯಲ್ಲಿ ಹೇಗೆ "ಫಲಾಣಿ ವೃಕ್ಷದ ರಸ ನಾನು, ಫಲಾಣಿ ವೃಕ್ಷದ ರಸ ನಾನು" ಎಂಬ ವಿವೇಕವನ್ನು ಪಡೆಯುವದಿಲ್ಲವೋ, ಹಾಗೆಯೇ ನಿಶ್ಚಯವಾಗಿ ಹೇ ಸೋಮ್ಯ! ಈ ಸಕಲ ಪ್ರಜೆಗಳು ಸತ್‌ದಲ್ಲಿ ಶೇರಿಕೊಂಡರೂ, ಸತ್‌ದಲ್ಲಿ ಶೇರಿಕೊಂಡಿದ್ದೇವೆಂಬದನ್ನು ತಿಳಿಯುವದಿಲ್ಲ.

(११) त इहव्याघ्रोवासिꣳहोवा वृ कोवा वराहोवा कीटोवा पतङ्गोवा दꣳशोवा

(೧೧) ಅವುಗಳು (ಮೊದಲು) ವ್ಯಾಘ್ರನಾಗಲೀ ಸಿಂಹವಾಗಲೀ ತೋಳವಾ

मशकोवा यद्यद्भवन्ति तदाभवन्ति ॥ (६–९–३).

ಗಲೀ, ಕಾಡುಹಂದಿಯಾಗಲೀ, ಹುಳವಾಗಲೀ, ಪಕ್ಷಿಯಾಗಲೀ, ನೊಣವಾಗಲೀ, ನುಶಿಯಾಗಲೀ, ಇಲ್ಲಿ ಏನೇನು ಆಗಿದ್ದವೋ ಅದದೇ ಆಗುತ್ತವೆ.

(१२) इमाः सोम्य! नद्यः पुरस्तात्प्राच्यः स्यन्दन्ते पश्चात्प्रतीच्यस्ताः समुद्रात्समुद्रमेवापियन्ति । समुद्रएव भवति । तायथातत्र नविदुरियमहमस्मीयमहमस्मीति ॥ (६–१०–१)

(೧೨) ಹೇ ಸೋಮ್ಯ! ಈ ನದಿಗಳು ಪೂರ್ವ ಮುಖವಾದವು ಪೂರ್ವಕ್ಕೆ ಹರಿಯುತ್ತವೆ. ಪಶ್ಚಿಮ ಮುಖವಾದವು ಪಶ್ಚಿಮಕ್ಕೆ ಹರಿಯುತ್ತವೆ. ಅವು ಸಮುದ್ರದಿಂದ ಸಮುದ್ರಕ್ಕೆ ಹೋಗಿ ಶೇರುತ್ತವೆ. ಅದು ಸಮುದ್ರವೇ ಆಗುತ್ತದೆ. ಅಲ್ಲಿ ಅವು (ಆ ನದಿಗಳು) ನಾನು ಫಲಾಣೇದು (ನದಿ) ನಾನು ಫಲಾಣೇದು (ನದಿ) ಎಂದು ಹೇಗೆ ತಿಳಿಯುವದಿಲ್ಲವೋ;

(१३) एवमेव खलुसोम्येमाः सर्वाः प्रजाः सत आगम्यनविदुः सत आगच्छामह इति । तइहव्याघ्रोवा सिंहोवा वृकोवा वराहोवा कीटोवा पतङ्गोवा दंशोवा मशकोवा यद्यद्भवन्ति तदाभवन्ति ॥ (६–१०–२)

(೧೩) ಹಾಗೆಯೇ ಸೋಮ್ಯ! ನಿಶ್ಚಯವಾಗಿ ಈ ಸಕಲ ಪ್ರಜೆಗಳು ಸತ್‌ದಿಂದ (ಎದ್ದು) ಬಂದರೂ ಸತ್‌ದಿಂದ (ಎದ್ದು) ಬಂದಿದ್ದೇವೆಂಬದನ್ನು ತಿಳಿಯುವದಿಲ್ಲ. ಅವುಗಳು ವ್ಯಾಘ್ರವಾಗಲೀ, ಸಿಂಹವಾಗಲೀ, ತೋಳವಾಗಲೀ, ಹಂದಿಯಾಗಲೀ, ಹುಳವಾಗಲೀ, ಪಕ್ಷಿಯಾಗಲೀ, ನೊಣವಾಗಲೀ, ನುಶಿಯಾಗಲೀ, (ಪೂರ್ವದಲ್ಲಿ) ಇಲ್ಲಿ ಏನೇನಾಗಿದ್ದವೋ ಆಗ ಅದದೇ ಆಗುತ್ತವೆ.

VIನೇ ಪಾಠದ

# ವ್ಯಾಖ್ಯಾನ ಸಂಗ್ರಹ.

## (A) ಸ್ವಪ್ನ.

(೧.) ಈ ಪಾಠದ ೪ನೇ ವರೇಗಿನ ಶ್ರುತಿಗಳು ಇದರ ಉಪೋದ್ಘಾತದಲ್ಲಿ ಹೇಳಿದಂತೆ ಜಾನಶ್ರುತಿಗೆ ರೈಕ್ವಋಷಿಗಳು ಉಪದೇಶಿಸಿದಂಥವುಗಳಾಗಿರುತ್ತವೆ. ಇವುಗಳಲ್ಲಿ ಹೇಳುವ ವಿದ್ಯಕ್ಕೆನೇ ಸಂವರ್ಗ ವಿದ್ಯವೆಂದು ಹೇಳುವದು. ಅಧ್ಯಾತ್ಮದ ಮಟ್ಟಿಗೆ ಈ ವಿದ್ಯವು ಸ್ಪಷ್ಟವಾಗಿ ನಿದ್ರಾವಸ್ಥೆಗೆ ಸಂಬಂಧಿಸಿಕೊಂಡುಂಟು. IXನೇ ಪಾಠದಲ್ಲಿ ಹೇಳುವ ಮರಣಕ್ಕೂ ಈ ನಿದ್ರಾವಸ್ಥೆಗೂ ಇರುವ ವ್ಯತ್ಯಾಸವನ್ನು ನಾವು ಚನ್ನಾಗಿ ನೆನಪಿನಲ್ಲಿಟ್ಟುಕೊಳ್ಳಬೇಕು. ನಿದ್ರಾವಸ್ಥೆಯಲ್ಲಿ ನಮ್ಮ ವಾಕ್, ಚಕ್ಷು, ಶ್ರೋತ್ರ, ಮನಸ್ಸುಗಳು (ಒಟ್ಟು ಒಂದು ಗುಂಪಾಗಿ) ಪ್ರಾಣನಲ್ಲಿ ಶೇರಿಕೊಳ್ಳುತ್ತವೆಂದು ಹೇಳೋಣಾಗುತ್ತದೆ. ಮರಣಕಾಲದಲ್ಲಿ ವಾಕ್ ಮನಸ್ಸಿನಲ್ಲಿ, ಮನಸ್ಸು ಪ್ರಾಣನಲ್ಲಿ, ಪ್ರಾಣ ತೇಜಸ್ಸಿನಲ್ಲಿ, ತೇಜಸ್ ಪರದೇವತೆಯಲ್ಲಿ ಸಹ ಒಂದು ಇನ್ನೊಂದರಲ್ಲಿ ಸಂಪತ್ತಿಯನ್ನು (ಲಯವನ್ನು) ಪಡೆಯುತ್ತದೆಂದು ಹೇಳೋಣಾಗುತ್ತದೆ. ಇದರಿಂದ ಈ ಪಾಠದ ೩ನೇ ಶ್ರುತಿಯಲ್ಲಿ ತಾತ್ಕಾಲಿಕ ವಿಶ್ರಾಂತಿಯನ್ನು ಮಾತ್ರ ಹೇಳುವಾಗ್ಯೆ IXನೇ ಪಾಠದಲ್ಲಿ ಹೇಳುವ ಸಂಪತ್ತಿಯು ಅದಕ್ಕೆ ಮಿಕ್ಕ ಸ್ಥಿತಿಯನ್ನು ಸೂಚಿಸುತ್ತದೆಂದು ತಿಳದುಬರುತ್ತದೆ. ಇಲ್ಲಿ ಸಂವರ್ಗನೆಂಬ ಪ್ರಾಣನು:—

प्राणः मुख्यः ॥ शं ॥ — ಮುಖ್ಯಪ್ರಾಣನೆಂದು ಶಂಕರಾಚಾರ್ಯರು,

अत्रापि प्राणशब्दः तच्छरीरक परमात्मपरोद्रष्टव्यः ॥ रं ॥ — ಪ್ರಾಣ ಶರೀರಕನಾದಂಥಾ ಪರಮಾತ್ಮನೆಂದು ರಾಮಾನುಜಾಚಾರ್ಯರು,

प्राणो मुख्यप्राणः ॥ रा. वे. ॥ — ಮುಖ್ಯಪ್ರಾಣನೆಂದು ಮಾಧ್ವರು ಸಹ ಹೇಳುತ್ತಾರೆ.

ಈ ಅವಸ್ಥೆಯಲ್ಲಿರುವಾಗಲೇ ಮನುಷ್ಯಗೆ ಸ್ವಪ್ನಗಳಾಗುವದು.

## (B) ಸುಷುಪ್ತಿ.

(೨.) ಸುಷುಪ್ತಿ ಎಂದರೆ ಗಾಢನಿದ್ರೆ. ಈ ಅವಸ್ಥೆಯಲ್ಲಿ ಮನುಷ್ಯನು ಸ್ವಪ್ನಗಳನ್ನು ಕಾಣುವದಿಲ್ಲ. ಇದಕ್ಕೆ ಕಾರಣವೇನೆಂಬದು ೫-ನೇ ಶ್ರುತಿಗಳ ಸಮುದಾಯ ತಾತ್ಪರ್ಯದಿಂದ ತಿಳದುಬರುತ್ತದೆ.

೫ನೇ ಶ್ರುತಿಯ ವ್ಯಾಖ್ಯಾನದಲ್ಲಿ—

यदा स्वपितीत्युच्यते पुरुषः तदातस्मिन् काले सतासच्छब्दवाच्यया प्रकृतयादेवतया संपन्नो भवति सङ्गतः एकीभूतो भवति। मनसिप्रविष्टं मनआदिसंसर्गकृतं जीवरूपं परित्यज्य स्वं सद्रूपं यत्परमार्थसत्यं अपीतः अपिगतो भवति। अतस्तस्मात्स्वपितीत्येन माचक्षते लौकिकाः। स्वमात्मानं हि यस्मादपीतो भवति गुणनामप्रसिद्धितोपि स्वात्मप्राप्तिर्गम्यत इत्यभिप्रायः। कथं पुनर्लौकिकानां प्रसिद्धास्वात्मसम्पत्तिः? जाग्रच्छ्रमनिमित्तोद्भवत्वात्स्वापस्येत्याहुः। जागरितेहि पुण्यापुण्यनिमित्तसुखदुःखाद्यनेकायासानुभवाच्छ्रान्तो भवति। ततश्चायस्तानां करणानामनेकव्यापारनिमित्तग्लानानां स्वव्यापारेभ्य उपरमो भवति। ×। प्राणएकोऽश्रान्तः देहे कुलाये जागर्ति। तदाजीवः श्रमापनुत्तये स्वं देवतारूपमात्मानं प्रतिपद्यते। नान्यत्रस्वरूपावस्थानाच्छ्रमापनोदः स्यादितियुक्ता प्रसिद्धिर्लौकिकानां स्वंह्यपीतो भवतीति। दृश्यते हि लोके ज्वरादिरोगग्रस्तानां तद्विनिर्मोके स्वात्मस्थानां विश्रमणं तद्वदि

ಶಂಕರಾಚಾರ್ಯರು, ಯಾವಾಗ ಪುರುಷನು "ಸ್ವಪಿತಿ" (ನಿದ್ರೆ ಮಾಡಿದ್ದಾನೆ) ಎಂದು ಹೇಳಲ್ಪಡುತ್ತಾನೋ ಆ ಕಾಲದಲ್ಲಿ ಪ್ರಸ್ತುತ ಸತ್ ಶಬ್ದವಾಚ್ಯವಾದ ದೇವತೆಯೊಂದಿಗೆ ಸಂಪನ್ನ (ಎಂದರೆ) ಏಕೀಭೂತ (ಐಕ್ಯ)ನಾಗುತ್ತಾನೆ. ಮನಸ್ಸಿನಲ್ಲಿ ಪ್ರವೇಶಮಾಡಿದಂಥಾ ಮನಸ್ಸು ಮೊದಲಾದವುಗಳ ಸಂಸರ್ಗದಿಂದುಂಟಾದ ಜೀವರೂಪವನ್ನು ಬಿಟ್ಟು ಪರಮಾರ್ಥ ಸತ್ಯವಾದದ್ದು ಯಾವದೋ ಆ ಸ್ವಂತ ಸದ್ರೂಪವನ್ನು (ಅಪೀತಃ) ತಿರಿಗಿ ಪಡೆಯುತ್ತಾನಾದಕಾರಣ ಲೋಕದ ಜನರು ಅವನನ್ನು "ಸ್ವಪಿತಿ" (ನಿದ್ರೆಮಾಡಿದ್ದಾನೆ) ಎಂದು ಹೇಳುತ್ತಾರೆ. ಯಾಕೆಂದರೆ (ಆಗ) ಅವನು ತನ್ನನ್ನು ತಾನು ಪ್ರಾಪಿಸುತ್ತಾನೆ; ಮತ್ತು "ಸ್ವಪಿತಿ" ಎಂಬ ಗೌಣ (ಅಮುಖ್ಯವಾದ) ಹೆಸರಿನ ರೂಢಿಯಿಂದಲೂ ಸ್ವಾತ್ಮ ಪ್ರಾಪ್ತಿಯನ್ನು ಪಡೆಯುತ್ತಾನೆಂದು ಅಭಿಪ್ರಾಯವಾಗಿರುತ್ತದೆ. ಸ್ವಾತ್ಮಪ್ರಾಪ್ತಿಯು ಲೋಕದ ಜನಗಳಲ್ಲಿ ಹೇಗೆ ಪ್ರಸಿದ್ಧಿಗೆ ಬಂತು? ಎಂದರೆ ನಿದ್ರೆಯು

ह्यापिस्यादितियुक्तं ॥ × ॥ शं ॥ ಜಾಗ್ರದವಸ್ಥೆಯು ಶ್ರಮದಿಂದುಂಟಾಗುವದೆಂದು ಹೇಳುತ್ತಾರೆ. ಜಾಗ್ರದವಸ್ಥೆಯಲ್ಲಿ ಪುಣ್ಯಾಪುಣ್ಯದಿಂದುಂಟಾಗುವ ಸುಖ ದುಃಖ ಮೊದಲಾದ ಅನೇಕ ಆಯಾಸಗಳನ್ನು ಪಡುವದರಿಂದ ಶ್ರಾಂತನಾಗುತ್ತಾನೆ. ಅದರಿಂದ ಆಯಾಸಪಟ್ಟ ಕರಣಗಳು ಅನೇಕ ವ್ಯಾಪಾರಗಳನ್ನು ಮಾಡಿದ ದೆಸೆಯಿಂದ ಸೋತು ತಮ್ಮ ಕೆಲಸಗಳನ್ನು ನಿಲ್ಲಿಸುತ್ತವೆ. ಪ್ರಾಣ ಒಂದೇ ಆಯಾಸವಿಲ್ಲದೆ ದೇಹರೂಪವಾದ ಗೂಡಿನಲ್ಲಿ ಜಾಗ್ರತೆಯಾಗಿರುತ್ತದೆ. ಆಗ ಜೀವನು ಶ್ರಮಪರಿಹಾರಕ್ಕಾಗಿ ತನ್ನ ದೇವತಾರೂಪದಲ್ಲಿರುವ ಆತ್ಮನಲ್ಲಿ ಶೇರಿಕೊಳ್ಳುತ್ತಾನೆ. ಸ್ವರೂಪವಾದ ಅವಸ್ಥಾನ (ಠಿಕಾಣಿ) ಅಲ್ಲದೆ ಇತರ ಸ್ಥಳದಲ್ಲಿ ಶ್ರಮಪರಿಹಾರವಾಗಲಾರದಾದ್ದರಿಂದ ಸ್ವರೂಪವನ್ನು ಪಡೆಯುತ್ತಾನೆಂಬ ಲೋಕಪ್ರಸಿದ್ಧಿಯು ಯುಕ್ತವಾಗಿರುತ್ತದೆ. ಜ್ವರಾದಿ ರೋಗಗ್ರಸ್ಥರಾದವರು ಅದರಿಂದ ವಿಮೋಚನೆ ಹೊಂದಿ ಸ್ವಸ್ಥರಾದರೆ ವಿಶ್ರಾಂತಿಯನ್ನು ಹೊಂದುವದು ಲೋಕದಲ್ಲಿ ಕಂಡುಬರುತ್ತದೆ. ಅದೇ ರೀತಿ ಪ್ರಕೃತ ಸಂಗತಿಯಲ್ಲಿ ಕೂಡಾ ಸಂಭವಿಸುತ್ತದೆಂಬದು ಯುಕ್ತವಾಗಿರುತ್ತದೆ ಎಂದು ಹೇಳುತ್ತಾರೆ.

यत्रयदापुरुषः स्वपितीत्येतन्नाम भवति पुरुषः स्वपितीतिशब्दो यदाप्रयुज्यत इत्यर्थः । पुरुषस्वापोयदेति यावत् । नामशब्दः प्रसिध्यर्थोवा । एतत्पुरुषः एषपुरुषइत्यर्थः । तदातस्मिन् स्वापकाले सदेवसोम्येति प्रकृतेन सतासम्पन्नो भवति । पद्लगतौ संगतो भवतीत्यर्थः । × । अत्रस्वशब्दस्तावन्नजीवमात्रपरः । सतासोम्यतदासंपन्नो भवति स्वमपीतो भवतीतिस्थानप्रमाणेन सच्छब्दस्वशब्दयोरेकविषयत्वावश्यंभावात् सच्छब्दस्य चास्मिन् प्रकरणे परमात्मविषयत्वात् स्वशब्दोपि तत्परएव । × । देवमनुष्यादि नामरूपाभिमानरागलोभाद्यनुगुणज्ञानप्रसरवज्जागरितावस्थजीवविशिष्टः परमा

ರಾಮಾನುಜಾಚಾರ್ಯರು, ಈ ಪುರುಷನು ಯಾವಾಗ "ಸ್ವಪಿತಿ" (ನಿದ್ರೆಮಾಡಿದ್ದಾನೆ) ಎಂಬ ಈ ಹೆಸರುಳ್ಳವನಾಗುತ್ತಾನೋ, (ಎಂದರೆ) ಪುರುಷನ ಕುರಿತು "ಸ್ವಪಿತಿ" ಎಂಬ ಶಬ್ದವು ಯಾವಾಗ ಪ್ರಯೋಗಿಸಲ್ಪಡುತ್ತದೋ ಎಂದು ಅರ್ಥ. ಪುರುಷಗೆ ಯಾವಾಗ ನಿದ್ರೆ ಹತ್ತಿರುತ್ತದೋ ಎಂದು ಇಷ್ಟೆ (ತಾತ್ಪರ್ಯ). ಆ ಪುರುಷನು ನಿದ್ರೆಮಾಡುವ ಕಾಲದಲ್ಲಿ "ಸತ್ ಮಾತ್ರವೇ ಸೋಮ್ಯ" ಎಂಬ (I ೧) ಶ್ರುತಿಯಲ್ಲಿ ಹೇಳುವ ಪ್ರಕೃತವಾದ ಸತ್‌ದ ಸಂಗಡ ಶೇರಿಕೊಳ್ಳುತ್ತಾನೆ. ಆದರೆ ಪ್ರಸ್ತುತ (೫) ಶ್ರುತಿಯಲ್ಲಿರುವ "ಸ್ವ" ಶಬ್ದವು ಜೀವ ಮಾತ್ರಪರವಲ್ಲ. "ಹೇ ಸೋಮ್ಯ

त्मा देवमनुष्यादि नामरूपरागद्वेषलोभमोहा द्यौपाधिक बाह्याभ्यन्तराकाराभिमानकालु ष्यरहितजीवशरीरकः सन्आत्मन्यन्तर्भूत इ त्यर्थ इति । × । यस्मात्स्वस्मिन् लीनो भव ति तस्मात्स्वपितीति लौकिका आचक्षत इत्यर्थः ॥ रं ॥

ಸತ್‌ದ ಸಂಗಡ ಶೇರಿಕೊಳ್ಳುತ್ತಾನೆ, ತನ್ನಲ್ಲಿ ತಾನು ಲೀನವಾಗು (ಅಡಗು)ತ್ತಾನೆ" ಎಂದು ಇಲ್ಲಿಯೇ ಹೇಳುವ ಕಾರಣ "ಸತ್" ಶಬ್ದ ಮತ್ತು "ಸ್ವ" ಶಬ್ದ ಇವೆರಡೂ ಏಕವಿಷಯಿಕವಾಗಿರಬೇಕಾದದ್ದು ಅಗತ್ಯವಾಗಿರುವದರಿಂದಲೂ, ಈ (ಪ್ರಸ್ತುತ) ಪ್ರಕರಣದಲ್ಲಿ ಸತ್ ಶಬ್ದವು ಪರಮಾತ್ಮನ ವಿಷಯಿಕವಾದ್ದರಿಂದಲೂ "ಸ್ವ" ಶಬ್ದ ಕೂಡಾ ತತ್ (ಪರಮಾತ್ಮ) ಪರವೇ ಆಗಿರುತ್ತದೆ. (ಆದ್ದರಿಂದ) ದೇವಮನುಷ್ಯ ಮೊದಲಾದ ನಾಮ (ಹೆಸರು) ರೂಪ, ಅಭಿಮಾನ, ರಾಗ, ಲೋಭ, ಮೊದಲಾದವುಗಳಿಗನುಗುಣವಾದ ಜ್ಞಾನವೇಗವುಳ್ಳಂಥಾ ಜಾಗ್ರದವಸ್ಥೆಯಲ್ಲಿರುವ ಜೀವವಿಶಿಷ್ಟನಾದ ಪರಮಾತ್ಮನು ದೇವ ಮನುಷ್ಯ ಮೊದಲಾದ ನಾಮ, ರೂಪ, ರಾಗ, ದ್ವೇಷ ಲೋಭ ಮೋಹ ಮೊದಲಾದ ಉಪಾಧಿಗಳುಳ್ಳ ಬಾಹ್ಯಾಭ್ಯಂತರರೂಪವಾದ ಅಭಿಮಾನ ಕಲ್ಮಷರಹಿತವಾದ ಜೀವ ಶರೀರಕನಾಗಿ ತನ್ನಲ್ಲಿಯೇ ಅಂತರ್ಭೂತನಾಗುತ್ತಾನೆಂದು ಅರ್ಥವಾಗಿರುತ್ತದೆ. ಯಾವ ಕಾರಣದಿಂದ (ಈ ರೀತಿ) ತನ್ನಲ್ಲಿ (ತಾನೇ) ಲೀನವಾಗುತ್ತಾನೋ ಆ ಕಾರಣದಿಂದ "ಸ್ವಪಿತಿ" (ನಿದ್ರೆ ಮಾಡಿದ್ದಾನೆ) ಎಂದು ಲೋಕದ ಜನರು ಹೇಳುತ್ತಾರೆಂದು ಅರ್ಥವೆಂದು ಹೇಳುತ್ತಾರೆ.

एतत्पुरुषः एषपुरुषः यत्रयदास्वपिति निद्राति । नामप्रसिद्धं । तदासतासन्नाम्नाह रिणासम्पन्नो भवति । तच्छनक्तिस्वमिति । स्वं स्वतंत्रं हरिं हृदब्जगमपीतः इतरैरज्ञेय त्वेनानुप्रविष्टो भवति । कुतः? हियस्मात्स्वं स्वतंत्रं हरिमपीतः प्राप्तो भवति तस्मादेनं स्वपितीत्याचक्षते जना इत्यर्थः । × । जाग्र त्स्वप्नयोः श्रान्तो जीवः स्वप्नान्तरूपसुषुप्तौ श्रमापनोदाय भगवतास्वान्तर्निवेशितत्वात्

ಮಾಧ್ವರು, ಈ ಪುರುಷನೆಂದರೆ ಜೀವನು ಯಾವಾಗ ನಿದ್ರೆ ಮಾಡಿರುತ್ತಾನೋ, (ನಾಮ ಎಂದರೆ ಪ್ರಸಿದ್ಧ ಎಂದು ಅರ್ಥ.) ಆಗ ಸತ್ ನಾಮಕನಾದ ಹರಿ ಎಂದರೆ ಪರಮಾತ್ಮನ ಸಂಗಡ ಸಂಪನ್ನನಾಗುತ್ತಾನೆ, ಶೇರಿಕೊಳ್ಳುತ್ತಾನೆ. ಆ ಸಂಗತಿಯನ್ನು (ಈಗ) ಸ್ಪಷ್ಟಪಡಿಸೋಣಾಗುತ್ತದೆ. ಸ್ವತಂತ್ರನಾದಂಥಾ ಹೃದಯಕಮಲಗತನಾದ ಹರಿಯಲ್ಲಿ, ಇತರರಿಗೆ ತಿಳಿಯದಂತೆ,* ಪ್ರವೇ

* ನೋಡುವವನು ಯಾರು?

तदाकेवलं ईश्वराधीनो नस्वतंत्रइत्युक्तं॥२॥ एषचासौपुरुषश्चेत्ये तत्पुरुषो जीवः । × । प रमात्मनासम्पन्नः संगतो भवति ॥ वे ॥

ತಿಸುತ್ತಾನೆ. ಅದು ಹೇಗೆ? ಎಂದರೆ, ಯಾ ವ ಕಾರಣದಿಂದ ಸ್ವತಂತ್ರನಾದಂಥಾ ಹರಿ ಯನ್ನು ಪ್ರಾಪಿಸುತಾನೋ, ಆ ಕಾರಣ ದಿಂದ ಇವನನ್ನು "ಸ್ವಪಿತಿ" (ನಿದ್ರೆ ಮಾಡಿದ್ದಾನೆ) ಎಂದು ಜನರು ಹೇಳುತ್ತಾರೆಂದು ಅರ್ಥ. ಜಾಗ್ರತ್ ಸ್ವಪ್ನಾವಸ್ಥೆಗಳಲ್ಲಿ ಶ್ರಾಂತನಾದ ಜೀವನು, ಸ್ವಪ್ನವಸಾನರೂಪ ವಾದ ಸುಷುಪ್ತಿಯಲ್ಲಿ (ಇವನ) ಶ್ರಮವನ್ನು ಪರಿಹರಿಸುವದಕ್ಕಾಗಿ ಭಗವಂತನು ಇವ ನನ್ನು ತನ್ನೊಳಗೆ ಸೇರಿಸಿಕೊಳ್ಳುವದರಿಂದ, ಆಗ ತೀರಾ ಈಶ್ವರಾಧೀನನಾಗಿರುತ್ತಾನೆ, ಸ್ವತಂತ್ರನಲ್ಲ ಎಂದು ಹೇಳೋಣಾಯಿತು ಎಂದು ಹೇಳುತ್ತಾರೆ.

೯ನೇ ಶ್ರುತಿಯ ವ್ಯಾಖ್ಯಾನದಲ್ಲಿ—

तत्रएवं सति यत्रयस्मिन्काले स्वप्नम यो जीवः सुप्तोभवति । स्वप्नस्य द्विप्रकारत्वा त् विशेषणं समस्तइति । उपसंहृतकरणवृत्ति रित्येतत् । अतोबाह्यविषयसम्पर्कजनित का लुष्याभावात् सम्यक् प्रसन्नः सम्पन्नो भव ति । अतएव स्वप्नविषयाकाराभासं मानसं स्वप्नप्रत्ययं नविजानाति नानुभवतीत्यर्थः ॥ यदैवं सुप्तो भवति आसुसौरतेजःपूर्णासु यथो क्तासु नाडीषु तदासुप्तः प्रविष्टः नाडीभिर्द्वा रभूताभिर्हृदयाकाशं गतो भवतीत्यर्थः । × । तंसतासम्पन्नं नकश्चन नकश्चिदपि धर्माधर्म रूपः पाप्मास्पृशतीति स्वरूपावस्थितत्वादा त्मनः । देहेन्द्रियविशिष्टं हि सुखदुःखकार्यप्र दानेन पाप्मास्पृशति नतुसत्सम्पन्नं । स्वरू पावस्थं कश्चिदपि पाप्मास्प्रष्टुमुत्सहते अवि षयत्वात् । अन्योह्यन्यस्य विषयो भवति । नत्वन्यत्वं केन चित्कुतश्चिदपि सत्सम्पन्नस्य।

ಶಂಕರಾಚಾರ್ಯರು, ಸ್ವಪ್ನಮಯ ನಾದ ಜೀವನು ಯಾವಕಾಲದಲ್ಲಿ ಸುಪ್ತ ನಾಗುತ್ತಾನೋ, ನಿದ್ರೆಯು ಎರಡು ಪ್ರ ಕಾರವಾಗಿವಾಗಿರುವದರಿಂದ ಆ ಸ್ಥಿತಿಯ ಲ್ಲಿರುವಾಗ ಅವಗೆ "ಸಮಸ್ತ"ನೆಂದು ವಿ ಶೇಷಣವಾಗಿರುತ್ತದೆ. (ಅವನ ವಾಗಾದಿ ಸಕಲ) ಕರಣಗಳ ವ್ಯಾಪಾರವು ನಿತ್ತು ಹೋಗಿರುತ್ತದೆಂದು (ಅದರ) ತಾತ್ಪರ್ಯ. ಆದಕಾರಣ ಬಾಹ್ಯವಿಷಯ ಸಂಪರ್ಕದಿಂ ದ ಉಂಟಾಗುವ ಕಲ್ಮಷಗಳಿಲ್ಲದೇ ಇರುವ ಪ್ರಯುಕ್ತ ಅವನು ಸಂಪ್ರಸನ್ನ (ಪೂರ್ಣ ನಿರ್ಮಲ)ನಾಗಿರುತ್ತಾನೆ. ಇದ್ದರಿಂದಲೇ ಅವನು (ಆಗ) ಸ್ವಪ್ನವಿಷಯಾಕಾರಾಭಾ ಸ (ಪ್ರತಿರೂಪ)ವಾದಂಥಾ ಮನೋಜನ್ಯ ವಾದ ಸ್ವಪ್ನಪ್ರತ್ಯಯವನ್ನು (ಗ್ರಹಿಕೆಯ ನ್ನು) ಅನುಭವಿಸುವದಿಲ್ಲ. ಈ ರೀತಿ ಸುಪ್ತನಾದಾಗ (ಅವನು) ಸೂರ್ಯನ

स्वरूपप्रच्यवनं त्वात्मनोजाग्रत्स्वप्नावस्थां प्रतिगमनं बाह्यविषयप्रतिबोधोऽविद्याकामकर्मबीजस्य ब्रह्मविद्याहुताशादाहनिमित्तं ।×। यदैवं सुप्तः सौरेण तेजसानाड्यन्तर्गतेन सर्वतः सम्पन्नः व्याप्तोभवति । अतोविशेषेण चक्षुरादि नाडीद्वारैर्बाह्यविषयभोगायापसृतानिकरणान्यस्यतदा भवन्ति । तस्मादयं करणानां निरोधात्स्वात्मन्ये वावस्थितः स्वप्नं नविजानातीति युक्तं ॥ शं ॥

ತೇಜಸ್‌ನಿಂದ ತುಂಬಿಕೊಂಡಿರುವ ಮೇಲೆ ಹೇಳಿದ ನಾಡಿಗಳಲ್ಲಿ ಹೊಕ್ಕು ಅವುಗಳ ದ್ವಾರಾ ಹೃದಯಾಕಾಶ (ಬ್ರಹ್ಮ)ವನ್ನು ಪ್ರಾಪಿಸುತ್ತಾನೆ. ಸತ್ (ಪರಬ್ರಹ್ಮ)ದಲ್ಲಿ ಸಂಪನ್ನನಾಗುವದರಿಂದ ಅವನಿಗೆ ಧರ್ಮಾಧರ್ಮರೂಪವಾದ ಯಾವ ದೋಷವೂ ತಗಲುವದಿಲ್ಲೆಂದು ಹೇಳಿದ್ದಾಗಿರುತ್ತದೆ. ಯಾಕಂದರೆ ಆಗ ಆತ್ಮನು ತನ್ನ ಸ್ವಂತರೂಪದಲ್ಲಿರುತ್ತಾನೆ. ದೇಹೇಂದ್ರಿಯ ಯುಕ್ತನಾದವಗೆ ಸುಖ ದುಃಖಗಳನ್ನುಂಟುಮಾಡಿಕೊಡುವದರ ಮೂಲವಾಗಿ ಪಾಪವು ತಗಲುವದು ಪ್ರಸಿದ್ಧವಾಗಿರುತ್ತದೆ. ಪರಂತು ಸತ್ ಸಂಪನ್ನನಾದವನನ್ನು ಅದು ಸ್ಪರ್ಶಮಾಡುವದಿಲ್ಲ. ತನ್ನ ಸ್ವರೂಪಸ್ಥಿತಿಯಲ್ಲಿರುವವನು ಯಾವದಕ್ಕೂ ವಿಷಯನಲ್ಲವಾದ್ದರಿಂದ ಯಾವದೊಂದು ಪಾಪವು ಅವನನ್ನು ಮುಟ್ಟಲಿಕ್ಕೆ ಸಮರ್ಥವಾಗುವದಿಲ್ಲ. ಬೇರೆ ಬೇರೆಯಾದರೆ ಒಬ್ಬನು ಇನ್ನೊಬ್ಬಗೆ ವಿಷಯನಾಗುತ್ತಾನೆ. ಪರಂತು ಸತ್ ಸಂಪನ್ನನಾದವನಲ್ಲಿ ಯಾರಿಂದಲೂ ಯಾವ ಕಾರಣದಿಂದಲೂ ಅನ್ಯತ್ವ (ಪರಕೀಯತ್ವ) ಇಲ್ಲ. ಆತ್ಮಗೆ (ಸಂಭವಿಸುವ) ಸ್ವರೂಪಚ್ಯುತಿಯು ಜಾಗ್ರತ್ ಸ್ವಪ್ನಾವಸ್ಥಾ ಪ್ರವೇಶರೂಪವಾದ ಬಾಹ್ಯ ವಿಷಯ ಸಮ್ಮಂಧವಾದ ಎಚ್ಚರ. (ಅದು) ಅಜ್ಞಾನ, ಕಾಮಕರ್ಮಗಳ ಬೀಜವಾದ ಅನಾದಿಕಾಲದ ಅಜ್ಞಾನವು ಬ್ರಹ್ಮವಿದ್ಯರೂಪವಾದ ಅಗ್ನಿಯಿಂದ ಸುಟ್ಟುಹೋಗದೆ ಇರುವ ದೆಸೆಯಿಂದ ಉಂಟಾಗುವದಾಗಿರುತ್ತದೆ. ಈ ರೀತಿ ಸುಪ್ತನಾದವನು ನಾಡಿಗಳಲ್ಲಿರುವ ಸೂರ್ಯನ ತೇಜಸ್‌ನಿಂದ ಎಲ್ಲಾ ಪಾರ್ಶ್ವಗಳಲ್ಲಿಯೂ ವ್ಯಾಪಿಸಲ್ಪಡುತ್ತಾನೆ. ಆದ್ದರಿಂದ ಆಗ ಅವನು ಕಣ್ಣು ಮೊದಲಾದ ಇಂದ್ರಿಯಗಳ ನಾಡಿಗಳ ದ್ವಾರಾ ಬಾಹ್ಯವಿಷಯಗಳನ್ನು ಅನುಭವಿಸದಂತೆ ಅವನ ಕರಣಗಳು (ಆ ಇಂದ್ರಿಯಗಳು) ಹಿಂದೆ ಸರಿದಿರುತ್ತವೆ. ಆದಕಾರಣ ಅವನು, ಕರಣಗಳು ಆತಂಕಪಟ್ಟಿರುವ ದೆಸೆಯಿಂದ, ತನ್ನಲ್ಲಿಯೇ ತಾನು ಸೇರಿಕೊಂಡಿರುತ್ತಾನಾದ್ದ ಪ್ರಯುಕ್ತ ಸ್ವಪ್ನಕಾಣುವದಿಲ್ಲೆಂಬದು ಯುಕ್ತವಾಗಿರುತ್ತದೆಂದು ಹೇಳುತ್ತಾರೆ.

यत्रयदासमस्तः उपसंहतकरणमंडलः।

ರಾಮಾನುಜಾಚಾರ್ಯರು, ಯಾವಾಗ

अतएव सम्प्रसन्नः बाह्यविषयसम्पर्कजनित कालुष्यशून्यः । स्वप्नं न विजानाति न पश्य तीत्येतत् । स्वप्नादर्शनं सुषुप्तिरिति यावत् ॥ तदाआसुनाडीषुसृप्तः प्रविष्टो भवति पुरी तद्ब्रह्मगमनाय नाडीषु प्रविष्टो भवतीत्यर्थः। नाड्योद्वासप्ततिसहस्राणिहृदयात्पुरीततमभि प्रतिष्ठन्ते आभिः प्रत्यवसृप्य पुरीततिशे ते । × । नाडीपुरीतद्ब्रह्मणां समुच्चयेन सु षुप्तिस्थानत्वस्य । × । तन्नकश्चनपाप्मास्पृ शति । सुषुप्तौसतोऽपिकर्मणः फलजननसा मर्थ्यं नास्तीत्यर्थः । तत्रहेतुमाहतेजसा हि तदासम्पन्नो भवति । सतासोम्य तदासम्प न्नो भवतीति श्रुतेः तेजश्शब्दः प्रकाशत्वगु णयोगाद्ब्रह्मपरः । ब्रह्मणिसम्पत्तिर्नामदेहे न्द्रियाधिष्ठातृत्वराहित्येन ब्रह्मण्यवस्थानं ॥ ॥ × ॥ रं ॥

(ನಿದ್ರೆಮಾಡಿದವನು) ಕರಣ (ಇಂದ್ರಿಯ) ಸಮೂಹವನ್ನು ತನ್ನಲ್ಲಿ ಆಕರ್ಷಣೆ ಮಾಡಿಕೊಂಡು ಸಂಪ್ರಸನ್ನ ಎಂದರೆ ಬಾಹ್ಯ ವಿಷಯ ಸಂಪರ್ಕದಿಂದುಂಟಾಗುವ ಕಲ್ಮಷರಹಿತನಾಗುತ್ತಾನೋ ಆಗ ಸ್ವಪ್ನವನ್ನು ಕಾಣುವದಿಲ್ಲ. ಸ್ವಪ್ನಕಾಣದೆ ಇರುವದೇ ಸುಷುಪ್ತಿ ಎಂದು ಇಷ್ಟೇ ಅರ್ಥ. ಆಗ ನಾಡಿಗಳಲ್ಲಿ ಪ್ರವಿಷ್ಟನಾಗುತ್ತಾನೆ. (ಎಂದರೆ) ಹೃದಯವನ್ನು ಕಾಪಾಡಿಕೊಂಡಿರುವ ಪುರೀತತ್ ಎಂಬ ಕೋಶನಿವಾಸಿಕವಾದ ಬ್ರಹ್ಮನನ್ನು ಪ್ರಾಪಿಸುವಗೋಸ್ಕರ ನಾಡಿಗಳಲ್ಲಿ ಪ್ರವೇಶಿಸುತ್ತಾನೆಂದು ಅರ್ಥ. ನಾಡಿಗಳು ಒಟ್ಟು ೭೨೦೦೦ ಇವೆ. ಇವು ಹೃದಯದಿಂದ ಪುರೀತತಿಗೆ ಪಸರಿಸಿಕೊಂಡಿವೆ. ಅವುಗಳಿಂದ ಪ್ರವೇಶಮಾಡಿ ಆ ಪುರೀತತಿಯಲ್ಲಿ (ಇವನು) ಶಯನ ಮಾಡುತ್ತಾನೆ. ಸುಷುಪ್ತಿ ಸ್ಥಾನಸ್ವಭಾವವು ನಾಡಿಗಳಿಗೂ ಪುರೀತತ್‌ದಲ್ಲಿರುವ ಬ್ರಹ್ಮಗೂ ಮಿಳಿತವಾಗಿ ಉಂಟು. ಅವನನ್ನು (ಸುಪ್ತನನ್ನು) ಯಾವ ಪಾಪವು ಸ್ಪರ್ಶ ಮಾಡುವದಿಲ್ಲ. ಸುಷುಪ್ತಿಯಲ್ಲಿದ್ದರೂ ಕರ್ಮಕ್ಕೆ ಫಲಉಂಟುಮಾಡುವ ಸಾಮರ್ಥ್ಯವಿಲ್ಲೆಂದು ಅರ್ಥ. ಆಗ ತೇಜಸ್‌ನಿಂದ ವ್ಯಾಪ್ತನಾಗಿರುವದೇ ಅದಕ್ಕೆ ಕಾರಣವೆಂದು ಹೇಳೋಣಾಗುತ್ತದೆ. (ಇಲ್ಲಿ) ಆಗ ಹೇ ಸೋಮ್ಯ! ಸತ್‌ದಿಂದ ವ್ಯಾಪಿಸಲ್ಪಟ್ಟಿರುತ್ತಾನೆಂದು ಶ್ರುತಿಯು ಹೇಳುವದರಿಂದ ತೇಜಸ್ ಶಬ್ದವು, ಪ್ರಕಾಶಗುಣಯುಕ್ತವಾಗಿರುವ ಕಾರಣ, ಬ್ರಹ್ಮಪರವಾಗಿರುತ್ತದೆ. ಬ್ರಹ್ಮದಲ್ಲಿ ಸಂಪತ್ತಿ ಎಂದರೆ ದೇಹೇಂದ್ರಿಯಗಳಲ್ಲಿ ಕರ್ತೃತ್ವ ವಿರಹಿತವಾಗಿ ಬ್ರಹ್ಮದಲ್ಲಿ ಶೇರೋಣವಾಗಿರುತ್ತದೆಂದು ಹೇಳುತ್ತಾರೆ.

तत्तदा यत्रहरौ एतत्सुप्तः एषजीवः

ಮಾಧ್ವರು, ಆಗ ಈ ಜೀವನು ಹರಿ

5

सुप्तः । समस्तः उपसंहृतेन्द्रियः । अतएव बाह्यविक्षेपाभावात्संप्रसन्नः सम्यक् प्रसन्नः । स्वप्नं स्वाप्नवस्तुजातं नविजानाति तदा आसुनाडीषु सुषुम्नाख्यनाडीस्थेहरौ सुप्तः प्राप्तो भवति । × । नाडीष्विति बहुवचनं प्रतिदेहापेक्षया । तं नाडीस्थभगवतिसुप्तं पाप्मापापं न स्पृशति संसृष्टं न भवति । तत्र हेतुः तेजसाहरिणा तदासुप्तो हियस्मात्संपन्नः तस्मादिति ॥ रा ॥ संप्रसन्नः स्वरूपसुखानुभववान् जीवः ॥ वे ॥

ಯಲ್ಲಿ ಸುಪ್ತನಾದಾಗ (ತನ್ನ) ಇಂದ್ರಿಯಗಳನ್ನು ಆಕರ್ಷಣೆ ಮಾಡಿಕೊಂಡಿರುತ್ತಾನಾದ ಪ್ರಯುಕ್ತ ಹೊರಗಿನ ವಿಷಯಗಳ ಉಪದ್ರವರಹಿತನಾಗಿ ಚೆನ್ನಾಗಿ ಪ್ರಸನ್ನನಾಗಿರುತ್ತಾನೆ. ಸ್ವರೂಪಸುಖವನ್ನನುಭವಿಸುತ್ತಾನೆ. ಸ್ವಪ್ನವಸ್ತು ಸಮೂಹವನ್ನು ಕಾಣುವದಿಲ್ಲ. ಆಗ ಸುಷುಮ್ನಾ ಎಂಬ ನಾಡಿಯಲ್ಲಿರುವ ಹರಿಯನ್ನು ಪ್ರಾಪಿಸುತ್ತಾನೆ. ನಾಡಿಗಳಲ್ಲಿ ಎಂದು ಬಹುವಚನವನ್ನು ಪ್ರಯೋಗಿಸಿದ್ದು ಪ್ರತಿ ಒಂದು ದೇಹದ ನಿರೀಕ್ಷಣೆಯಿಂದಾಗಿರುತ್ತದೆ. ನಾಡಿಯಲ್ಲಿರುವ ಭಗವಂತನಲ್ಲಿ ಸುಪ್ತನಾದವನನ್ನು ಪಾಪವು ಮುಟ್ಟುವದಿಲ್ಲ. ಅದಕ್ಕೆ ಕಾರಣವೇನಂದರೆ ಸುಪ್ತನಾದವನು ಯಾವ ಕಾರಣದಿಂದ ಆಗ ತೇಜಸ್ ಎಂಬ ಹರಿಯಿಂದ ಸಂಪನ್ನ (ಕೂಡಿಕೊಂಡವ)ನಾಗಿರುತ್ತಾನೋ ಆ ಕಾರಣದಿಂದ ಎಂದು ಹೇಳುತ್ತಾರೆ.

ಇವುಗಳಿಂದೆಲ್ಲ ಸುಷುಪ್ತಿಕಾಲದಲ್ಲಿ ಜೀವನು ತನ್ನ ವಾಗಾದಿ ಕರಣಗಳನ್ನು ಆಕರ್ಷಣೆ ಮಾಡಿಕೊಂಡು ತಾನು ಇರುವ ಸ್ಥಳವನ್ನು ಬಿಟ್ಟು ಹೃತ್ಪುಂಡರೀಕದಲ್ಲಿರುವ ಸತ್ ನಾಮಕವಾದ ಪರಬ್ರಹ್ಮದಲ್ಲಿ ಸೇರಿಕೊಳ್ಳುವದೇ ಸ್ವಪ್ನಕಾಣದೇ ಇರಲಿಕ್ಕೆ ಕಾರಣವೆಂದು ಕಂಡುಬರುತ್ತದೆ. ಇವನೇ ಆತ್ಮನು. ಈ ಸಂಗತಿ ಮುಂದೆ XIನೇ ಪಾಠದಲ್ಲಿ ಸ್ಪಷ್ಟಪಡಿಸೋಣಾಗುತ್ತದೆ.

(೩) ಈಗ ಜೀವ ಇರುವ ಸ್ಥಳ ಯಾವದು ಎಂಬದರ ಕುರಿತು—

तन्मनः तत् प्रकृतं षोडशकलमन्नोपचितं मनोनिर्धारितं तत्प्रविष्टस्तत्स्थस्तदुपलक्षितो जीवस्तन्मन इति निर्दिश्यते । मश्चाक्रोशवत् । समनआख्योपाधिर्जीवोऽविद्याकामकर्मोपदिष्टो दिशंदिशं सुखदुःखादि

ಶಂಕರಾಚಾರ್ಯರು, ಪ್ರಕೃತ (V.೯.ನೇ ಶ್ರುತಿಯಲ್ಲಿ ಪ್ರಸ್ತಾಪಿಸಿದ) ೧೬ ಕಲೆಗಳುಳ್ಳಂಥಾ ಅನ್ನದಿಂದ ಬೆಳದಂಥಾ ಮನಸ್ಸಿನಿಂದ ನಿಶ್ಚಯಿಸಲ್ಪಡುವ, ಮತ್ತು ಮನಸ್ಸಿನಲ್ಲಿ ಪ್ರವೇಶಿಸಿ ಅಲ್ಲಿ ಇದ್ದುಕೊಂಡು

लक्षणां जाग्रत्स्वप्नयोः पतित्वागत्वा अनुभूये त्यर्थः अन्यत्र सदाख्यात्स्वात्मनः आयतनं विश्रमणस्थानमलब्ध्वा प्राणमेव प्राणेन स र्वकार्यकरणाश्रयेणोपलक्षिता प्राणइत्युच्यते सदाख्यापरादेवता । × । अतस्तां देवतां प्राणं प्राणाख्यामेवोपश्रयते । प्राणो बन्धनं यस्यमनसः तत्प्राणबन्धनं हियस्मात्सोम्य मनः प्राणोपलक्षितदेवताश्रयं मनइति तदुप लक्षितो जीवइति ॥ शं ॥

ಅದರಿಂದ ಸೂಚಿಸಲ್ಪಡುವ ಜೀವನು "ಆ ಮನಸು" ಎಂಬ ಶಬ್ದಗಳಿಂದ "ಮಂಚಾ ಕ್ರೋಶ" ದಂತೆ ತೋರಿಸಿಕೊಡಲ್ಪಡು ತ್ತಾನೆ. (ಮಂಚದ ಕರ್ಕಶ ಶಬ್ದದಿಂದ ಅದರಲ್ಲಿ ಮಲಗಿಕೊಂಡಿರುವಾತನು ಹೇ ಗೆ ಸೂಚಿಸಲ್ಪಡುತ್ತಾನೋ ಅದೇ ರೀ ತಿ ಎಂದು ಅರ್ಥ.) ಆ ಮನಸ್ಸೆಂಬ ಉ ಪಾಧಿಯುಕ್ತನಾದ ಜೀವನು ಅವಿದ್ಯಾ ಕಾ ಮಕರ್ಮಗಳಿಂದ ಬೋಧಿಸಲ್ಪಟ್ಟು ಜಾ ಗ್ರತ್ ಸ್ವಪ್ನಾವಸ್ಥೆಗಳಲ್ಲಿ ಸುಖದುಃಖಾದಿರೂಪವಾದ ದಿಕ್ಕುದಿಕ್ಕಿಗೆ ಓಡಿ ಎಂದರೆ ಅವುಗಳನ್ನನುಭವಿಸಿ ಸನ್ನಾಮಕವಾದ ತನ್ನ ಹೊರತು ಬೇರೆ ಎಲ್ಲಿಯೂ ವಿಶ್ರಮಣ ಸ್ಥಾನ ದೊರೆಯದೆ ಪ್ರಾಣವನ್ನೇ ಎಂದರೆ ಸರ್ವ ಕಾರ್ಯಕರಣಗಳಿಗೆ ಆಶ್ರಯಭೂ ತವಾದ ಪ್ರಾಣಶಬ್ದದಿಂದ ಸೂಚಿಸಲ್ಪಡುವ ಪ್ರಾಣವೆಂಬ ಸನ್ನಾಮಕವಾದ ಪರದೇ ವತೆಯನ್ನೇ ಆಶ್ರಯಿಸುತ್ತಾನೆ. ಯಾಕೆಂದರೆ ಮನಸ್ಸು ಪ್ರಾಣಬಂಧನ ಎಂದರೆ ಪ್ರಾ ಣವೇ ಬಂಧನವಾಗಿ ಉಳ್ಳದ್ದು ಯಾವದೋ ಅದು ಆಗಿರುತ್ತದೆ. ಆದಕಾರಣ ಹೇ ಸೋಮ್ಯ! (ಶ್ವೇತುಕೇತು!) ಮನಸ್ಸು ಎಂದರೆ ಪ್ರಾಣಶಬ್ದೋಪಲಕ್ಷಿತವಾದ ದೇವತೆ ಯೇ ಆಶ್ರಯವಾಗಿ ಉಳ್ಳದ್ದು, ಜೀವವು ಅದರಿಂದ ಉಪಲಕ್ಷಿತವಾಗಿರುತ್ತವೆ ಎಂದು ಹೇಳುತ್ತಾರೆ.

तत्अन्नमयं हि सोम्य मनइति प्राङ् निर्दिष्टं मनः दिशंदिशं पतित्वा जाग्रत्स्वप्न योर्नानाविधविषयग्रहणव्यापृतं भूत्वापि तत्र तत्रायतनं विश्रममलब्ध्वा विश्रमायमुख्य प्राणेन संश्लेषविशेषं आपद्यतइत्यर्थः । अत्रहे तुमाहप्राणबन्धनं हि सोम्यमनइति यतःप्रा णेहि मनोनिबध्यत इत्यर्थः । × । अतः सु षुप्तिदशायां वागादीन्द्रियसहितं मनः × प्रा

ರಾಮಾನುಜಾಚಾರ್ಯರು, "ಆ ಮ ನಸ್ಸು" ಎಂದರೆ ಹೇ ಸೋಮ್ಯ! ಮನ ಸ್ಸು ಅನ್ನಮಯವಾದ್ದೆಂದು ಈ ಮೊದಲು (Vನೇ ಪಾಠದಲ್ಲಿ) ಹೇಳಲ್ಪಟ್ಟಿದ್ದು ಜಾಗ್ರ ತ್ ಸ್ವಪ್ನಾವಸ್ಥೆಗಳಲ್ಲಿ ನಾನಾತರಹದ ವಿಷ ಯ ಸ್ವೀಕಾರದಲ್ಲಿ ಉದ್ಯುಕ್ತವಾಗಿದ್ದರೂ ಅಲ್ಲಿ ಎಲ್ಲಿಯೂ ವಿಶ್ರಾಂತಿ ದೊರೆಯದೆ ವಿಶ್ರಾಂತಿಗೋಸ್ಕರ ಮುಖ್ಯಪ್ರಾಣನನ್ನು

णेसंश्लेषविशेषमापन्नं सदुपरतव्यापारं भवति। सुषुप्तिदशायां प्राणमात्रमनुपरतव्यापारमास्ते । × ॥ रं ॥

ವಿಶೇಷವಾಗಿ ಅಂಟಿಕೊಳ್ಳುತ್ತದೆಂದು ಅರ್ಥ. ಇದಕ್ಕೆ ಕಾರಣವೇನಂದರೆ ಪ್ರಾಣನಲ್ಲಿ ಮನಸ್ಸು ನಿಬದ್ಧವಾಗಿರುತ್ತದೆಂದು ಹೇಳೋಣಾಗುತ್ತದೆ. ಆದಕಾರಣ ಸುಷುಪ್ತಿಕಾಲದಲ್ಲಿ ವಾಗಾದೀಂದ್ರಿಯಸಹಿತವಾದ ಮನಸ್ಸು ಪ್ರಾಣನಲ್ಲಿ ಸಂಶ್ಲಿಷ್ಟ (ಆಲಿಂಗನ) ವಿಶೇಷವನ್ನು ಪಡೆದುಕೊಂಡು ತನ್ನ ವ್ಯಾಪಾರವನ್ನು ನಿಲ್ಲಿಸಿಬಿಟ್ಟಿರುತ್ತದೆ. ಆಗ ಪ್ರಾಣಮಾತ್ರ (ಅವನ) ವ್ಯಾಪಾರ ನಿಲ್ಲಿಸದೆ (ನಡಿಸುತ್ತಾ) ಇರುತ್ತಾನೆಂದು ವಿವರಿಸುತ್ತಾರೆ.

एतन्मनः मनुते अवबुध्यते इति मनो नामैषजीवः । प्राणमेव प्रणयनहेतुनाप्राण नामकं हरिमेवोपश्रयते । × । कुतः हियस्मात् मनोजीवः प्राणबन्धनं प्राणेन बध्यमानस्तस्मादिति ॥ रा ॥ मननान्मनोनामजीवः स्वप्नजागरणयोः संसारे वादिशं दिशं पतित्वा प्राणादन्यत्रायतनमलब्ध्वा प्राणमेव प्राणनात्प्राणनामकं परमात्मान मेवोपश्रयते । × । हियस्मान्मनो जीवः प्राणबन्धनं प्राणएव बन्धनं बन्धकोयस्यतत्तथोक्तं तस्मात्प्राणमेवोपश्रयत इत्यर्थः ॥ वे ॥

ಮಾಧ್ವರು (ಇಲ್ಲಿ) ಮನಸ್ಸು ಎಂದರೆ ಮನನಮಾಡುತ್ತಾನೆ (ಯೋಚಿಸುತ್ತಾನೆ ಅಥವಾ ತಿಳಕೊಳ್ಳುತ್ತಾನೆ) ಎಂಬ ನಿರ್ವಚನರೀತ್ಯಾ ಜೀವನ ಹೆಸರು. ಇವನು ಸ್ವಪ್ನ ಜಾಗ್ರುದವಸ್ಥೆಗಳಲ್ಲಿ ಅಥವಾ ಸಂಸಾರದಲ್ಲಿ ದಿಕ್ಕುದಿಕ್ಕಿಗೆ ಓಡಿ ಪ್ರಾಣನ ಹೊರತು ಬೇರೆ ಎಲ್ಲಿಯೂ ಆಶ್ರಯ ದೊರಕದೇ ಪ್ರೇರಿಸುವವನಾದ ಕಾರಣ, ಅಥವಾ ಬದುಕಿಸುವವನಾದ ಕಾರಣ, ಪ್ರಾಣನೆಂದು ಕರೆಯಲ್ಪಡುವ ಹರಿ ಎಂದರೆ ಪರಮಾತ್ಮನನ್ನೇ ಹೊಂದಿಕೊಳ್ಳುತ್ತಾನೆ. ಯಾಕೆಂದರೆ ಯಾವ ಕಾರಣದಿಂದ ಜೀವನು ಪ್ರಾಣನಿಂದ ನಿರ್ಬಂಧಿಸಲ್ಪಡುವವ ಯಾನೆ ಪ್ರಾಣನೇ ಬಂಧಕನಾಗಿ ಉಳ್ಳವನಾಗಿರುತ್ತಾನೋ ಆ ಕಾರಣದಿಂದ ಪ್ರಾಣನನ್ನೇ ಆಶ್ರಯಿಸುತ್ತಾನೆಂದು ಅರ್ಥವೆಂದು ಹೇಳುತ್ತಾರೆ.

(೪) ಇನ್ನು ಈ ಪಾಠದಲ್ಲಿರುವ ಮಿಕ್ಕ ಶ್ರುತಿಗಳ ಪೈಕಿ ೧೧, ೧೩ನೇಯವುಗಳು ವಿಶೇಷವಾದವುಗಳು. ಅವುಗಳ ವ್ಯಾಖ್ಯಾನಗಳಲ್ಲಿ

यस्माच्चैवं आत्मनस्सद्रूपता मज्ञात्वैव सत्सम्पद्यन्ते अतस्त इहलोके यत्कर्मनिमित्ताः यांयां जातिं प्रतिपन्नाआसुर्व्याघ्रादीनां

ಶಂಕರಾಚಾರ್ಯರು, ಈ ರೀತಿ (ಪುಷ್ಪರಸಗಳಂತೆ) ಪ್ರಜೆಗಳು ಆತ್ಮನ ಸದ್ರೂಪವನ್ನು ತಿಳಿಯದೇನೇ ಸತ್ ಸಂಪತ್ತಿಯು

व्याघ्रोऽहं सिंहोऽह मित्येवं तेतत्कर्मज्ञानवासनाङ्किताःसन्तः सत्प्रविष्टा अपितद्भावेनैव पुनराभवन्ति । पुनःसत आगत्यव्याघ्रोवा सिंहोवा वृकोवा वराहोवा कीटोवा पतङ्गोवा दंशोवा मशकोवा यद्यत्पूर्वमिहलोके भवन्ति संबभूवुरित्यर्थः । तदेव पुनरागत्य भवन्ति । युगसहस्रकोट्यन्तरितापि संसारिणोजन्तोर्यापुरा भाविता वासनासाननश्यतीत्यर्थः ॥ एवमेव खलुसोम्येमाः सर्वाः प्रजाः यस्मात्सतिसम्पद्य न विदुः तस्मात्सत आगम्य न विदुःसत आगच्छामहे आगताइति वा । × । समानमन्यत् ॥ शं ॥

ನ್ನು ಪಡೆಯುವದರಿಂದ ಈ ಲೋಕದಲ್ಲಿ ಅವರು ಯಾವ ಕರ್ಮನಿಮಿತ್ತವಾಗಿ ಹುಲಿ ಮೊದಲಾದ ಯಾವ ಯಾವ ಜಾತಿಯುವರಾಗಿರುತ್ತಾರೋ—ನಾನು ಹುಲಿ, ನಾನು ಸಿಂಹ, ಎಂಬ ಈ ತರಹದ ಆ ಕರ್ಮ, ಜ್ಞಾನ, ಇವುಗಳ ವಾಸನಾಯುಕ್ತರಾಗಿರುತ್ತಾರಾದ ಕಾರಣ, ಸುಷುಪ್ತಿಯಲ್ಲಿ ಸತ್‌ದಲ್ಲಿ ಪ್ರವೇಶವಾಗಿದ್ದರೂ ಆ ವ್ಯಾಘ್ರಾದಿ ಭಾವಗಳಿಂದಲೇ ಪುನಹ ಪ್ರವೃತ್ತಿಮಾಡುತ್ತಾರೆ. ಎಂದರೆ ಸತ್‌ದಿಂದೆದ್ದು ಬಂದು ವ್ಯಾಘ್ರವಾಗಲೀ, ಸಿಂಹವಾಗಲೀ, ತೋಳವಾಗಲೀ, ವರಾಹವಾಗಲೀ, ನೊಣವಾಗಲೀ, ನುಸಿಯಾಗಲೀ, ಈ ಲೋಕದಲ್ಲಿ (ತಾವು) ಮೊದಲು ಏನೇನು ಆಗಿದ್ದವೋ ಪುನಹ ಅದದೇ ಆಗುತ್ತಾರೆ. ಸಹಸ್ರಕೋಟಿ ಯುಗಗಳು ಕಳದಿದ್ದರೂ ಸಂಸಾರಿಯಾದ ಪ್ರಾಣಿಯ ಪೂರ್ವವಾಸನೆಯು ಅಳಿಸಿಹೋಗುವದಿಲ್ಲ.

ಅದೇ ರೀತಿ ಹೇ ಸೋಮ್ಯ! (ಶ್ವೇತಕೇತು) ಈ ಸಕಲ ಪ್ರಜೆಗಳೂ ಯಾವ ಕಾರಣದಿಂದ ಸತ್ ಸಂಪತ್ತಿಯನ್ನು ಪಡದರೂ ಆ ಸಂಗತಿಯನ್ನು ಹೇಗೆ ತಿಳಿಯುವದಿಲ್ಲವೋ, ಆ ಕಾರಣದಿಂದ ಸತ್‌ದಿಂದ (ಹೊರಟು) ಬಂದರೂ ಅದರಿಂದ ಬಂದಿದ್ದೇವೆಂಬುದನ್ನು ತಿಳಿಯುವದಿಲ್ಲ; ಮಿಕ್ಕದ್ದೆಲ್ಲ ಮೇಲೆ ಹೇಳಿದಂತೆಯೇ ಎಂದು ಸಹ ಅರ್ಥ ಹೇಳುತ್ತಾರೆ.

अथसुषुप्ते रुत्थिताश्च प्रजाः स्वापात्पूर्वे यद्यद्भवन्ति येये अभवन् तेते आभवन्ति आगत्य भवन्ति । सुषुप्तेः प्राग्व्याघ्राभिमानीस्थितः सुषुप्त्यनन्तरमपि व्याघ्रोऽह मित्यभिमन्यमान एवभवतीत्यर्थः । पूर्ववासनावासित एवोत्तिष्ठतीति यावत् । ततश्च दर्श

ರಂಗರಾಮಾನುಜಾಚಾರ್ಯರು, ಅನಂತರ ಸುಷುಪ್ತಿಯಿಂದೆದ್ದಂಥಾ ಪ್ರಜೆಗಳು ಸುಷುಪ್ತಿಗೆ ಮೊದಲು ಏನೇನು ಆಗಿದ್ದರೋ ಸುಷುಪ್ತಿಯಿಂದೆದ್ದು ಬಂದ ನಂತರಲೂ ಅದದೇ ಆಗುತ್ತಾರೆ. ಸುಷುಪ್ತಿಗೆ ಮೊದಲು ವ್ಯಾಘ್ರದೇಹಾಭಿಮಾನಿಯಾಗಿ

नानुसारात्सुषुप्तौ लयो न पुनरुत्थितिं विरोधीति भावः ॥ तथासुप्तोत्थिता अपिसत उत्थिता आगताइति न प्रत्यभिज्ञातुं समर्था भवन्तीत्यर्थः ॥ रं ॥

ದ್ದದ್ದು, ಅದರ ತರುವಾಯ ಕೂಡಾ ನಾನುವ್ಯಾಘ್ರ ಎಂಬ ಅಭಿಮಾನ ಉಳ್ಳದ್ದೇ ವ್ಯಾಘ್ರವೇ) ಆಗುತ್ತದೆ ಎಂದು ಅರ್ಥ. (ಎಂದರೆ) ಪೂರ್ವವಾಸನಾ (ಜ್ಞಾನ)ಯುಕ್ತವಾಗಿಯೇ ಎದ್ದು ಬರುತ್ತದೆಂದು ಇಷ್ಟೇ ತಾತ್ಪರ್ಯ. ಇದರಿಂದ ದರ್ಶನಾನುಸಾರವಾಗಿ ಸುಷುಪ್ತಿಯಲ್ಲಿ ಸಂಭವಿಸುವ ಲಯವು ಪುನಹ (ಅಲ್ಲಿಂದ) ಎದ್ದು ಬರುವದಕ್ಕೆ ಪ್ರತಿಬಂಧಕವಲ್ಲೆಂದು ಭಾವವಾಗಿರುತ್ತದೆ.

ಹಾಗೆಯೇ ಸುಪ್ತಿಯಿಂದ ಎದ್ದುಬಂದವರು ಕೂಡಾ ಸತ್‌ದಿಂದ ಎದ್ದುಬಂದಿರುತ್ತೇವೆಂಬದನ್ನು ತಿಳಿಯುವದಕ್ಕೆ ಸಮರ್ಥರಾಗುವದಿಲ್ಲ ಎಂದು ಅರ್ಥ, ಎಂದು ಸಹ ಹೇಳುತ್ತಾರೆ.

इहलोकेते प्रसिद्धाः । व्याघ्रोवेत्यादि यद्भवन्ति तत्तदापरमेश्वराश्रितत्वाज्ञानापराधाद्भवन्तीति ॥ रा ॥ अज्ञानभवमनर्थमाहतइत्यादिना ॥ वे ॥ एवमेव खलुसोम्येमाः प्रजाः सतः परमेश्वरादागम्योत्पद्यापि सत आगच्छामहे उत्पन्नाः स्मः इति न विदुः । एवमीश्वरेस्थित्वापितमाश्रिताः स्म इति नै विदुः ॥ रा ॥

ಮಾಧ್ವರು, (ಪ್ರಸ್ತುತ) ೧೧ನೇ ಶ್ರುತಿಯು ಅಜ್ಞಾನದಿಂದುಂಟಾಗುವ ಅನರ್ಥವನ್ನು ಹೇಳುತ್ತದೆ. ಈ ಲೋಕದಲ್ಲಿ ಯಾವವು ಪ್ರಸಿದ್ಧವಾಗಿ ಹುಲಿ ವೊದಲಾದವು ಆಗಿರುತ್ತವೋ (ಸುಷುಪ್ತಿಯಲ್ಲಿ) ಪರಮೇಶ್ವರನನ್ನು ಆಶ್ರಯಿಸಿರುತ್ತೇವೆಂಬ ಜ್ಞಾನಶೂನ್ಯಗಳಾಗಿರುವ ತಪ್ಪಿನದೆಸೆಯಿಂದ ಅದದೇ ಆಗುತ್ತವೆ. ಅದೇ ರೀತಿ ನಿಶ್ಚಯವಾಗಿ ಹೇ ಸೋಮ್ಯ! ಈ ಪ್ರಜೆಗಳು ಪರಮೇಶ್ವರನ ದೆಸೆಯಿಂದ ಹುಟ್ಟಿದರೂ ಸತ್‌ದ (ಆ ಪರಮೇಶ್ವರನ) ದೆಸೆಯಿಂದ ಉತ್ಪನ್ನರಾಗಿದ್ದೇವೆ ಎಂಬದನ್ನು ತಿಳಿಯುವದಿಲ್ಲ. ಅದೇ ರೀತಿ ಈಶ್ವರನಲ್ಲಿದ್ದರೂ ಅವನನ್ನು ಆಶ್ರಯಿಸಿಕೊಂಡಿರುತ್ತೇವೆಂಬದನ್ನು ಅರಿಯರು, ಎಂದು ಸಹ ಅರ್ಥ ಹೇಳುತ್ತಾರೆ.

(೫) ಮಾಧ್ವರು ೭ನೇ ಶ್ರುತಿಯಲ್ಲಿ ಪ್ರಸ್ತಾಪಿಸಿದ ನಾಡಿಗಳಲ್ಲಿ ಮುಖ್ಯವಾದ ೫ ನಾಡಿಗಳಿಗೆ ಹೇಳುವ ಹೆಸರುಗಳು, ವರ್ಣಗಳು, ಮತ್ತು ಅವುಗಳಲ್ಲಿ ಚಿಂತಿಸಬೇಕಾದ ಭಗವದ್ರೂಪಗಳನ್ನು ಸಹ ಕೆಳಗೆ ಬರೆದ ಯಂತ್ರದಲ್ಲಿ ವಿವರಿಸೋಣಾಗಿರುತ್ತವೆ.

| ನಾಡಿಗಳ ಹೆಸರುಗಳು. | | ವರ್ಣಗಳು. | ಭಗವದ್ರೂಪಗಳು. |
|---|---|---|---|
| ೧ | ಸುಷುಮ್ನಾ | ಪಿಂಗಳ (ಕಪಿಲ) | ಸಂಕರ್ಷಣ |
| ೨ | ನಾದಿನೀ | ಶುಕ್ಲ | ವಾಸುದೇವ |
| ೩ | ಪಿಂಗಳಾ | ನೀಲ | ಅನಿರುದ್ಧ |
| ೪ | ವಜ್ರಿಕಾ | ಹಳದಿ | ಪ್ರದ್ಯುಮ್ನ |
| ೫ | ಇಡಾ | ರಕ್ತ | ನಾರಾಯಣ |

## VIIನೇ ಪಾಠ.

# ಹೃದಯಪುಂಡರೀಕ ವಿಚಾರ.



(१) **अथयदिदमस्मिन् ब्रह्मपुरेदहरं पुण्डरीकं वेश्म दहरोऽस्मिन्नन्तराकाशस्तस्मिन् यदन्तस्तदन्वेष्टव्यं तद्वाव विजिज्ञासितव्यमिति** ॥ (८—१—१.)

(೧) ಅನಂತರ ಈ ಬ್ರಹ್ಮದ ಪಟ್ಟಣ (ವಾದ ಶರೀರ)ದಲ್ಲಿ ಚಿಕ್ಕ ಕಮಲರೂಪವಾದ ಅರಮನೆಯು (ಹೃದಯ) ಇದೆ. ಅದರಲ್ಲಿ ಕೊಂಚ ಆಕಾಶವಿದೆ. ಅದರೊಳಗೆ ಏನು ಇದೆಯೋ ಅದನ್ನು ಹುಡುಕಬೇಕು ಮತ್ತು ತಿಳಕೊಳ್ಳಲಿಕ್ಕೆ ಇಚ್ಛಿಸಬೇಕೆಂತ (ಆಚಾರ್ಯರು ಹೇಳಬೇಕು.)

(२) तञ्चेद्ब्रूयुर्यदिदमस्मिन् ब्रह्मपुरे दहरं पुण्डरीकं वेश्म दहरोऽस्मिदन्नन्तराकाशः किंतदत्रविद्यते यदन्वेष्टव्यं यद्वाव विजिज्ञासितव्यमिति? ॥ सब्रूयात् (८—१—२)

(೨) ಹೀಗೆ ಹೇಳುವ ಆಚಾರ್ಯರ ಕೂಡೆ ಶಿಷ್ಯರು "ಈ ಬ್ರಹ್ಮದಪಟ್ಟಣದಲ್ಲಿ ಚಿಕ್ಕ ಕಮಲರೂಪವಾದ ಅರಮನೆ ಇದೆ. ಅದರಲ್ಲಿ ಕೊಂಚ ಆಕಾಶವಿದೆ. ಇದರಲ್ಲಿ ಹುಡುಕಲಿಕ್ಕೆ ಮತ್ತು ತಿಳಕೊಳ್ಳಲಿಚ್ಛಿಸಲಿಕ್ಕೆ ಯೋಗ್ಯವಾದದ್ದು ಏನು ಇದೆ (ಇದ್ದೀತು?) ಎಂದು (ಶಿಷ್ಯರು) ಪ್ರಶ್ನೆಮಾಡಿದರೆ ಆಚಾರ್ಯರು ಏನು ಹೇಳಬೇಕಂದರೆ—

(३) यावान्वा अयमाकाशस्तावानेषोऽन्तर्हृदय आकाश उभे अस्मिन् द्यावापृथिवी अन्तरेवसमाहिते । उभावग्निश्च वायुश्च सूर्याचन्द्रमसावुभौ । विद्युन्नक्षत्राणि । यच्चास्येहास्ति यच्चनास्तिसर्व्वं तदस्मिन् समाहितमिति ॥ (८—१—३)

(೩) ಈ (ಹೊರಗಿರುವ) ಆಕಾಶ ಎಷ್ಟು ವಿಸ್ತಾರವಾದದ್ದೋ ಹೃದಯದೊಳಗಿರುವ ಆಕಾಶವು ಅಷ್ಟು ವಿಸ್ತಾರವಾದದ್ದು. ಇದರಲ್ಲಿ ದ್ಯುಲೋಕ ಮತ್ತು ಪೃಥ್ವಿ ಇವೆರಡೂ ಇವೆ. ಅಗ್ನಿ ವಾಯು ಇವೆರಡೂ, ಸೂರ್ಯ ಚಂದ್ರ ಇವೆರಡೂ, ಮಿಂಚು, ನಕ್ಷತ್ರಗಳು ಮತ್ತು ಇಲ್ಲಿ ಇವನದಾಗಿ ಏನು ಇದೆಯೋ, ಏನು ಇಲ್ಲವೋ, ಅದೆಲ್ಲ ಇದರಲ್ಲಿ ಇವೆ, ಎಂದು;

(४) तञ्चेद्ब्रूयुरस्मिंश्चेदिदं ब्रह्मपुरे सर्व्वं समाहितं सर्वाणि च भूतानि सर्वे च कामा यदैनज्जरावाप्नोति प्रध्वंसतेवा किं ततोऽतिशिष्यत इति? ॥ (८—१—४)

(೪) ಈ ರೀತಿ ಹೇಳುವ ಆಚಾರ್ಯರ ಕೂಡೆ ಶಿಷ್ಯರು "ಈ ಬ್ರಹ್ಮದ ಪಟ್ಟಣದಲ್ಲಿ (ಬ್ರಹ್ಮಪುರ ಶಬ್ದೋಪಲಕ್ಷಿತ ಅಂತರಾಕಾಶದಲ್ಲಿ) ಸಕಲವೂ ಮಿಳಿತವಾಗಿರುವ ಪಕ್ಷದಲ್ಲಿ—ಸಕಲ ಪ್ರಾಣಿಗಳು, ಬೇಕಾದ ವಸ್ತುಗಳು, (ಇರುವ ಪಕ್ಷದಲ್ಲಿ)—ಇದು (ಶರೀರ) ಮುದಿಯಾದಾಗ, ಅಥವಾ ನಾಶಪಟ್ಟಾಗ ಅದರ ಹೊರತು ಬೇರೆ ಏನು ಉಳಿಯುತ್ತದೆ? (ಎಂದು ಕೇಳಿದರೆ):—

(५) सब्रूयान्नास्य जरयैतज्जीर्यति न वधेनास्यहन्यत एतत्सत्यं ब्रह्मपुरमस्मिन् कामाः समाहिता एष आत्माऽपहतपाप्माविजरोविमृत्युर्विशोको विजिघत्सोऽपिपासः सत्य

(೫) ಅವರು ಹೇಳಬೇಕೇನಂದರೆ, ಇದರ (ಶರೀರದ) ಮುಪ್ಪಿನಿಂದ ಇದು (ಈ ಬ್ರಹ್ಮಪುರೋಪಲಕ್ಷಿತ ಅಂತರಾಕಾಶ ನಾಮಕ ಬ್ರಹ್ಮ) ಮುದಿ ಆಗುವದಿಲ್ಲ.

कामः सत्यसङ्कल्पो यथाह्येवेह प्रजा अन्वाविशन्ति यथानुशासनं यं यमन्तमभिकामा भवन्ति । यंजनपदं यंक्षेत्रभागं । तंतमेवोपजीवन्ति ॥ (८–१–५)

ಇದರ ಸಾವಿನಿಂದ ಸಾಯುವದಿಲ್ಲ. ಈ ಬ್ರಹ್ಮಪುರವು ಸತ್ಯವಾದದ್ದು. ಇದರಲ್ಲಿ ಬೇಕಾದದೆಲ್ಲ ಇವೆ. ಇವನೇ ಆತ್ಮನು, ಪಾಪಲೇಪವಿಲ್ಲದವನು, ವೃದ್ಧಾಪ್ಯವಿಲ್ಲದವನು, ಸಾವಿಲ್ಲದವನು, ದುಃಖ ಇಲ್ಲದವನು, ಹಸಿವೆ ಇಲ್ಲದವನು, ತೃಷೆ ಇಲ್ಲದವನು, ಸತ್ಯವಾದ ಇಚ್ಛೆಗಳುಳ್ಳವನು, ಸತ್ಯಸಂಕಲ್ಪ ಉಳ್ಳವನು. ಇಲ್ಲಿ ಜನಗಳು, (ಅರಸಿನ) ಆಜ್ಞೆಗೆ ವಿಧೇಯರಾಗಿ ಹೇಗೆ ನಡಕೊಳ್ಳುತ್ತಾರೋ, ಹಾಗೆ, ಯಾವ ಯಾವ ಪ್ರದೇಶವನ್ನು ಇಚ್ಛಿಸುತ್ತಾರೋ—ದೇಶವೋ, ಹೋಲವೋ—ಅದದನ್ನೇ ಆಶ್ರಯಿಸಿಕೊಂಡಿರುತ್ತಾರೆ. (ಇಚ್ಛಾಧೀನರಾಗಿರುತ್ತಾರೆ.)

(६) तद्यथेहकर्मजितो लोकः क्षीयत एवमेवामुत्रपुण्यजितो लोकः क्षीयते । तद्यइहात्मानमननुविद्य व्रजन्त्येतांश्च सत्यान् कामांस्तेषांसर्वेषु लोकेष्वकामचारो भवत्यथय इहात्मानमनुविद्यव्रजन्त्येतांश्च सत्यान् कामांस्तेषां सर्वेषु लोकेषु कामचारो भवति ॥ (८–१–६)

(೬) ಆದಕಾರಣ, ಹೇಗೆ ಇಲ್ಲಿ ಕರ್ಮದಿಂದ ಸಂಪಾದಿಸಿದ ಲೋಕವು ಕ್ಷಯಿಸಿ (ತಪ್ಪಿ) ಹೋಗುತ್ತದೋ, ಹಾಗೆಯೇ, ಪುಣ್ಯದಿಂದ ಘಳಿಸಿದ ಪರಲೋಕ (ಭೋಗ)ವು ಅಲ್ಲಿ ಕ್ಷಯವಾಗುತ್ತದೆ. ಆದಕಾರಣ ಇಲ್ಲಿ ಆತ್ಮನನ್ನೂ, ಮತ್ತು ಈ ಸತ್ಯ ಕಾಮಗಳನ್ನೂ ತಿಳಕೊಳ್ಳದೆ ಯಾರು (ಮರಣಪಟ್ಟು) ಹೋಗುತ್ತಾರೋ ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಸ್ವಾತಂತ್ರ್ಯವು ಇಲ್ಲದೇ ಹೋಗುತ್ತದೆ. ಪರಂತು ಯಾರು ಆತ್ಮನನ್ನೂ ಈ ಸತ್ಯಕಾಮಗಳನ್ನೂ ತಿಳಕೊಂಡು ಹೋಗುತ್ತಾರೋ ಅಂಥವರಿಗೆ ಸಕಲ ಲೋಕಗಳಲ್ಲಿಯೂ ಸ್ವಾತಂತ್ರ್ಯವು ದೊರೆಯುತ್ತದೆ.

(७) तइमेसत्याः कामा अनृतापिधानास्तेषां सत्यानां सतामनृतमपिधानं । योयोह्यस्येतः प्रैति नतमिहदर्शनायलभते ॥ (८--३--१)

(೭) ಈ ಸತ್ಯವಾದ ಇಚ್ಛೆಗಳು ಅನೃತರೂಪವಾದಂಥಾ ಪಿಧಾನ (ಮುಸುಕು) ಉಳ್ಳದ್ದಾಗಿವೆ. ಅವು ಸತ್ಯವಾದವುಗಳೇ ಆದರೂ ಮಿಥ್ಯವು (ಅವುಗಳಿಗೆ) ಮರೆಯಾಗಿ ಇದೆ. ಆದ ಕಾರಣ, ಯಾರಾದರೂ ಇಲ್ಲಿಂದ ಮರಣಪಟ್ಟು ಹೋದರೆ ಅವನು ಇಲ್ಲಿ ಇವಗೆ ಕಾಣಲಿಕ್ಕೆ ದೊರೆಯುವದಿಲ್ಲ.

(८) अथये चास्येह जीवाये च प्रेता यच्चान्यदिच्छन्नलभते । सर्वं तदत्रगत्वाविन्द तेऽत्रह्यस्यैते सत्याः कामा अनृतापिधानास्त यथाऽपिहिरण्यनिधिं निहितमक्षेत्रज्ञा उपर्युपरिसञ्चरन्तो नविन्देयुरेवमेवेमाः सर्वाः प्रजा अहरहर्गच्छन्त्य एतं ब्रह्मलोकं नविन्दन्त्यनृतेनहिप्रत्यूढाः ॥ (८—३—२)

(೮) ಪರಂತು ಇವಗೆ ಬೇಕಾದವರಲ್ಲಿ ಬದುಕಿಕೊಂಡಿರುವವರನ್ನಾಗಲಿ, ಸತ್ತುಹೋದವರನ್ನಾಗಲಿ, ಮತ್ತು ಇನ್ಯಾವದನ್ನಾದರೂ ಆಗಲಿ ಇಚ್ಛಿಸಿದರೆ ಇಲ್ಲಿ ಯಾವದು ದೊರೆಯುವದಿಲ್ಲವೋ, ಅದೆಲ್ಲ ಇಲ್ಲಿ (ಹೃದಯಾಕಾಶ ರೂಪ ಬ್ರಹ್ಮದಲ್ಲಿ) ಹೋಗಿ (ಇವನು) ಕಾಣುತ್ತಾನೆ. ಯಾಕೆಂದರೆ ಇಲ್ಲಿ ಇವನ ಈ ಸತ್ಯವಾದ ಇಚ್ಛೆಗಳು ಅನೃತರೂಪವಾದ ಆಚ್ಛಾದನೆಯಿಂದ ಮುಚ್ಚಿ ಇವೆ. ಅದು ಹೇಗೆಂದರೆ ಒಂದು ಹಣವಿನ ಕೊಪ್ಪರಿಗೆಯನ್ನು ಹೂಳಿಟ್ಟ ಸ್ಥಳವನ್ನರಿಯದವರು ಅದರ ಮೇಲೆ ಪದೇ ಪದೇ ಸಂಚರಿಸಿದರೂ ಹೇಗೆ ಆ ನಿಧಿಯನ್ನು ಕಂಡುಕೊಳ್ಳುವದಿಲ್ಲವೋ ಹಾಗೇಯೇ ಈ ಸಕಲ ಪ್ರಾಣಿಗಳು ದಿನವಹಿ ಈ ಬ್ರಹ್ಮಲೋಕಕ್ಕೆ ಹೋದರೂ ಅದನ್ನು ಕಂಡುಕೊಳ್ಳುವದಿಲ್ಲ. ಯಾಕೆಂದರೆ ಇವರು ಅನತದಿಂದ ಆತಂಕಿಸಲ್ಪಟ್ಟಿರುತ್ತಾರೆ (ಅಲ್ಲಿಂದ ಹೊರಮಾಡಲ್ಪಡುತಾರೆ).

(९) सवाएष आत्माहृदितस्यैतदेव निरुक्तं हृदयमिति । तस्माद्धृदयमहरहर्वा एवं वित् स्वर्गं लोकमेति ॥ (८—३—३)

(೯) ಅವನೇ (ಆಕಾಶನೆಂಬ ಬ್ರಹ್ಮ) ಈ ಹೃದಯದಲ್ಲಿರುವ ಆತ್ಮನು. ಅವನ ವಿವರಣೆಯು ಅದೇ. "ಹೃದಯದಲ್ಲಿರುವವ"ನೆಂತಲೇ ಆಗಿರುತ್ತದೆ. ಆದ ಕಾರಣ ಹೃದಯವನ್ನು ದಿನವಹಿ ಈ ರೀತಿ ತಿಳಿಯುವವನು ಸ್ವರ್ಗಲೋಕವನ್ನು (ಹೃದ್ಗತ ಬ್ರಹ್ಮವನ್ನು) ಪ್ರಾಪಿಸುತ್ತಾನೆ.

(१०) अथयएष सम्प्रसादोऽस्माच्छरीरात्समुत्थायपरंज्योतिरुपसम्पद्यस्वेन रूपेणाभिनिष्पद्यत एष आत्मेति होवाचैतदमृतमभयमेतद्ब्रह्मेति । तस्यहवा एतस्य ब्रह्मणोनाम सत्यमिति ॥ (८—३—४)

(೧೦) ಈಗ ಯಾವ ಈ ಸಂಪ್ರಸಾದನಾದವನು (ಜೀವನು) ಈ ಶರೀರದಿಂದ ತೀರಾ ಹೊರಟು ಪರಂಜ್ಯೋತಿಯನ್ನು ಪ್ರಾಪಿಸಿ ಸ್ವರೂಪ ನಿಷ್ಪತ್ತಿಯನ್ನು ಹೊಂದುತ್ತಾನೋ ಇವನು ಪ್ರಸಿದ್ಧನಾದ ಆತ್ಮನು, ಇವನು ಮರಣವಿಲ್ಲದವನು, ಭಯವಿಲ್ಲದವನು, ಇವನು ಬ್ರಹ್ಮ. ಪ್ರಸಿದ್ಧನಾದ ಈ ಬ್ರಹ್ಮನ ಹೆಸರು "ಸತ್ಯ" ಎಂದು ಆಗಿರುತ್ತದೆಂದು ಆಚಾರ್ಯರು ಹೇಳಿದರು.

(११) तानिहवाएतानि त्रीण्यक्षरा

(೧೧) ಅವುಗಳು ಸ್ಪಷ್ಟವಾಗಿ ಸ,ತಿ,

ण्विति "सतियमिति" तद्यत्सत्तदमृतमथ यत्ति तन्मर्त्यमथयद्यन्तेनोभेयच्छति । यदनेनो भे यच्छति तस्माद्यमहरहर्वा एवंवित्स्वर्गं लोकमेति ॥ (८—३—५).

ಯಮ್, ಎಂಬ ಈ ೩ ಅಕ್ಷರಗಳಾಗಿವೆ. ಅವುಗಳಲ್ಲಿ ಯಾವದು ಸತ್ (ಇದು ಇದೆಯೋ) ಅದು ಮರಣವಿಲ್ಲದ್ದಕ್ಕೆ (ಬ್ರಹ್ಮಕ್ಕೆ) ಸಂಜ್ಞೆ. ಅನಂತರ ಯಾವದು "ತಿ" ಇದೆಯೋ ಅದು ಮರಣವಿರುವದಕ್ಕೆ ಸಂಜ್ಞೆ. ಇನ್ನು ಯಾವದು "ಯಮ್" ಇದೆಯೋ ಅದರಿಂದ (ಮರಣವಿಲ್ಲದ್ದು, ಮರಣವಿರುವದು) ಇವೆರಡೂ ನಿಯಮನ ಮಾಡಲ್ಪಡುತ್ತವೆ. ಇದರಿಂದ (ಅವು) ಎರಡೂ ನಿಯಮಿಸಲ್ಪಡುವ ಕಾರಣ "ಯಮ್" ಆಗಿರುತ್ತದೆ. ಯಾವಾಗಲೂ ಈ ರೀತಿ ತಿಳಿದವನು ಸ್ವರ್ಗಲೋಕವನ್ನು ಪ್ರಾಪಿಸುತ್ತಾನೆ.

-·✳·-

## VIನೇ ಪಾಠದ.

# ವ್ಯಾಖ್ಯಾನ ಸಂಗ್ರಹ.



ಹಿಂದೆ ಹೋದ VIನೇ ಪಾಠದಲ್ಲಿ ಪುರುಷನು ಇವನಿಗೆ ಪ್ರತಿದಿನವೂ ಸಂಭವಿಸುವ ಸುಷುಪ್ತಿಯ ಕಾಲದಲ್ಲಿ ತನ್ನ ಹೃದಯದಲ್ಲಿರುವ ಸತ್‌ದಲ್ಲಿ ಸಂಪತ್ತಿಯನ್ನು ಪಡದರೂ, ಆ ಸಂಗತಿ ಇವನು ತಿಳಿಯುವದಿಲ್ಲೆಂದು ಹೇಳೋಣಾಯಿತು. ಅದಕ್ಕೆ ಕಾರಣವೇನು, ಮತ್ತು ಆ ಬ್ರಹ್ಮದ ಸ್ವರೂಪ ಎಂಥಾದ್ದು, ಎಂಬ ವಗೈರೆ ಕೆಲವು ಸಂಗತಿಗಳನ್ನು ಈ ಪಾಠದಲ್ಲಿ ವಿವರಿಸೋಣಾಗುತ್ತದೆ. ಈ ಪಾಠವು ಇದರ ಉಪೋದ್ಘಾತದಲ್ಲಿ ಸೂಚಿಸಿರುವಂತೆ ಬರುವ XIನೇದಕ್ಕೆ ಸಮ್ಮಂಧಪಟ್ಟುಕೊಂಡುಂಟು. ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ (V, VIನೇ ಪಾಠಗಳಲ್ಲಿ ವಿವರಿಸಿದ) ಅವಸ್ಥಾತ್ರಯದಿಂದ ವಿರಹಿತಪಡಿಸಿ, ತಿಳಕೊಳ್ಳಬೇಕಾಗಿ XIನೇ ಪಾಠದಲ್ಲಿ ಹೇಳುವ ಪ್ರತ್ಯಗಾತ್ಮಗೆ ಯಾವ ಲಕ್ಷಣಗಳು ಹೇಳೋಣಾಗಿವೆಯೋ, ಕೆಳಗೆ ವಿವರಿಸುವ ಹೃತ್ಪುಂಡರೀಕಾಕಾಶದೊಳಗಿರುವ ಆಕಾಶವೆಂಬ ಬ್ರಹ್ಮವು ಅದೇ ಲಕ್ಷಣಗಳುಳ್ಳದ್ದೆಂತಲೂ ಅದೇ ಆತ್ಮನೆಂದು ಕೂಡಾ ಈ ಪಾಠದ ೫, ೯, ೧೦ನೇ ಶ್ರುತಿಗಳಲ್ಲಿ ಹೇಳೋಣಾಗುವ ಕಾರಣ, ಇದರ ಉದ್ದಿಶ್ಯವು ಬ್ರಹ್ಮಗೂ ಆತ್ಮಗೂ ಮತ್ತು ಇವಗೂ ಪ್ರತ್ಯಗಾತ್ಮಗೂ ಅಭೇದ ಪ್ರತಿಪಾ

ದನೆ ಮಾಡುವದೇಯಾಗಿರುತ್ತದೆಂದು ತಿಳಿದುಬರುತ್ತದೆ. ಇಲ್ಲಿ ಹೇಳುವ ಆಕಾಶವೆಂಬ ಬ್ರಹ್ಮವು IIIನೇ ಪಾಠದಲ್ಲಿ ಕಂಡ ಆ ಹೆಸರಿನ ತ್ರಿಪಾದ್ಬ್ರಹ್ಮವೇ ಆಗಿರುತ್ತದೆ. ಈಗ—

(೧) ನಮ್ಮ ಹೃದಯದೊಳಗಿರುವ ಸನ್ನಾಮಕ ಬ್ರಹ್ಮದ ಸ್ವರೂಪ ಎಂಥಾದ್ದು ಮತ್ತು ಅದಕ್ಕೆ ಆ (ಬ್ರಹ್ಮವೆಂಬ) ಹೆಸರು ಏಕೆ ಕೊಡುವದಾಗಿದೆ ಎಂಬದರ ಕುರಿತು—

अथ अनन्तरं यदिदं वक्ष्यमाणं दहरं अल्पं पुण्डरीकं पुण्डरीकसदृशं वेश्मेववेश्म। द्वारपालादि मत्वात् । अस्मिन् ब्रह्मपुरे ब्रह्मण: परस्यपुरं । राज्ञोऽनेकप्रकृतिमद्यथा पुरं तथेदं अनेकेन्द्रियमनोबुद्धिभिः स्वाम्यर्थकारिभिर्युक्तमिति ब्रह्मपुरं । पुरेच वेश्म राज्ञोयथा तथातस्मिन् ब्रह्मपुरे शरीरे दहरं वेश्मब्रह्मण उदलब्ध्यधिष्ठानमित्यर्थः । यथा हि विष्णोः शालग्रामः । अस्मिन् हि स्वविकारशुङ्गे देहे नामरूपव्याकरणाय प्रविष्टं सदाख्यं ब्रह्म जीवेनात्मनेत्युक्तं । तस्मादस्मिन् हृदयपुण्डरीके वेश्मनि उपसंहृतकरणैर्बाह्यविषयविरक्तैर्विशेषतो ब्रह्मचर्यसत्यसाधनताभ्यां युक्तैर्वक्ष्यमाणगुणवध्यायमानैर्ब्रह्मोपलभ्यत इति प्रकरणार्थः । दहरः अल्पतरोऽस्मिन् दहरेवेश्मनि । वेश्मनोऽल्पत्वात्तदन्तर्वर्तिनोऽल्पतरत्वं वेश्मनः । अन्तराकाशः आकाशाख्यं ब्रह्म । × । आकाशइवाशरीरत्वात्सूक्ष्मत्वसर्वगतत्वसामान्याच्च । तस्मिन् आकाशाख्ये यदन्तः मध्येतदन्वेष्टव्यं तद्वाव तदेव च विशेषेण जिज्ञासितव्यं ।

ಶಂಕರಾಚಾರ್ಯರು, ಅನಂತರ ಈ ಕೆಳಗೆ ಹೇಳುವ ಚಿಕ್ಕ ಕಮಲದೋಪಾದಿಯುಳ್ಳಂಥಾ, ದ್ವಾರಪಾಲಾದಿಗಳ ಸಮೇತವಾಗಿರುವದರಿಂದ ಮನೆಯಂತೆ ಇರುವ ಮನೆಯು, ಅರಸಿನ ಪಟ್ಟಣವು ಹೇಗೆ ಅನೇಕ ಪ್ರಜೆಗಳುಳ್ಳದ್ದೋ ಹಾಗೆಯೇ ಸ್ವಾಮಿ ಕಾರ್ಯಗಳನ್ನು ಜರಗಿಸುವ ಚಾಕರರೋಪಾದಿ ಇರುವ ಅನೇಕ ಇಂದ್ರಿಯಗಳು ಮನಸ್ಸು ಬುದ್ಧಿಯುಕ್ತವಾದ ಅರಸಿನ ಅರಮನೆ ಇರುವ ಪಟ್ಟಣದೋಪಾದಿಯುಳ್ಳ ಪರಬ್ರಹ್ಮದ ಪಟ್ಟಣವಾದ ಈ ಶರೀರದಲ್ಲಿ, ಬ್ರಹ್ಮವು ಪ್ರತ್ಯಕ್ಷವಾಗುವ ಚಿಕ್ಕ ಮನೆಯಾಗಿರುತ್ತದೆ. ಶಾಲಗ್ರಾಮವು ವಿಷ್ಣುವಿಗೆ ಹೇಗೋ ಅದರಂತೆ ಅದು ಬ್ರಹ್ಮವಿರುವ ಸ್ಥಳವಾಗಿರುತ್ತದೆ. ಯಾಕಂದರೆ, ಸ್ವವಿಕಾರ ರೂಪಕಾರ್ಯವಾದ ಈ ದೇಹದಲ್ಲಿ ನಾಮ ರೂಪಗಳನ್ನು ವಿಸ್ತರಿಸುವಗೋಸ್ಕರ ಸತ್‌ನಾಮಕ ಬ್ರಹ್ಮವು ಜೀವರೂಪದಿಂದ ತಾನೇ ಪ್ರವಿಷ್ಟವಾಗಿರುತ್ತದೆಂದು (ಈ ಮೊದಲೇ) ಹೇಳೋಣಾಗಿದೆ. ಆದಕಾರಣ ಈ ಹೃದಯಪುಂಡರೀ

गुर्वाश्रयेण श्रवणाद्युपायैरन्विष्य च साक्षात्करणीयमित्यर्थः ॥ शं ॥

ಕರೂಪವಾದ ಮನೆಯಲ್ಲಿ ಇಂದ್ರಿಯಗಳನ್ನು ನಿಗ್ರಹಿಸಿ, ವಿಷಯಗಳಲಿ ವಿರಕ್ತರಾಗಿ, ವಿಶೇಷವಾಗಿ ಬ್ರಹ್ಮಚರ್ಯ ಮತ್ತು ಸತ್ಯರೂಪ ಸಾಧನ ಸಂಪನ್ನರಾಗಿ, ವಕ್ಷ್ಯಮಾಣ ಗುಣಗಳುಳ್ಳದ್ದೆಂದು ಧ್ಯಾನಿಸುವವರಿಗೆ ಬ್ರಹ್ಮನು ಪ್ರತ್ಯಕ್ಷವಾಗುತ್ತದೆಂದು ಈ ಪ್ರಕರಣಾರ್ಥವಾಗಿರುತ್ತದೆ. ದಹರ ಎಂದರೆ ಅಲ್ಪತರ (ಇನ್ನೊಂದರಕ್ಕಿಂತ ಚಿಕ್ಕದಾದ್ದು) ದಹರವಾದ (ಚಿಕ್ಕದಾದ) ಈ ಮನೆಯಲ್ಲಿರುವದು, ಮನೆಯು ಚಿಕ್ಕದಾದ್ದರಿಂದ ಅದರೊಳಗಿರುವದು, ಆ ಮನೆಗಿಂತಲೂ ಅಲ್ಪವಾ(ಚಿಕದಾ)ದದ್ದು. ಅಂತರಾಕಾಶವೆಂದರೆ ಆಕಾಶವೆಂಬ ಬ್ರಹ್ಮ. ಆಕಾಶ (ಎಂದು ಏಕೆ ಹೇಳಿದ್ದೆಂದರೆ) ಆಕಾಶದಂತೆ ಶರೀರ ರಹಿತವಾಗಿಯೂ ಸೂಕ್ಷ್ಮವಾಗಿಯೂ, ಸರ್ವಗತತ್ವ ಸಾಮಾನ್ಯವುಳ್ಳದಾದ್ದರಿಂದ ಕೂಡಾ (ಆಗಿರುತ್ತದೆ). ಆ ಆಕಾಶವೆಂದು ಹೆಸರುಳ್ಳದ್ದರ ಮಧ್ಯದಲ್ಲಿ ಏನು ಇದೆಯೋ ಅದನ್ನು ಗುರುವನ್ನಾಶ್ರಯಿಸೋಣ, ಮತ್ತು ಶ್ರವಣ ಮೊದಲಾದ ಉಪಾಯಗಳಿಂದ ಹುಡುಕಿ ಕಂಡುಕೊಳ್ಳ ಬೇಕೆಂದು ಅರ್ಥವಾಗಿರುತ್ತದೆ ಎಂದು ಹೇಳುತ್ತಾರೆ.

उपासतयासंनिहितस्य परब्रह्मणः स्थानतया नवद्वारादिमत्वादिनाच पुरशब्दिते अस्मिन् शरीरे पुण्डरीकाकारमल्पं हृदयाख्यं परस्य ब्रह्मणोवेश्मेत्यर्थः। अस्मिन्वेश्मन्यन्तः दहरः सूक्ष्मः आकाशः । × । अस्मिन्यो दहर आकाश इत्यर्थः। तस्मिन्यदन्तरित्यत्रान्तःशब्दोऽन्तर्वर्तिपरः च शब्दश्चाध्याहर्तव्यः । ततश्चायमर्थः। अस्मिन् दहरपुण्डरीके योदहराकाशस्तदन्तर्वर्तिच यत्तदुभयं श्रवणमननाभ्यामवगन्तव्यं ध्यातव्यञ्चेति । × । यद्वा । × । अस्मिन् दहराकाशस्तदन्तर्वर्तिच यदिति । × । ततश्चानेनवाक्येन दहराकाशस्तदन्तर्वर्तिचान्वेष्टव्यमित्युक्तं भ

ರಾಮಾನುಜಾಚಾರ್ಯರು, ಉಪಾಸಿಸಲ್ಪಡತಕ್ಕದ್ದಾಗಿ ಸಮೀಪ ಇರುವ ಪರಬ್ರಹ್ಮ ಇರುವ ಸ್ಥಳವಾಗಿಯೂ, ನವದ್ವಾರಾದಿಗಳುಳ್ಳದ್ದಾಗಿ ಇರುವದರಿಂದ ಪಟ್ಟಣವೆಂದು ಹೇಳಲ್ಪಡುವ ಈ ಶರೀರದಲ್ಲಿ ಪುಂಡರೀಕ (ಕಮಲ) ಆಕಾರವಾದ ಅಲ್ಪವಾದ (ಚಿಕ್ಕ) ಹೃದಯವೆಂಬ ಪರಬ್ರಹ್ಮದ ಮನೆ (ಇರುತ್ತದೆ). ಈ ಮನೆಯೊಳಗೆ ಯಾವ ಸೂಕ್ಷ್ಮವಾದ ಆಕಾಶವಿದೆಯೋ ಅದರೊಳಗೆ ಎಂದರೆ ಅದರೊಳಗೆ ಏನು ಇದೆಯೋ ಅದು ಎಂದು ಅರ್ಥ. ಆದ್ದರಿಂದ ಪ್ರಕೃತದ ಶ್ರುತ್ಯರ್ಥವು ಇದು (ಈಗ ನಾವು ಹೇಳುವದು) ಆಗಿರುತ್ತದೆ, (ಯಾ

वाति । × । अत्रचाकाशशब्दः आसमन्तात् काशते प्रकाशत इति व्युत्पत्यापरमात्मपरः ॥ रं ॥

ವದೆಂದರೆ) ಈ ಚಿಕ್ಕದಾದ ಪುಂಡರೀಕ (ಕಮಲ)ದಲ್ಲಿ ಯಾವ ಕೊಂಚ ಆಕಾಶ ವಿದೆಯೋ ಅದನ್ನೂ ಮತ್ತು ಅದರೊಳಗೆ (ಆಕಾಶದೊಳಗೆ) ಏನು ಇದೆಯೋ ಅದನ್ನು ಸಹ ಶ್ರವಣ ಮನನಗಳಿಂದ ತಿಳಕೊಳ್ಳ ಬೇಕು, ಮತ್ತು ಧ್ಯಾನಿಸಬೇಕು ಎಂದು. ಆದಕಾರಣ ಪ್ರಸ್ತುತ ವಾಕ್ಯದಿಂದ ದಹರ (ಅಲ್ಪ) ಆಕಾಶ, ಮತ್ತು ಅದರೊಳಗಿರುವದು ಇವೆರಡನ್ನೂ ಅನ್ವೇಷಣ ಮಾಡಬೇ ಕೆಂದು ಹೇಳಲ್ಪಡುತ್ತದೆ. ಇಲ್ಲಿ ಆಕಾಶಶಬ್ದವು ತೀರಾ ಪ್ರಕಾಶಿಸುತ್ತಲಿದೆ ಎಂಬ ನಿರ್ವಚನ ಪ್ರಕಾರ ಪರಮಾತ್ಮಪರವಾಗಿರುತ್ತದೆ ಎಂದು ಹೇಳುತ್ತಾರೆ.

बृहत्वात्पूर्णगुणत्वात् ब्रह्म । पूर्णकामत्वात्पुरं । ब्रह्म च तत्पुरश्च ब्रह्मपुरं । ब्रह्माख्यं पूर्णवस्तु । तस्मिन्ब्रह्मपुरे हरौतदाधारत्वेन वर्त्तमाने ब्रह्मणः पुरमितिव्युत्पत्या ब्रह्मपुरशब्दितेऽस्मिन्देहे । यदिदं दहरं दभ्रमल्पं पुण्डरीकं कमलरूपं वेश्मग्रहमस्ति । अस्मिन् दहरपुण्डरीकवेश्मनि अन्तराकाशो भूताकाशो वर्तते । तस्मिन् पुण्डरीकान्तस्थदहराकाशेऽन्तर्यद्वर्तते तद्वस्तुअन्वेष्टव्यं । तद्वाव तदेवविजिज्ञासितव्यं श्रवणमननध्यानैर्विषयीकर्तव्यं । × । इति गुरुर्ब्रूयादित्यर्थः ॥ रा ॥

अस्मिन् ब्रह्मणः पुरे शरीरे यत्परंब्रह्म शरीरव्यापि अस्मिन् ब्रह्मपुरे परेब्रह्मणिस्थितं इदं बुद्धिसन्निहितं ॥ वे ॥

ಮಾಧ್ವರು—ಗುಣಪೂರ್ಣವಾಗಿ ಇರುವದರಿಂದ ಬ್ರಹ್ಮ, ಕಾಮಸಮೃದ್ಧಿಯು ಳ್ಳದ್ದಾದ್ದರಿಂದ ಪಟ್ಟಣ, (ಎಂದು) ಬ್ರಹ್ಮವೆಂಬ ಪೂರ್ಣ ವಸ್ತು(ವಿಗೆ ಹೇಳುವದು). ಆ ಬ್ರಹ್ಮವೆಂಬ ಪಟ್ಟಣದಲ್ಲಿ (ಎಂದರೆ) ಹರಿಯಲ್ಲಿ, ಅವನೇ ಆಧಾರವಾಗಿ ಉಳ್ಳ ಬ್ರಹ್ಮದ ಪುರ (ಪಟ್ಟಣ)ವೆಂಬ ನಿರ್ವಚನ ಪ್ರಕಾರ ಬ್ರಹ್ಮಪುರವೆಂಬ ಈ ಶರೀರದಲ್ಲಿ, (ಯಾನೆ) ಬ್ರಹ್ಮಪುರವೆಂಬ ಶರೀರದಲ್ಲಿ ಯಾವದು ವ್ಯಾಪಿಸಿಕೊಂಡುಂಟೋ ಆ ಪರಬ್ರಹ್ಮದಲ್ಲಿ, ಈ ಬುದ್ಧಿಗೆ ಗೋಚರವಾಗಿರುವ ಚಿಕ್ಕ ಕಮಲರೂಪವಾದ ಮನೆ ಇದೆ. ಈ ಚಿಕ್ಕ ಕಮಲರೂಪವಾದ ಮನೆಯಲ್ಲಿ ಭೂತಾಕಾಶವಿದೆ. ಆ ಪುಂಡರೀಕದೊಳಗಿರುವ ಅಲ್ಪಾಕಾಶದೊಳಗೆ ಏನು ಇದೆಯೋ ಆ ವಸ್ತುವನ್ನು ಹುಡುಕಬೇಕು. ಅದನ್ನೇ ವಿಶೇಷವಾಗಿ ತಿಳಕೊಳ್ಳಲಿಕ್ಕೆ ಇಚ್ಛಿಸಬೇಕು, ಎಂದರೆ ಶ್ರವಣ, ಮನನ, ಧ್ಯಾನಗಳಿಂದ ಅನುಭವಕ್ಕೆ ತಂದು ಕೊಳ್ಳಬೇಕು ಎಂದು ಗುರುಗಳು ಹೇಳಬೇಕೆಂದು ಅರ್ಥವೆಂದು ಹೇಳುತ್ತಾರೆ.

पुण्डरीकमल्पं तदनुविधायितत्स्थमन्तःकरणं पुण्डरीकाकाशं परिच्छिन्नं । तस्मिन्नृविशुद्धे संहृतकरणानां योगिनां स्वच्छइवोदके प्रतिबिम्बरूपमादर्शइव च शुद्धेस्वच्छं विज्ञानज्योतिःस्वरूपावभासं तावन्मात्रं ब्रह्मोपलभ्यत इति दहरोऽस्मिन्नन्तर आकाशइत्यवोचाम अन्तःकरणोपाधिनिमित्तं। स्वतस्तुयावान्वै प्रसिद्धः परिमाणतोऽयमाकाशः भौतिकः तावानेषोऽन्तर्हृदयाकाशः यस्मिन्नन्वेष्टव्यं विजिज्ञासितव्यञ्चावोचाम नाप्याकाशतुल्यपरिमाणत्वमभिप्रेत्यतावानित्युच्यते । किन्तर्हि? ब्रह्मणोनुरूपस्य दृष्टान्तान्तरस्या भावात् । × । किञ्चउभे अस्मिन् द्यावापृथिवी ब्रह्माकाशे बुध्युपाधिविशिष्टेऽन्तरेवसमाहिते सम्यगाहितेस्थिते । तथाउभावग्निश्च वायुश्चेत्यादिसमानं । यच्चास्य आत्मन आत्मीयत्वेन देहवतोऽस्ति विद्यत इहलोके तथायच्चात्मीयत्वेन नविद्यते नष्टं भविष्यच्च नास्तीत्युच्यते नत्वत्यन्तमेवासत् तस्यहृद्याकाशे समाधानानुपत्तेः ॥ शं ॥

(ಮೇಲೆ ಹೇಳಿದ) ಪುಂಡರೀಕವು ಅಲ್ಪವಾದದ್ದು. ಅದಕ್ಕನುಸಾರಿಯಾಗಿ ಅದರೊಳಗಿರುವ ಅಂತಃಕರಣರೂಪವಾದ ಪುಂಡರೀಕಾಕಾಶವು ಪರಿಚ್ಛಿನ್ನವಾದದ್ದೇ. (ಪರಂತು) ಪರಿಶುದ್ಧವಾದ ಆ ಆಕಾಶದಲ್ಲಿ ಇಂದ್ರಿಯಗಳನ್ನು ಜಯಿಸಿದ ಯೋಗಿಗಳಿಗೆ, ಸ್ವಚ್ಛ ಜಲದಲ್ಲಿ (ಅಥವಾ) ನಿರ್ಮಲವಾದ ಕನ್ನಡಿಯಲ್ಲಿ ಪ್ರತಿಬಿಂಬ ರೂಪ ಹೇಗೆ ತೋರುತ್ತದೋ ಹಾಗೆ, ಸ್ವಚ್ಛವಾದ ವಿಜ್ಞಾನಜ್ಯೋತಿಸ್ವರೂಪ ಪ್ರಕಾಶರೂಪವಾದ ಬ್ರಹ್ಮವು ಅಷ್ಟೇ ಗೋಚರವಾಗುವದರಿಂದ "ಅದರೊಳಗಿರುವ ಆಕಾಶವು ಅಲ್ಪವಾದದ್ದೆಂದು" ನಾವು (ಗುರುಗಳು) ಹೇಳಿದೆವು. ಹೀಗೆ ಹೇಳಿದ್ದು ಅಂತಃಕರಣರೂಪವಾದ ಉಪಾಧಿಯ ಹೇತುವಿನಿಂದಾಗಿರುತ್ತದೆ. ಸ್ವತಃ ಯಾವ ಆಕಾಶದಲ್ಲಿರುವದನ್ನು ಅನ್ವೇಷಣ ಮಾಡಬೇಕು, ಮತ್ತು ಕಂಡುಕೊಳ್ಳಲಿಕ್ಕೆ ಇಚ್ಛಿಸಬೇಕೆಂದು ನಾವು ಹೇಳಿದೆವೋ, ಆ ಹೃದಯದೊಳಗಿರುವ ಆಕಾಶವು ಈ ಪ್ರಸಿದ್ಧವಾದ (ಹೊರಗಿರುವ) ಭೌತಿಕಾಕಾಶ ಎಷ್ಟು ವಿಸ್ತಾರವಾದದ್ದೋ ಅಷ್ಟು ವಿಸ್ತಾರವಾದದ್ದು. ಇದು ಹೊರತು, ಭೂತಾಕಾಶದ ಪರಿಮಾಣಕ್ಕೆ ಸರಿಯಾದಷ್ಟೇ ಪರಿಮಾಣ ಉಳ್ಳದೆಂಬ ಅಭಿಪ್ರಾಯದಿಂದ ಆ ಆಕಾಶವು ಅಷ್ಟು ಪರಿಮಾಣಉಳ್ಳದ್ದೆಂದು ನಾವು ಹೇಳಿದ್ದಲ್ಲ. ಹಾಗಾದರೆ ಹಾಗೆ ಏಕೆ ಹೇಳಿದ್ದು? ಏಕಂದರೆ ಬ್ರಹ್ಮಕ್ಕೆ ಸರಿಯಾದ ಬೇರೆ ದೃಷ್ಟಾಂತ ಇಲ್ಲದೇ ಇರುವ ಪ್ರಯುಕ್ತ (ಆಗಿರುತ್ತದೆ). ಮತ್ತು ಬುಧ್ಯುಪಾಧಿ ವಿಶಿಷ್ಟವಾದ ಈ ಬ್ರಹ್ಮಾಕಾಶದೊಳಗೆ ದ್ಯುಲೋಕ (ಸ್ವರ್ಗಲೋಕ) ಪೃಥ್ವಿ ಇವೆರಡೂ ಇವೆ. ಹಾ

ಗೆಯೇ ಅಗ್ನಿವಾಯು ಮೊದಲಾದವುಗಳು ಸಹ ಇವೆ. ಮತ್ತು ಈ ದೇಹವಿಶಿಷ್ಟನಾದ ಆತ್ಮಗೆ ಈ ಲೋಕದಲ್ಲಿ ತನ್ನದಾಗಿ ಏನು ಇದೆಯೋ ಹಾಗೆಯೇ ತನ್ನದಾಗಿ ಏನು ಇಲ್ಲವೋ, ಎಂದರೆ ಯಾವದು ನಷ್ಟವಾಗಿ ಹೋದ ಕಾರಣ ಅಥವಾ ಇನ್ನು ಮುಂದೆ ಉಂಟಾಗುವ ಕಾರಣ ಇಲ್ಲವೆಂದು ಹೇಳುವಹಾಗುತ್ತದೋ, (ಅತ್ಯಂತ ಶೂನ್ಯವಾದದ್ದಲ್ಲ. ಯಾಕಂದರೆ ಅಂಥಾದ್ದು ಹೃದಯದಲ್ಲಿರುವ ಆಕಾಶದಲ್ಲಿರಲಿಕ್ಕೆ ಕಾರಣವಿಲ್ಲ.) ಅದೆಲ್ಲ (ಅಲ್ಲಿ ಇದೆ) ಎಂದು ಶಂಕರಾಚಾರ್ಯರು ವಿವರಿಸುತ್ತಾರೆ.

हृदयपुण्डरीकमध्यवर्ती आकाशशब्द निर्दिष्टः भूताकाशवद्विपुलः। द्यावापृथिव्यादिशब्दलक्षितं भोग्यभोगस्थानभोगोपकरणमग्निसूर्यादिशब्दलक्षितो भोक्तृवर्गश्च तदाश्रितइत्यर्थः। अस्योपासकस्येहलोके यत् भोग्यजातमस्ति यच्चमनोरथमात्रगोचरमिह नास्ति सर्वंतत् भोग्यजातं अस्मिन् दहराकाशे समाहितामित्यर्थः। दहराकाशो निरतिशयभोग्य इतियावत् ॥ ९ ॥

ಹೃದಯಪುಂಡರೀಕ ಮಧ್ಯದಲ್ಲಿರುವ ಆಕಾಶ ಶಬ್ದದಿಂದ ಹೇಳಲ್ಪಡುವ ವಸ್ತು ಭೂತಾಕಾಶದಂತೆಯೇ ವಿಸ್ತಾರವಾದದ್ದು ದ್ಯು (ಸ್ವರ್ಗ) ಪೃಥ್ವಿ ಮೊದಲಾದ ಶಬ್ದಗಳಿಂದ ಸೂಚಿತವಾದ ಭೋಗ್ಯ, ಭೋಗಸ್ಥಾನ, ಭೋಗೋಪಕರಣ, (ರೂಪಗಳಾದ ಜಡಪದಾರ್ಥಗಳು) ಮತ್ತು ಅಗ್ನಿ ಸೂರ್ಯಾದಿ ಶಬ್ದಗಳಿಂದ ಸೂಚಿಸಲ್ಪಡುವ ಭೋಕ್ತೃವರ್ಗ (ಚೇತನಗಳು) ಸಹ ಅದನ್ನು ಆಶ್ರಯಿಸಿಕೊಂಡು ಇವೆ ಎಂದು ಅರ್ಥ. ಈ ಉಪಾಸಕಗೆ ಯಾವದು ಭೋಗಿಸಲಿಕ್ಕೆ ಶಕ್ಯ ತರಹದ್ದಾಗಿ ಈ ಲೋಕದಲ್ಲಿ ಸಿದ್ಧವಾಗಿ ಇದೆಯೋ ಯಾವದು, ಇವನ ಇಚ್ಛೆಗೆ ಮಾತ್ರ ಗೋಚರವಲ್ಲದೆ ಇಲ್ಲಿ ಇಲ್ಲವೋ ಆ ಎಲ್ಲಾ ಭೋಗ್ಯ ವಸ್ತುಗಳು ಈ ದಹರಾಕಾಶದಲ್ಲಿರುತ್ತವೆಂದು ಅರ್ಥ. (ಆದ್ದರಿಂದ) ದಹರಾಕಾಶಕ್ಕಿಂತಲೂ ಅತಿಶಯವಾದ ಭೋಗ್ಯವಸ್ತು ಬೇರೆ ಯಾವದೂ ಇಲ್ಲ ಎಂದು ಇಷ್ಟೇ ತಾತ್ಪರ್ಯ ಎಂಬದಾಗಿ ರಾಮಾನುಜಾಚಾರ್ಯರು ವಿವರಿಸುತ್ತಾರೆ.

अन्तर्हृदये हृद्ययत इति हृदयशब्दोक्ते पुण्डरीकवेश्मस्थदहराकाशोऽन्तः आकाशः। आसमन्तात्काशते दीप्यत इतिवा आसमन्तात् कंसुखमश्नात्यनुभवतीतिवा—आसमन्तात्कान् कामान् शुभभोग्यान् अश्नातीति

"ಹೃದ್ಯಯಂ" (೯) ಎಂಬ ಪ್ರಮಾಣರೀತ್ಯಾ ಹೃದಯಶಬ್ದದಿಂದ ಕರೆಯಲ್ಪಡುವ ಪುಂಡರೀಕರೂಪವಾದ ಮನೆಯಲ್ಲಿರುವ ಅಲ್ಪಾಕಾಶದೊಳಗಿರುವ (ತೀರಾ ಪ್ರಕಾಶಿಸುತಲಿದ್ದಾನೆ, ಅಥವಾ ಸರ್ವತ್ರ ಸು

वा—आकाशनामा हरिर्वर्तत इति । × । अयंबाह्य: बहिर्विद्यमान: आकाशनामाहरिर्यावान् देशकालगुणैर्यावद्व्याप्तिमान् तावानेवहृत्पुण्डरीकस्थाकाशगतो हरिरिति । × । अत्रद्यावापृथिव्यादिशब्देन तदभिमानिग्रह: उभेइत्युक्तिर्मुक्तामुक्तरूपवर्गद्वयग्रहणाय । तदेवविशदमाह यच्चान्येहास्तीति । अस्यसंसारिण: उपकारित्वेनेह यदुक्तं द्यावाभूम्यादिकं यच्चास्यसंसारिणोऽनुपकारित्वेन नास्य विद्यमानमिवोच्यते । मुक्तद्यावापृथिव्यादिकामिति यावत् तदपि अत्रपुण्डरीकस्थाकाशगते हरौ समाहितं वर्तत इति सब्रूयादिति पूर्वेणान्वय: ॥ रा ॥

अस्य संसारिण: उपकारकतयायच्चास्ति । अमुक्तजातमितियावत् । यच्चनास्ति उपकारितयामुक्तजातमिति यावत् ॥ वे ॥

ಖವನ್ನನುಭವಿಸುತ್ತಾನೆ; ಅಲ್ಲವಾದರೆ ತೀರಾ ಶುಭಭೋಗ್ಯಗಳಾದಂಥಾ ವಿಷಯಗಳನ್ನು ಅನುಭವಿಸುತ್ತಾನೆ ಎಂಬ ನಿರ್ವಚನರಿತ್ಯಾ) ಆಕಾಶನೆಂದು ಕರೆಯಲ್ಪಡುವ ಹರಿಯು ಹೃದಯದೊಳಗೆ ವಾಸವಾಗಿರುತ್ತಾನೆ. ಈ ಹೊರಗಿರುವ ಆಕಾಶನೆಂಬ ಹರಿಯು, ದೇಶ ಕಾಲ, ಗುಣಗಳ ವಿಷಯದಲ್ಲಿ ಎಷ್ಟರಮಟ್ಟಿಗೆ ವ್ಯಾಪ್ತಿ ಉಳ್ಳವನೋ, ಹೃತ್ಪುಂಡರೀಕದಲ್ಲಿರುವ ಆಕಾಶದಲ್ಲಿ ವಿದ್ಯಮಾನನಾದ ಹರಿಯು ಅಷ್ಟು ವ್ಯಾಪ್ತಿ ಉಳ್ಳವನು. ಇಲ್ಲಿ ದ್ಯಾವಾ ಪೃಥಿವ್ಯಾದಿ ಶಬ್ದಗಳಿಂದ ಅವುಗಳ ಅಭಿಮಾನಿಗಳನ್ನು ಗ್ರಹಣಮಾಡಬೇಕು. "ಎರಡೂ" ಎಂದು ಹೇಳಿದ್ದು ಮುಕ್ತಿಯನ್ನು ಪಡದಂಥಾ ಮತ್ತು ಮುಕ್ತಿಯನ್ನು ಪಡೆಯದೆ ಇರುವಂಥಾ ಈ ಎರಡು ವರ್ಗಗಳನ್ನು ಗ್ರಹಣಮಾಡುವ ಬಗ್ಗೆ ಆಗಿರುತ್ತದೆ. "ಬೇರೆ ಯಾವದು ಇಲ್ಲಿ ಇದೆಯೋ" ಎಂಬ ವಾಕ್ಯದಿಂದ ಆ ಸಂಗತಿಯನ್ನೇ ಸ್ಪಷ್ಟವಾಗಿ ಹೇಳೋಣಾಗುತ್ತದೆ. ಈ ಸಂಸಾರಿಗೆ ಉಪಕಾರಿಯಾಗಿ ಯಾವ (ಈಗ) ಹೇಳಿದ ದ್ಯಾವಾ ಪೃಥಿವ್ಯಾದಿಗಳು ಇವೆಯೋ (ಎಂದರೆ ಮುಕ್ತಿಯನ್ನು ಪಡಿಯದೇ ಇದ್ದಂಥವುಗಳು, ಎಂದು ಇಷ್ಟೇ) ಮತ್ತು ಈ ಸಂಸಾರಿಗೆ ಉಪಕಾರಕ್ಕೆ ಬೀಳದೆ ಇರುವ ಕಾರಣ ಇಲ್ಲದ ಹಾಗೆಯೇ ಎಂದು ಹೇಳೋಣಾಗುತ್ತದೋ (ಎಂದರೆ ಮುಕ್ತಿಯನ್ನು ಪಡದಂಥಾದ್ದೆಂದು ಇಷ್ಟೇ) ಅದೆಲ್ಲ ಈ ಪುಂಡರೀಕದಲ್ಲಿರುವ ಆಕಾಶದಲ್ಲಿ ವಿದ್ಯಮಾನನಾದ ಹರಿಯಲ್ಲಿ ಇರುತ್ತವೆಂದು (ಶಿಷ್ಯರಿಗೆ ಆಚಾರ್ಯರು) ಉತ್ತರ ಹೇಳಬೇಕೆಂದು ಅನ್ವಯವೆಂದು ಮಾಧ್ವರು ಹೇಳುತ್ತಾರೆ.

## ೫ನೇ ಶ್ರುತಿಯ ಕುರಿತು.

अस्यदेहस्य जरयैतत् यथोक्तमन्तरा
काशाख्यं ब्रह्म, यस्मिन्सर्वं समाहितं नजी
र्यति । देहवन्नविक्रियतइत्यर्थः । न चास्य
धेनशस्त्रादिघाते नैतद्धन्यते । × । एतत्सत्यं
अवितथं ब्रह्मपुरं । ब्रह्मैवपुरं ब्रह्मपुरं । शरी
राख्यन्तु ब्रह्मपुरं ब्रह्मोपलक्षणार्थत्वात् तत्व
नृतमेव । × । अतोऽस्मिन् पुण्डरीकोपल
क्षिते ब्रह्मपुरे सर्वेकामाः येबहिर्भवद्भिःप्रार्थ्य
न्ते तेऽस्मिन्नेव स्वात्मनिसमाहिताः । × ।
एषआत्मा भवतां स्वरूपं । श्रुणुत तस्य लक्ष
णं अपहतपाप्मा अपहतःपाप्मा धर्माधर्मा
ख्यो यस्यसो यमपहतपाप्मा तथा । विजरः
विगतजरः । विमृत्युश्च तदुक्तं पूर्वमेव नवधे
नास्य हन्यतइति । विशोकः विगतशोकः ।
शोकोनाम इष्टादिवियोगनिमित्तो मनसः स
न्तापः । विजिघत्सः विगताशनेच्छः ।×।
अपिपासः । अपानेच्छः । सत्यकामः सत्याः
अवितथाः कामायस्य सोऽयं सत्यकामः। वि
तथाहि संसारिणां कामाः ईश्वरस्तु तद्विपरी
तः । तथाकामहेतवः सङ्कल्पा अपिसत्यायस्य
स सत्यसङ्कल्पः । सङ्कल्पाः कामाश्च शुद्धसत्वो
पाधिनिमित्ता ईश्वरस्य । चित्रगुवत् न स्व
तः ॥ शं ॥

ಈ ದೇಹದ ಮುಪ್ಪಿನಿಂದ ಯಾವದರ
ಲ್ಲಿ ಸಕಲವೂ ಅಡಗಿದೆಯೋ ಆ ಅಂತರಾ
ಕಾಶವೆಂಬ ಮೇಲೆ ಹೇಳಿದ ಬ್ರಹ್ಮವು ಮು
ದಿಯಾಗುವದಿಲ್ಲ. (ಎಂದರೆ) ದೇಹದಂತೆ
ವಿಕಾರವಾಗುವದಿಲ್ಲ. ಮತ್ತು ಶಸ್ತ್ರಾದಿ
ಗಳ ಪೆಟ್ಟಿನಿಂದ ದೇಹಕ್ಕೆ ಸಂಭವಿಸುವ ಹಿಂ
ಸೆಯಿಂದ ಇದಕ್ಕೆ ಹಿಂಸೆಯಾಗುವದಿಲ್ಲ.
ಇದು ಸತ್ಯವಾದ ಎಂದರೆ ಸುಳ್ಳಲ್ಲದ ಬ್ರ
ಹ್ಮಪಟ್ಟಣವಾಗಿರುತ್ತದೆ. ಬ್ರಹ್ಮವೇ ಪ
ಟ್ಟಣ (ಆದ್ದರಿಂದ) ಬ್ರಹ್ಮಪಟ್ಟಣ (ಎಂದು
ಹೇಳುವದು) ಪರಂತು ಶರೀರಕ್ಕೆ ಬ್ರಹ್ಮಪು
ರ (ಬ್ರಹ್ಮದ ಪಟ್ಟಣ) ಎಂದು ಹೇಳಿದ್ದು
ಬ್ರಹ್ಮದ ಉಪಲಕ್ಷಣ(ಸೂಚನ)ಕ್ಕೋಸ್ಕೆ
ರವಾಗಿರುವದರಿಂದ ಅದು (ಶರೀರ) ಮಿ
ಥ್ಯವಾದದ್ದೇ. ಆದಕಾರಣ ಈ ಪುಂಡರೀ
ಕೋಪಲಕ್ಷಿತವಾದ ಬ್ರಹ್ಮಪಟ್ಟಣದಲ್ಲಿ (ಬ್ರ
ಹ್ಮದಲ್ಲಿ)ಹೊರಗೆ ನೀವು (ಶಿಷ್ಯರು)ಪಡೆಯು
ಲಿಕ್ಕೆ ಇಚ್ಛಿಸುವಂಥಾ ಯಾವ ಅಭಿಲಾಶೆ
ಗಳು ಇವೆಯೋ ಆ ಅಭಿಲಾಶೆಗಳು (ಆ
ವಸ್ತುಗಳು) ಈ ನಿಮ್ಮ ಆತ್ಮನಲ್ಲಿಯೇ ಇ
ರುತ್ತವೆ. ಈ ಆತ್ಮನು ನಿಮ್ಮ ಸ್ವರೂಪ
ವಾಗಿರುತ್ತಾನೆ. (ಈಗ ಅವನ ಲಕ್ಷಣಗ
ಳನ್ನು ಹೇಳುತ್ತೇವೆ ಕೇಳಿರಿ.) ಅವನು
ಧರ್ಮಾಧರ್ಮ ದೋಷ ಇಲ್ಲದವನು, ಮುದಿತನ ಇಲ್ಲದವನು; ಮತ್ತು ಮರಣವಿ

ಹೀನನಾದವನು. ಈ ಸಂಗತಿಈ ದೇಹದ ಸಾವಿನಿಂದ ಸಾಯುದವನೆಂಬದರ ಮೂಲವಾಗಿ ಈ ಮೊದಲೇ ಹೇಳಲಾಗಿ ಇದೆ. ಶೋಕ ಇಲ್ಲದವನು—ಶೋಕವೆಂದರೆ ಇಷ್ಟಾದಿವಿಯೋಗದಿಂದ ಉಂಟಾಗುವ ಮನಸ್ಸಿನ ವ್ಯಥೆ. ಹಸಿವೆ (ಉಣ್ಣುವ ಇಚ್ಛೆ) ಇಲ್ಲದವನು, ತೃಷೆ (ಕುಡಿಯಬೇಕೆಂಬ ಇಚ್ಛೆ) ಇಲ್ಲದವನು, ಸತ್ಯಕಾಮ—ಎಂದರೆ ಯಾರ ಅಭಿಲಾಶೆಯು ಮಿಥ್ಯವಲ್ಲವೋ (ಸುಳ್ಳಲ್ಲವೋ) ಅಂಥವನು, ಸಂಸಾರಿಯ ಅಭಿಲಾಶೆಗಳು ನಿಜವಾದವುಗಳಲ್ಲ. ಈಶ್ವರನು ಹಾಗಲ್ಲದವನು, ಸತ್ಯಸಂಕಲ್ಪನು—ಎಂದರೆ ಕಾಮದಂತೆಯೇ ಅದಕ್ಕೆ ಕಾರಣವಾದ ಸಂಕಲ್ಪ (ನಿರ್ಣಯ)ಗಳು ಕೂಡಾ ಸತ್ಯವಾದವುಗಳೇ ಆಗಿ ಉಳ್ಳವನು. ಈ ಕಾಮ ಮತ್ತು ಸಂಕಲ್ಪಗಳು ಮಾಲೀಕನಾದ (ದೇವದತ್ತಗೆ) ಚಿತ್ರಗು (ನಾನಾ ವರ್ಣಗಳುಳ್ಳ ಗೋಪಾಲ) ಎಂಬದು ಹೇಗೆ ವಿಶೇಷಣವೋ ಹಾಗೆಯೇ ಈಶ್ವರನ ಸಂಕಲ್ಪಗಳು, ಕಾಮಗಳು ಸಹ ಶುದ್ಧ ಸತ್ವಗುಣರೂಪ ಉಪಾಧಿನಿಮಿತ್ತವಾದವುಗಳಲ್ಲದೆ ಅವನ ಸ್ವಂತವಾದವುಗಳಲ್ಲ ಎಂದು ಶಂಕರಾಚಾರ್ಯರು;

भोग्यभोगस्थान भोगोपकरण भोक्तृवर्गादि शालितयापुरमिव वर्तमानमेत द्दहराकाशाख्यं ब्रह्म । नतुघटादिवत् केवलमवकाशात्मनोपकारकं । यथापुरं भोग्य भोगोपकरण भोगस्थानादीनां स्वतएवाधार भूतं नतुदध्यादीनां घटाकाशादिवदाकाशात्मनोपकारकं तथेत्यर्थः । सत्यं निर्विकार मित्यर्थः अतएव नदेहजरामरणानुविधायि जरामरणकमित्यर्थः । यद्वा । × चेतनाचेतन नियामकत्वं वासत्यत्वं । यथाकथञ्चित् घटाकाशादिविलक्षणाधार इत्यर्थः । × । काम्यन्त इतिकामाः कल्याणगुणाः । × । कोदहराकाशः सचकैः कामैर्विशिष्ट इत्याकांक्षायामाह । × । पापजरामरणशोक बुभुक्षापिपासावर्जितः सत्यकामः सत्यसङ्कल्पश्च

ಈ ದಹರಾಕಾಶವೆಂಬ ಬ್ರಹ್ಮವು ಭೋಗ್ಯ, ಭೋಗಸ್ಥಾನ, ಭೋಗೋಪಕರಣ, ಭೋಕ್ತೃವರ್ಗ ಮೊದಲಾದವುಗಳುಳ್ಳ ಪಟ್ಟಣದಂತೆ ಇರುವದು ಅಲ್ಲದೆ ಘಟಾದಿಪಾತ್ರೆಗಳಂತೆ ಕೇವಲ ಅವಕಾಶಕೊಡುವ ಸ್ವಭಾವದಿಂದ ಉಪಕಾರ ಮಾಡುವಂಥಾದ್ದಲ್ಲ. (ಎಂದರೆ) ಹೇಗೆ ಒಂದು ಪಟ್ಟಣವು ಭೋಗ್ಯ ಭೋಗೋಪಕರಣ ಭೋಗಸ್ಥಾನ ಮೊದಲಾದವುಗಳಿಗೆ ಸ್ವತಃ ಆಧಾರಭೂತವಲ್ಲದೆ ಮೊಸರು ಇತ್ಯಾದಿಗಳಿಗೆ ಗಡಿಗೆ ಮೊದಲಾದ ಪಾತ್ರೆಗಳೊಳಗಿರುವ ಆಕಾಶದಂತೆ ಅವಕಾಶಕೊಡುವ ಸ್ವಭಾವ ಉಳ್ಳದ್ದಾಗಿ ಉಪಕಾರಕ್ಕೆ ಬೀಳುವಂಥಾದ್ದಲ್ಲ ಎಂದು ಅರ್ಥ. ಸತ್ಯವೆಂದರೆ ವಿಕಾರವಾಗದ್ದು; ಆದ್ದರಿಂದಲೇ

त्यर्थः । परमात्मप्रकरणेषु पापशब्दः सुकृत साधारणः । अपहतपाप्मत्वंच अनध्यस्तपाप्मत्वं । × । अश्लिष्टपाप्मत्वमित्यर्थः । × । अत्रसत्यकामशब्दो नकामनायाः सत्यत्वपरः । अमोघाशत्वस्य सत्यसङ्कल्पशब्देनैव सिद्धत्वात् । नापिकाम्यत इति व्युत्पत्यागुण मात्रपरः कतिपयगुणान्तराणां पृथगुक्तेः । अतो भोग्य भोगोपकरण भोगस्थानरूपाः नित्याः कामाः सन्तीत्युच्यते ॥ सत्यसंकल्पः अप्रतिहतसंकल्प इति ॥ रं ॥

ದೇಹದ ಜರಾಮರಣಗಳಿಗೆ ಅನುಸರಿಸಿ ಜರಾಮರಣಗಳಿಗೆ ಗುರಿಯಾದ್ದದ್ದಲ್ಲೆಂದು ಅರ್ಥ. ಅಥವಾ ಸತ್ಯತ್ವವೆಂದರೆ ಚೇತನಾಚೇತನಿಯಾಮಕತ್ವ. ಹ್ಯಾಗೂ ಘಟಾಕಾಶಾದಿಗಳಿಗೆ ವಿಲಕ್ಷಣವಾದ ಆಧಾರಭೂತವಾದ್ದೆಂದು ಅರ್ಥವಾಗಿರುತ್ತದೆ. ಕಾಮುಗಳು (ಅಭಿಲಾಶೆಗಳು) ಎಂದರೆ ಇಚ್ಛಿಸಲ್ಪಡುತ್ತದೆ ಎಂಬ ನಿರ್ವಚನ ಪ್ರಕಾರ ಕಲ್ಯಾಣಗುಣಗಳಾಗಿರುತ್ತವೆ. (ಈಗ) ದಹರಾಕಾಶವೆಂದರೆ ಯಾರು? ಮತ್ತು ಅವನು ಯಾವ ಗುಣಗಳುಳ್ಳವನು? ಎಂಬದನ್ನು ಹೇಳೋಣಾಗುತ್ತದೆ. (ಅವನು) ಪಾಪ, ಜರಾ, (ವ್ಯಾಧ್ಯಾದ್ಯ) ಮರಣ, ಶೋಕ, (ದುಃಖ) ಹಸಿವೆ, ತೃಷೆ ಇಲ್ಲದವನು, ಮತ್ತು ಸತ್ಯಕಾಮ, ಸತ್ಯಸಂಕಲ್ಪ ಕೂಡಾ (ಉಳ್ಳವನು) ಆಗಿರುತ್ತಾನೆ. ಪರಮಾತ್ಮವಿಷಯಿಕವಾದ ಪ್ರಕರಣಗಳಲ್ಲಿ ಪಾಪಶಬ್ದವು ಸುಕೃತ ಸಾಧಾರಣವಾಚಿಯಾಗಿರುತ್ತದೆ. ಅಪಹತಪಾಪ್ಮತ್ವ (ಪಾಪರಾಹಿತ್ಯ)ವು ಆರೋಪಿಸಲ್ಪಡದೆ ಇರುವ ಪಾಪ್ಮತ್ವವಾಗಿರುತ್ತದೆ; ಎಂದರೆ ಪಾಪ್ಮತ್ವ (ಕೆಟ್ಟತನ)ವು ಹತ್ತಿಕೊಳ್ಳದೆ ಇರೋಣ ಎಂದು ಅರ್ಥ. ಇಲ್ಲಿ ಸತ್ಯಕಾಮ ಶಬ್ದವು ಕಾಮನಾ (ಅಭಿಲಾಶೆ)ಕ್ಕೆ ಸತ್ಯತ್ವ ಹೇಳುವ ಉದ್ದಿಶ್ಯ ಉಳ್ಳದ್ದಲ್ಲ, ಯಾಕಂದರೆ (ಅವನ) ಆಶೆಯು ನಿಷ್ಫಲತ್ವ ಉಳ್ಳದ್ದಲ್ಲೆಂಬದು ಸತ್ಯಸಂಕಲ್ಪ ಶಬ್ದದಿಂದಲೇ ಸಿದ್ಧವಾಗುತ್ತದೆ; ಮತ್ತು ಇಚ್ಛಿಸಲ್ಪಡುತ್ತದೆ ಎಂಬ ನಿರ್ವಚನ ಪ್ರಕಾರ ಕಾಮಶಬ್ದವು ಕೇವಲ ಗುಣ ಮಾತ್ರವನ್ನು ಹೇಳುವದಿಲ್ಲ. ಯಾಕಂದರೆ ಅನೇಕ ಗುಣಗಳು ಕುರಿತಾಗಿ ಹೇಳೋಣಾಗಿವೆ. ಆದ್ದರಿಂದ ಭೋಗ್ಯ, ಭೋಗೋಪಕರಣ, ಭೋಗಸ್ಥಾನರೂಪಗಳಾದ ಶಾಶ್ವತವಾದ ಇಚ್ಛಾಪದಾರ್ಥಗಳು ಇವೆ. ಮತ್ತು ಸತ್ಯಸಂಕಲ್ಪನೆಂದರೆ ಪ್ರತಿಹತವಿಲ್ಲದ ಸಂಕಲ್ಪವುಳ್ಳವನು ಎಂದು ಅರ್ಥವೆಂದು ರಂಗರಾಮಾನುಜಾಚಾರ್ಯರು;

अस्य ब्रह्मपुरशब्दित देहस्य जरया एतत् ब्रह्मपुरशब्दितं ब्रह्म । × । न जीर्यति अस्य वधेनैतत् नहन्यते । एतत् ब्रह्मपुरं

ಬ್ರಹ್ಮಪುರವೆಂದು ಹೇಳಲ್ಪಡುವ ಈ ದೇಹದ ಮುಪ್ಪಿನಿಂದ ಬ್ರಹ್ಮಪುರವೆಂಬ ಬ್ರಹ್ಮವು ಮುದಿಯಾಗುವದಿಲ್ಲ. ಇದಕ್ಕೆ

कर्मधारयाश्रयेणोक्तं ब्रह्मपुराख्यं ब्रह्मसत्यं नित्यं । अतः सर्वाधारत्वं तस्य युक्तमिति भावेनोपलक्षणतयाह अस्मिन् कामाः समाहिताइति । नास्यजरयैतज्जीर्यतीत्युक्तं प्रपञ्चेनाह एषआत्मेत्यादिना । विजिघत्सः विगतबुभुक्षः ॥ रा ॥

एतत्ब्रह्मपुरं पूर्णं परंब्रह्म । × । काम्यन्तइति कामाः अस्मिन् समाहिताः पूर्णकामइतियावत् । × । एषहृत्पद्मस्थाकाशस्थः परमात्मानित्यमेव स्वतोऽपहतपाप्मा । । × । सत्यकामइति यदिष्टं तस्यतत्स्वतएव भवेदित्यर्थः । × । तथाचानादितएव ममपापादिकं माभूदितितदीय कामनयैवैषोऽपहतपाप्मत्वादिरितिभावः । × । सत्यसंकल्पः अमोघसंकल्पः ॥ वे ॥

(ದೇಹಕ್ಕೆ) ಪೆಟ್ಟುಕೊಟ್ಟರೆ ಇದಕ್ಕೆ (ಬ್ರಹ್ಮಕ್ಕೆ) ತಾಗುವದಿಲ್ಲ. ಬ್ರಹ್ಮವೇ ಪುರವೆಂಬ ಕರ್ಮಧಾರಯ ಸಮಾಸವನ್ನಾಶ್ರಯಿಸಿಕೊಂಡು ಹೇಳಿದಂಥಾ ಬ್ರಹ್ಮಪುರವೆಂದು ಕರೆಯಲ್ಪಡುವ ಬ್ರಹ್ಮವು ಪೂರ್ಣವಾದದ್ದು. ಪರಬ್ರಹ್ಮವೇ. ನಿತ್ಯವಾದದ್ದಾದ ಕಾರಣ ಸರ್ವಾಧಾರತ್ವವು ಇದಕ್ಕೆ ಕೂಡುತ್ತದೆಂಬ ಭಾವದಿಂದ ಇದರಲ್ಲಿ ಕಾಮಗಳು (ಬೇಕಾದವಸ್ತುಗಳು) ಇವೆ ಎಂದು ಸೂಚನಾರ್ಥವಾಗಿ ಹೇಳಲ್ಪಡುತ್ತದೆ. ಕಾಮಗಳು ಎಂದರೆ ಇಚ್ಛಿಸಲ್ಪಡುವಂಥವುಗಳು. ಅವು ಇದರಲ್ಲಿ ವಿದ್ಯಮಾನವಾಗಿವೆ. ಪೂರ್ಣ ಕಾಮವಾದದ್ದೆಂದು ಇಷ್ಟೇ (ಅಭಿಪ್ರಾಯ). ಇದರ (ಈ ದೇಹದ) ಮುಪ್ಪಿನಿಂದ ಇದು (ಈ ಬ್ರಹ್ಮ) ಮುದಿಯಾಗುವದಿಲ್ಲೆಂದು ಹೇಳಿದ ಹೇಳಿಕೆಯನ್ನು "ಇವನು ಆತ್ಮ" ವೊದಲಾದವನು ಎಂಬ ವಾಕ್ಯದಿಂದ ವಿವರಿಸಲ್ಪಡುತ್ತದೆ. ಈ ಹೃದಯಕಮಲದ ಆಕಾಶದಲ್ಲಿ ವಿದ್ಯಮಾನನಾದ ಪರಮಾತ್ಮನು ನಿತ್ಯನೇ. ಸ್ವತಃ ಪಾಪರಹಿತನಾದವನು. ಹಸಿವೆ ಇಲ್ಲದವನು. ಇವಗೆ ಇಷ್ಟವಾದದ್ದು ತನ್ನಂತೆಯೇ ಆಗುವ ಕಾರಣ ಸತ್ಯಕಾಮನು. ಈ ರೀತಿ ಅನಾದಿಕಾಲದಾರಭ್ಯ "ನನಗೆ ಪಾಪಾದಿಗಳು ಸಂಭವಿಸುವದು ಬೇಡ" ಎಂಬ ಇವನ ಅಪೇಕ್ಷೆ ಪ್ರಕಾರವೇ ಪಾಪಲೇಪರಾಹಿತ್ಯ ವೊದಲಾದ ಸ್ವಭಾವವುಳ್ಳವನೆಂದು ಭಾವವಾಗಿರುತ್ತದೆ. ಸತ್ಯಸಂಕಲ್ಪನೆಂದರೆ ವ್ಯರ್ಥವಾಗದ ಸಂಕಲ್ಪನೆಂದು ಮಾಧ್ವರು ಸಹ ಹೇಳುತ್ತಾರೆ.

(೨ನೇ) ಆ ಬ್ರಹ್ಮವನ್ನು ಮತ್ತು ಅದರ ಗುಣಗಳನ್ನು ನಾವು ಯಾಕೆ ತಿಳಿಯಬೇಕು? ಎಂಬದರ ಕುರಿತು—

यथोक्तलक्षणएवात्माविजयो गुरुभ्यः

ಸ್ವಾರಾಜ್ಯಕಾಮಿಗಳಾದವರು ಗುರು

शास्त्रतश्चात्मसंवेद्यतया स्वाराज्यकामैः । न
चेद्विज्ञायते कोदोषः स्यादिति श्रुणुतात्रदो
षं दृष्टान्तेन । यथाह्येवेहलोके प्रजा अन्वा
विशन्ति अनुवर्तन्ते यथानुशासनं । यथेह
प्रजा अन्यं स्वामिनं मन्यमानास्तस्य स्वा
मिनोयथा यथानुशासनं तथा तथान्वाविश
न्ति किं? यंयमन्तं प्रत्यन्तं जनपदं क्षेत्रभाग
ञ्चाभिकामाः अर्थिन्यो भवन्त्यात्मबुध्यनुरू
पंतंतमेवच प्रत्यन्तादिमुपजीवन्तीति ॥ एष
दृष्टान्तोऽस्वातन्त्र्यदोषंप्रति पुण्यफलोपभो
गे । तथाऽन्योदृष्टान्तः तत्क्षयंप्रति । तत्
तत्रेह लोके तासामेवस्वाम्यनुशासनानुवर्ति
नीनां प्रजानां सेवादिजितोलोकः पराधीनो
पभोगः क्षीयते अन्तवान् भवति । × । ए
वमेवामुत्राग्निहोत्रादि पुण्यजितो लोकः परा
धीनोपभोगः क्षीयत एवेति । × । तत् तत्रे
ह अस्मिन्लोके ज्ञानकर्मणोरधिकृतायोग्याः
सन्त आत्मानं यथोक्तलक्षणं शास्त्राचार्योप
दिष्टमननुविद्ययथोपदेशमनुस्वात्मसंवेद्यताम
कृत्वा व्रजन्ति देहादस्मात्प्रयन्ति येचएतां
श्च यथोक्तान् सत्यान् सत्यसंकल्पकार्यांश्च
स्वात्मस्थान् कामाननुविद्यव्रजन्ति तेषां
सर्वेषु लोकेष्वकामचारिता अस्वतन्त्रता
भवति । यथाराजानुशासनानुवर्तिनीनां प्र
जानामित्यर्थः । अथये अन्ये इहलोके आ
त्मानं शास्त्राचार्योपदिष्टं अनुविद्यस्वात्मसंवे
द्यतामापाद्यव्रजन्ति यथोक्तांश्च सत्यान् का

ಮುಖದಿಂದಲೂ, ಶಾಸ್ತ್ರದಿಂದಲೂ, ತಮ್ಮ
ಅನುಭವಕ್ಕೆ ತಂದುಕೊಂಡು ಆತ್ಮನು
(ಮೇಲೆ) ಹೇಳಿದ ಲಕ್ಷಣಗಳುಳ್ಳವನೆಂದು
ತಿಳಕೊಳ್ಳಬೇಕಾಗಿರುತ್ತದೆ. ಆ ಪ್ರಕಾ
ರ ತಿಳಕೊಳ್ಳದಿದ್ದ ಪಕ್ಷದಲ್ಲಿ ಏನು ದೋ
ಷ ಉಂಟಾಗುತ್ತದೆಂದರೆ ಆ ದೋಷವನ್ನು
ದೃಷ್ಟಾಂತಪುರಃಸರವಾಗಿ ಹೇಳುತ್ತೇವೆ
ಕೇಳಿರಿ. ಈ ಲೋಕದಲ್ಲಿ ಪ್ರಜೆಗಳು
ಅಪ್ಪಣೆಯಂತೆ ಹೇಗೆ ನಡದುಕೊಳ್ಳುತ್ತಾ
ರೋ (ಎಂದರೆ) ಈ ಲೋಕದಲ್ಲಿ ಇನ್ನೊ
ಬ್ಬನು ತಮಗೆ ಸ್ವಾಮಿಯೆಂದು ತಿಳಕೊ
ಳ್ಳುವ ಪ್ರಜೆಗಳು ಆ ಸ್ವಾಮಿಯ ಅಪ್ಪಣೆ
ಹೇಗೆ ಹೇಗೆ ಆಗುತ್ತದೋ ಅದರದರಂತೆ
ನಡದುಕೊಳ್ಳುತ್ತಾರೆ. ಅದು ಹೇಗಂದ
ರೆ—ತಮ್ಮ ತಮ್ಮ ಬುದ್ಧಿಗೆ ಅನುಸರಿಸಿ
ಯಾವ ಯಾವ ಪ್ರಾಂತ, ದೇಶ, (ಅಥವಾ)
ಸ್ಥಳವನ್ನಪೇಕ್ಷಿಸುತ್ತಾರೋ ಅದದನ್ನೇ
(ಪಡದು) ಆಶ್ರಯಿಸುತ್ತಾರೆ. ಈ ದೃ
ಷ್ಟಾಂತವು ಪುಣ್ಯ ಫಲಭೋಗದಲ್ಲಿ (ಸಂ
ಭವಿಸುವ) ಅಸ್ವಾತಂತ್ರ್ಯ ದೋಷದ
ವಿಷಯದಲ್ಲಿ ಆಗಿರುತ್ತದೆ. ಹಾಗೆಯೇ
ಮತ್ತೊಂದು ದೃಷ್ಟಾಂತವು ಆ ಭೋಗದ
ಕ್ಷಯದ ಕುರಿತು ಆಗಿರುತ್ತದೆ. ಅದೇ
ಸ್ವಾಮಿಯ ಅಪ್ಪಣೆಯಂತೆ ನಡೆದುಕೊ
ಳ್ಳುವ ಪ್ರಜೆಗಳಿಗೆ ಸೇವಾದಿಗಳಿಂದ ಸಂ
ಪಾದಿಸಿದ ಪರಾಧೀನೋಪಭೋಗವಾದ
ಲೋಕವು ಹೇಗೆ ತಪ್ಪಿ ಹೋಗುತ್ತದೋ

मान् तेषां सर्वेषु लोकेषु कामचारिता भवति राज्ञइवसार्वभौमस्येहलोके ॥ शं ॥

ಹಾಗೆಯೇ ಅಗ್ನಿಹೋತ್ರಾದಿ ಪುಣ್ಯಕರ್ಮಗಳಿಂದ ಸಂಪಾದಿಸಿದ ಪರಾಧೀನೋಪಭೋಗವಾದ ಪರಲೋಕವು ತಪ್ಪಿಯೇ ಹೋಗುತ್ತದೆ. (ಶಾಶ್ವತವಲ್ಲವಾದಕಾರಣ) ಅವರಲ್ಲಿ ಯಾರು ಈ ಲೋಕದಲ್ಲಿ ಜ್ಞಾನಕರ್ಮಗಳಿಗೆ ಅಧಿಕಾರಿಗಳಾಗಿ ಯೋಗ್ಯರಾಗಿದ್ದುಕೊಂಡು ಆತ್ಮನು (ಮೇಲೆ) ಹೇಳಿದ ಲಕ್ಷಣಗಳುಳ್ಳವನೆಂಬದನ್ನು ಶಾಸ್ತ್ರಾಚಾರ್ಯರುಗಳಿಂದ ಉಪದೇಶಿಸಲ್ಪಟ್ಟು ಆ ಉಪದೇಶದಂತೆ ತಮ್ಮ ಸ್ವಂತ ಅನುಭವಕ್ಕೆ ತಂದುಕೊಳ್ಳದೆ, ಮತ್ತು ಮೇಲೆ ಹೇಳಿದ ತಮ್ಮ ಆತ್ಮನಲ್ಲಿ ವಿದ್ಯಮಾನವಾಗಿರುವ ಸತ್ಯಸಂಕಲ್ಪಕಾರ್ಯಗಳಾದಂಥಾ ಕಾಮಗಳನ್ನು ತಿಳಿಯದೆ ಈ ದೇಹವನ್ನು ಬಿಟ್ಟು ಹೋಗುತ್ತಾರೋ ಅಂಥವರಿಗೆ ಸರ್ವ ಲೋಕಗಳಲ್ಲಿಯೂ ರಾಜನ ಅಪ್ಪಣೆಯನ್ನನುಸರಿಸುವ ಪ್ರಜೆಗಳಿಗೆ ಹೇಗೋ ಹಾಗೆಯೇ ಅಸ್ವಂತತ್ರತೆಯೇ ಸಂಭವಿಸುತ್ತದೆಂದು ಅರ್ಥ. ಪರಂತು ಈ ಲೋಕದಲ್ಲಿರುವಾಗ ಯಾರು ಶಾಸ್ತ್ರಾಚಾರ್ಯರುಗಳಿಂದ ಉಪದೇಶಿಸಲ್ಪಟ್ಟು ಆತ್ಮನನ್ನು (ಅವನಲ್ಲಿರುವ) ಮೇಲೆ ಹೇಳಿದ ಸತ್ಯಸಂಕಲ್ಪ ಕಾರ್ಯಗಳಾದ ಕಾಮಗಳನ್ನು ತಿಳಿದು ತಮ್ಮ ಸ್ವಂತ ಅನುಭವಕ್ಕೆ ತಂದುಕೊಂಡು ಹೋಗುತ್ತಾರೋ ಆ ಇತರರಿಗೆ ಈ ಲೋಕದಲ್ಲಿ ಸಾರ್ವಭೌಮನಾದ ರಾಜಗೆ ಹೇಗೋ ಹಾಗೆ ಸರ್ವಲೋಕಗಳಲ್ಲಿಯೂ ಕಾಮಚಾರಿತಾ (ಸ್ವಾತಂತ್ರ್ಯ) ಉಂಟಾಗುತ್ತದೆ ಎಂದು ಶಂಕರಾಚಾರ್ಯರು ಅರ್ಥ ಹೇಳುತ್ತಾರೆ.

इहास्मिन्लोके प्रजाः यथानुशासनं राजशासनानुल्लङ्घनेन राजानमन्वाविशन्ति अनुसरन्तीत्यर्थः । अनुसृत्यकिंकुर्वन्तीत्यत्राह । यंयमन्तं यद्यत्फलमभिकामाः अभ्यर्थिनो भवन्ति जनपदक्षेत्रादिकं वाकामायन्तेतत्तत्फलं यथाशासनमेवोपजीवन्ति राजशासनानुरोधेनैव इहलोके यथाउपजीवन्ति तथा परलोकेपि परतन्त्राएव भवन्तीतिभावः । यद्वायंयमन्तमभिकामाभवन्ति तं तमिहलोके यथाप्रजा अन्वाविशन्तिलभन्ते तथापर

ಈ ಲೋಕದಲ್ಲಿ ಪ್ರಜೆಗಳು ಅರಸಿನ ಅಪ್ಪಣೆಯನ್ನು ಮೀರದೆ ಅವನನ್ನು ಹೇಗೆ ಅನುಸರಿಸುತ್ತಾರೋ, ಅನುಸರಿಸಿ ಏನು ಮಾಡುತ್ತಾರೆಂದರೆ, ದೇಶವನ್ನಾಗಲೀ, ಸ್ಥಳ ಮೊದಲಾದದನ್ನಾಗಲೀ, ಯಾವ್ಯಾವ ಪ್ರಯೋಜನವನ್ನು ಇಚ್ಛಿಸುತ್ತಾರೋ ಅದದನ್ನು (ಪಡದು) ಅರಸಿನ ಅಪ್ಪಣೆಗೆ ಮೀರದೇನೆ ಈ ಲೋಕದಲ್ಲಿ ಹೇಗೆ ಹೊಟ್ಟೆ ಹೊರಕೊಂಡು ಇರುತ್ತಾರೋ, ಹಾಗೆಯೇ ಪರಲೋಕದಲ್ಲಿಯೂ ಪರಾಧೀನ

लोकेप्युपजीवन्तीत्यर्थः ॥ एवं कर्मसाध्येपर लोके पारतन्त्र्यमुक्त्वाक्षयिष्णुत्वमप्याह । राजसेवादिकर्मणाचितः अर्जितोलोकः यथाक्षीयते एवमेवामुत्रपरलोकेपि पुण्यचितः पुण्यसंपादितोलोकः क्षीयतइत्यर्थः । यत्सुक्ततसाध्येषु परलोकेषु पारतन्त्र्यक्षयिष्णुत्वादिकं तस्माद्येउक्तमात्मानं एतानपहतपाप्मत्वादीन् सत्यान् नित्यान् कामान् कल्याणगुणांश्चाननुविद्यअनुपास्यपरलोकं व्रजन्तितेषां सर्वेलोककामचाराभावः । पारतन्त्र्यमितियावत् । येत्वात्मानमपहतपाप्मत्वादींश्च काम्यमानान् कल्याणगुणानुपास्य परलोकं व्रजन्ति ते ब्रह्मविभूतिभूतान्विकारलोकाननुभूय यथाकामं तृप्ता नपारतन्त्र्यमनुभवन्तीत्यर्थः ॥ र ॥

ರೇ ಅಗುತ್ತಾರೆಂದು ಭಾವವಾಗಿರುತ್ತದೆ. ಅಥವಾ ಯಾವ್ಯಾವ ಫಲವನ್ನು ಇಚ್ಛಿಸುತ್ತಾರೋ ಅದದನ್ನೇ ಪ್ರಜೆಗಳು ಈ ಲೋಕದಲ್ಲಿ ಹೇಗೆ ಸಂಪಾದಿಸುತ್ತಾರೋ ಹಾಗೆಯೇ ಪರಲೋಕದಲ್ಲಿ ಕೂಡಾ (ಪಡದು) ಉಪಜೀವನಮಾಡುತ್ತಾರೆಂದು ಅರ್ಥ. ಈ ರೀತಿ (ಶ್ರುತಿಯು) ಕರ್ಮಸಾಧ್ಯವಾದ ಪರಲೋಕದಲ್ಲಿ ಅಸ್ವಾತಂತರ್ಯವನ್ನು ಹೇಳಿ (ಈಗ) ಅದಕ್ಕೆ ನಾಶವನ್ನೂ ಹೇಳುತ್ತದೆ. ರಾಜಸೇವೆ ಮೊದಲಾದ ಕರ್ಮದಿಂದ ಸಂಪಾದಿಸಿದ ಲೋಕವು ಹೇಗೆ ಕ್ಷಯಿಸುತ್ತದೋ ಅದೇ ರೀತಿ ಪರದಲ್ಲಿ ಕೂಡಾ ಪುಣ್ಯದಿಂದ ಸಂಪಾದಿಸಿದ ಲೋಕವು ಕ್ಷಯವಾಗುತ್ತದೆ. ಯಾವ ಕಾರಣದಿಂದ ಸುಕೃತಸಾಧ್ಯವಾದ ಪರಲೋಕಗಳಲ್ಲಿ ಪರಾಧೀನತೆ, ನಾಶ ಮೊದಲಾದವುಗಳು ಇವೆಯೋ, ಆ ಕಾರಣದಿಂದ ಯಾರು ಈ ಮೊದಲು ಹೇಳಿದ ಆತ್ಮ ಮತ್ತು ಅವನ ಈ ಅಪಹತ ಪಾಪ್ಮತ್ವಾದಿ ಸ್ವಭಾವವುಳ್ಳ ನಿತ್ಯವಾದ ಕಲ್ಯಾಣಗುಣಗಳನ್ನು ಉಪಾಸಿಸದೇ ಪರಲೋಕವನ್ನು ಕುರಿತು ಹೋಗುತ್ತಾರೋ ಅವರಿಗೆ ಎಲ್ಲಿಯೂ ಸ್ವಾತಂತ್ರ್ಯ ಇಲ್ಲದೇ ಹೋಗುತ್ತದೆ. ಪರಾಧೀನತೆ ಎಂದು ಇಷ್ಟೇ. ಪರಂತು ಯಾರು ಆತ್ಮನನ್ನು ಮತ್ತು (ಅವನ) ಅಪಹತಪಾಪ್ಮತ್ವ (ಪಾಪರಹಿತತ್ವ) ಮೊದಲಾದ ಆ ಕಾಂಕ್ಷಿಸಬೇಕಾದ ಕಲ್ಯಾಣಗುಣಗಳನ್ನು (ಸಹಾ) ಉಪಾಸನೆ ಮಾಡಿ ಪರಲೋಕವನ್ನು ಕುರಿತು ಹೋಗುತ್ತಾರೋ ಅಂಥವರು ಬ್ರಹ್ಮವಿಭೂತಿಭೂತವಾದ ವಿಕಾರಲೋಕಗಳನ್ನನುಭವಿಸಿ ಅವರ ಇಚ್ಛಾನುಸಾರ ತೃಪ್ತಿಪಡೆಯುತ್ತಾರಲ್ಲದೆ ಪರಾಧೀನತೆಯನ್ನನುಭವಿಸುವದಿಲ್ಲೆಂದು ಅರ್ಥವಾಗಿರುತ್ತದೆಂದು ರಾಮಾನುಜಾಚಾರ್ಯರು ಹೇಳುತ್ತಾರೆ.

तस्यमुक्ताश्रयत्वादि महिमान्तरञ्चाह

ಇನ್ನೇ ಶ್ರುತಿಯಲ್ಲಿ "ಹೇಗೆ ಇಲ್ಲಿ ಪ್ರಜೆ

यश्नाश्नीति । यथायथयोग्यमेव प्रजाः यथानुशासनं भगवदाज्ञानुसारेण प्रजाः इहमुक्तौ भगवतिवा अन्वाविशन्ति प्रविशन्ति । नकेवलं प्रवेशमात्रं । यंयमन्तं देशमभिकामाः प्रार्थीच्छवोभवन्तिमुक्ताः । यंयमन्तं इत्युक्तं व्यनक्तियंजनपदं यंक्षेत्रभागं क्षेत्रप्रदेशं तंतमेवोपजीवन्त्येतत्प्रसादादेवेत्यर्थः । उपलक्षणमिदं समस्तकामितभोगानेतत्प्रसादादुपजीवन्तीत्यर्थः ॥ रा ॥ याथायोग्यमेव तारतम्येनेति यावत् । × । प्रजाः सायुज्यभाजः ।×। ननुसत्यकामत्वं कथं भगवल्लक्षणं मुक्तानामपि सत्वात् इत्यतः पराधीनमेव सत्यकामत्वं तेषामित्याह यंयमिति ॥ वे ॥ दहराकाशस्थस्याक्षय्यफलहेतुज्ञानविषयत्वमाहात्म्यंच व्यतिरेकान्वयाभ्यामाहतद्यथेति । × । यथा इहलोकेकर्माचितः कर्मसंपादितो लोकोमहारामादिः क्षीयते एवमेवामुत्रपुण्याचितः यज्ञादिपुण्यसंपादितः स्वर्गादिलोकोऽमुत्रपरत्रक्षीयते । केषामित्यत आह तत् तत्रजनेषु येइह लोके आत्मानं भगवन्तं अननुविद्य अज्ञात्वा एतांश्च सत्यान् कामान् सत्यकामत्वादिप्रागुक्तात्मगुणांश्चाननुविद्य ये व्रजन्तितेषामिति पूर्वत्रोत्तरत्रचान्वेति ॥ अथेत्यर्थान्तरे ॥रा॥ कर्माजितो लोकोदेहादिः क्षीयते ॥ वे ॥

ಗಳು ಅಪ್ಪಣೆಯಂತೆ ನಡೆದುಕೊಳ್ಳುತ್ತಾರೋ" ಎಂದು ಹೇಳುವ ದೃಷ್ಟಾಂತದಿಂದ ಪ್ರಸ್ತುತ ಬ್ರಹ್ಮಪುರವೆಂದು ಹೇಳುವ ಬ್ರಹ್ಮ ಮುಕ್ತರಾದಂಥವರಿಗೆ ಆಶ್ರಯಭೂತವಾಗಿರುವ ಮುಂತಾದ ಅದರ ಇನ್ನೊಂದು ಮಹಿಮೆಯನ್ನು ಹೇಳೋಣಾಗುತ್ತದೆ. ಪ್ರಜೆಗಳು ಎಂದರೆ ಸಾಯುಜ್ಯಮುಕ್ತಿಯನ್ನು ಪಡೆಯಲಿಕ್ಕೆ ಅರ್ಹರಾದವರು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ತಾರತಮ್ಯ ಪ್ರಕಾರ ಎಂದು ಇಷ್ಟೆ ಅರ್ಥ. ಇಲ್ಲಿ (ಸಂಸಾರಿಗಳಾಗಿರುವಾಗ ಈ ಭೂಲೋಕದಲ್ಲಿ) ಆಗಲೀ, ಮುಕ್ತಿ (ಕಾಲದ)ಲ್ಲಿ ಭಗವಂತನಲ್ಲಿ ಆಗಲೀ, ಅವನ ಅಪ್ಪಣೆಯನ್ನು ಮೀರದೆ ಹೇಗೆ ಪ್ರವೇಶಮಾಡುತ್ತಾರೋ, ಅಷ್ಟುಮಾತ್ರವಲ್ಲ (ಆ ಸೈಕಿ) ಮುಕ್ತಿಯನ್ನು ಪಡೆದವರು ಯಾವ್ಯಾವ ದೇಶವನ್ನು ದೇಶವೆಂದರೆ ಊರನ್ನಾಗಲೀ ಯಾವದಾದರೂ ಒಂದು ಸ್ಥಳವನ್ನಾಗಲೀ ಪಡೆಯಲಿಕ್ಕೆ ಇಚ್ಛಿಸುತ್ತಾರೋ, ಅವನ ಪ್ರಸಾದದಿಂದ ಅದದನ್ನೇ (ಪಡದು) ಉಪಜೀವನ ಮಾಡುತ್ತಾರೆ. ಇದು ಉಪಲಕ್ಷಣ (ಮಾತ್ರ)ವಾಗಿರುತ್ತದೆ. (ತಮಗೆ) ಬೇಕಾದ ಸಕಲ ಭೋಗಗಳನ್ನೂ ಇವ (ಭಗವಂತ)ನ ಪ್ರಸಾದದಿಂದ ಭೋಗಿಸುತ್ತಾರೆಂದು ಅರ್ಥ. (ಈಗ) ಮುಕ್ತರಿಗೆ ಕೂಡಾ ಸತ್ಯಕಾಮತ್ವ (ಸತ್ಯವಾದ ಅಪೇಕ್ಷೆಯುಳ್ಳ ಸ್ವಭಾವ) ಲಕ್ಷಣ ಇರುವವರಿಂದ ಆ ಲಕ್ಷಣವು ಭಗವಂತಗೆ ಹೇಗೆ ಕೂಡುತ್ತದೆ? ಎಂದು ಆಕ್ಷೇಪಿಸಿದರೆ ಅದಕ್ಕೆ ಅವರ ಸತ್ಯಕಾಮತ್ವವು ಪರಾಧೀನವಾದದು

ಎಂದು ತೋರಿಸುವದಕ್ಕಾಗಿ ಯಾವ್ಯಾವ (ದೇಶವನ್ನು ಇಚ್ಛಿಸುತ್ತಾರೋ) ಎಂಬ ವಾಕ್ಯವು ಉತ್ತರವಾಗಿರುತ್ತದೆ ಎಂತಲೂ,

ದಹರಾಕಾಶದಲ್ಲಿರುವವನು ಅಕ್ಷಯವಾದ ಫಲಕ್ಕೆ ಕಾರಣವಾದ ಜ್ಞಾನಕ್ಕೆ ವಿಷಯನೆಂಬ ಮಹಾತ್ಮೆಯನ್ನು "ಅದು ಹೇಗೆಂದರೆ" ಎಂಬ ವಾಕ್ಯದಿಂದ (೬ನೇ ಶ್ರುತಿಯಲ್ಲಿ) ವ್ಯತಿರೇಕ ಮತ್ತು ಅನ್ವಯ ದೃಷ್ಟಾಂತಗಳಿಂದ ಹೇಳೋಣಾಗುತ್ತದೆ. ಈ ಲೋಕದಲ್ಲಿ ಕರ್ಮದಿಂದ ಸಂಪಾದಿಸಿದಂಥಾ ದೇಹ ಮೊದಲಾದವುಗಳು (ಮತ್ತು ಮನೆ ತೋಟ ಇತ್ಯಾದಿ ಹೇಗೆ ಕ್ಷಯವಾಗುತ್ತವೋ ಅದೇ ರೀತಿ ಪರದಲ್ಲಿ ಯಜ್ಞಾದಿ ಪುಣ್ಯಕರ್ಮಗಳಿಂದ ಸಂಪಾದಿಸಿದ ಸ್ವರ್ಗ ಮೊದಲಾದ ಲೋಕವು ಕ್ಷಯವಾಗುತ್ತದೆ. ಯಾರಿಗೆ ಎಂದರೆ ಜನಗಳಲ್ಲಿ ಯಾರು ಈ ಲೋಕದಲ್ಲಿ ಭಗವಂತನನ್ನು, ಮತ್ತು ಈ ಮೊದಲು ಹೇಳಿದ ಅವನ ಸತ್ಯಕಾಮತ್ವಾದಿ ಗುಣಗಳನ್ನು ಸಹ ತಿಳಿಯದೇ (ಮೃತಪಟ್ಟು) ಹೋಗುತ್ತಾರೋ ಅವರಿಗೆ (ಆಗಿರುತ್ತದೆ). ಈ ನ್ಯಾಯ ಪೂರ್ವೋತ್ತರ ಎರಡು ದೃಷ್ಟಾಂತಗಳಿಗೂ ಸಂಬಂಧಿಸುತ್ತದೆ. ಅನಂತರದ್ದು ಬೇರೆ ಅರ್ಥವನ್ನು ಹೇಳುತ್ತದೆ ಎಂತಲೂ ವ್ಯಾಖ್ಯಾನಮಾಡುತ್ತಾರೆ.

(೩) ಬ್ರಹ್ಮವು ಸುಷುಪ್ತಿಕಾಲದಲ್ಲಿ ನಮಗೆ ಗೋಚರವಾಗದೆ ಇರುವದಕೆಂಟಾದ ಕಾರಣಗಳು:—

यथोक्तात्मध्यानसाधनानुष्ठानं प्रति साधकानां उत्साहजननार्थं अनुक्रोशन्त्याह कष्टमिदं खलुवर्तते यत्स्वात्मस्थाः शक्यप्रापाअपि ते इमेसत्याः कामाअनृतापि धानाः। तेषां आत्मस्थानां स्वाश्रयाणामेवसतामनृतं बाह्यविषयेषु स्त्र्यन्नभोजनादिषु तृष्णातन्निमित्तश्चस्वेच्छाप्रचारत्वं । मिथ्याज्ञाननिमित्तत्वादनृत मित्युच्यते । तन्निमित्तं सत्यानां कामानां अप्राप्तिरित्यपिधानमिवापिधानं कथमनृतापिधाननिमित्तं तेषामलाभइतिउच्यते योयोहि यस्मादस्यजन्तोः पुत्रोभ्राता

(ಮೇಲೆ) ಹೇಳಿದಂತೆ ಆತ್ಮಧ್ಯಾನ ಸಾಧನೆಯನ್ನು ಆಚರಿಸುವ ವಿಷಯದಲ್ಲಿ ಪ್ರಯತ್ನಿಸುವಂಥವರಿಗೆ ಉತ್ಸಾಹ ಉಂಟುಮಾಡುವದಕ್ಕೋಸ್ಕರ ಕರುಣದಿಂದ ಶ್ರುತಿಯು ಹೇಳುವದೇನಂದರೆ:—ತನ್ನಲ್ಲಿಯೇ ಇದ್ದುಕೊಂಡು ದೊರೆಯುಲಿಕ್ಕೆ ಕೂಡುವಂಥವುಗಳಾಗರೂ, ಪ್ರಸ್ತುತ ಸತ್ಯಕಾಮಗಳು ಸುಳ್ಳಿನಿಂದ ಆಚ್ಛಾದಿಸಲ್ಪಟ್ಟಿವೆ. ಆ ಸುಳ್ಳು ಎಂಬದು ಸ್ತ್ರೀ ಅನ್ನಭೋಜನ ಮೊದಲಾದ ಬಾಹ್ಯವಿಷಯ ತೃಷ್ಣಾ (ಅಭಿಲಾಷೆ), ಮತ್ತು ಆ ಗೋಸ್ಕರ ಮನಸು

वाइष्ट इतः अस्माल्लोकात्प्रैति प्रगच्छति म्रिय
ते तं इष्टं पुत्रं भ्रातरंवास्वहृदयाकाशे विद्य
मानमपि इहपुनदर्शनायेच्छन्नपि न लभते ॥
अथपुनर्येचास्य विदुषोजन्तोर्जीवाःजीवन्तीह
पुत्राभ्रात्रादयः येचप्रेताः मृता इष्टाः सम्बंधि
नः यच्चान्यदिहलोके वस्त्रान्नपानादिवा वस्त्वि
च्छन्नलभते तत् सर्वं अत्रहृदयाकाशाख्ये ब्र
ह्मणिगत्वा यथोक्तेन विधिनाविन्दते लभते।
अत्र अस्मिन् दहराकाशेहि यस्मादस्यैते य
थोक्ताः सत्याः कामावर्तन्ते अनृतापिधानाः।
कथमिव तदन्यायमिति उच्यते तत् तत्र य
थाहिरण्यमेव पुनर्ग्रहणाय निधातृभिर्निधीय
त इतिनिधिः तं हिरण्यनिधिं निहितं भूमेर
धस्तान्निक्षिप्तमक्षेत्रज्ञाः निधिशास्त्रैर्निधिक्षेत्र
मजानन्तः ते निधेरुपर्युपरिसञ्चरन्तोपि नि
धिं नविन्देयुः शक्यवेदनमपि एवमेवइमाः अ
विद्यावत्यः सर्वाइमाः प्रजाः यथोक्तं हृदयाका
शाख्यं ब्रह्मलोकं ब्रह्मैवलोकः तमहरहः प्रत्यहं
गच्छन्त्योपि सुषुप्तकाले नविन्दन्ति न लभन्ते
एषोहं ब्रह्मलोकभावमापन्नोस्म्यद्येति । अ
नृतेनहि यथोक्तेनहि यस्मात्प्रत्यूढाः हृताः
स्वात्मस्वरूपात् अविद्यादिदोषैर्बहिरपकृष्टा
इत्यर्थः।अतः कष्टमिदं वर्तते जन्तूनां यत्स्वा
यत्तमपि ब्रह्मनलभ्यत इत्यभिप्रायः ॥ शं ॥

ಬಂದಂತೆ ನಡಿಯೋಣ ಇವುಗಳೆಂಗಿರುತ್ತ
ವೆ. ಇವು ಮಿಥ್ಯಾ ಜ್ಞಾನಮೂಲಕ
ವಾದವುಗಳಾದ್ದರಿಂದ, ಸುಳ್ಳು ಎಂದು ಹೇ
ಳಲ್ಪಡುತ್ತವೆ. ಅವುಗಳ ದೆಸೆಯಿಂದ ಸ
ತ್ಯವಾದ ಕಾಮಗಳು (ಇಚ್ಛಾಪದಾರ್ಥಗ
ಳು) ಲಾಭವಾಗುವದಿಲ್ಲವಾದ ಪ್ರಯುಕ್ತ
ಆಚ್ಛಾದನದಂತೆ ಮರೆಯಾಗಿರುತ್ತದೆ. ಈ
ಅನೃತಾಚ್ಛಾದನೆಯ ದೆಸೆಯಿಂದ ಆ ಕಾಮ
ಗಳು ಲಾಭವಾಗದೇ ಇರುವದು. ಅದರ
ರೀತಿ ಹೇಗೆಂದರೆ:—ಒಬ್ಬ ಮನುಷ್ಯಗೆ ಮ
ಗನಾಗಲಿ, ಸಹೋದರನಾಗಲಿ, ಇಷ್ಟನಾ
ಗಿರುವವನಾಗಲಿ ಈ ಲೋಕದಿಂದ ಮರಣ
ಪಟ್ಟು ಹೋದಂಥವನು ತನ್ನ ಹೃದಯಾ
ಕಾಶದಲ್ಲಿದ್ದರೂ, ಇಲ್ಲಿ ಅವನನ್ನು ಪುನಃ
ನೋಡಲಕ್ಕೆ ಇಚ್ಛಿಸಿದರೆ ಅವನು ದೊರೆ
ಯುವದಿಲ್ಲ. ಪರಂತು ಅದೇ ಒಬ್ಬ ವಿ
ದ್ವಾಂಸನಾದವಗೆ ಜೀವಂತರಾಗಿರುವ ಪುತ್ರ
ಭ್ರಾತ್ರಾದಿಗಳಾಗಲೀ, ಅಥವಾ ಮೃತರಾದ
ಇಷ್ಟರು ಅಥವಾ ಸಂಬಂಧಿಕರಾಗಲೀ,
ಅಥವಾ ಈ ಲೋಕದಲ್ಲಿ ವಸ್ತ್ರಾನ್ನಪಾ
ನಾದಿಗಳಾಗಲೀ, ಯಾವದು ಇಚ್ಛಿಸಿದರೆ
ದೊರೆಯುವದಿಲ್ಲವೋ ಅದೆಲ್ಲ ಹೇಳಿದ
ವಿಧಿ ಪ್ರಕಾರ ಅವನು ಹೃದಯಾಕಾಶಸಂ
ಬ ಬ್ರಹ್ಮದಲ್ಲಿ ಶೇರಿಕೊಂಡರೆ ಶಿಕ್ಕುತ್ತವೆ.
ಯಾಕಂದರೆ ಈ ದಹರಾಕಾಶದಲ್ಲಿ ಇವನ ಈಗ ಹೇಳಿದಂಥಾ ಸತ್ಯಕಾಮಗಳು ಸುಳ್ಳಿ
ನಂದ ಮುಚ್ಚಿಕೊಂಡಿರುತ್ತವೆ. (ಆ ಕಾಮಗಳು ತನ್ನ ಹೃದಯದಲ್ಲಿದ್ದರೂ ಶಿಕ್ಕದೆ
ಇರುವದು) ಹೇಗೆ ಅನ್ಯಾಯವೆಂಬದನ್ನು (ಈಗ) ಹೇಳೋಣಾಗುತ್ತದೆ. ಹಿರಣ್ಯಸ್ಥಾ

ಹನೆ ಮಾಡುವವರು ಪುನಹ (ಬೇಕಾದಾಗ) ಅದನ್ನು ತೆಗದುಕೊಳ್ಳುವ ತಾತ್ಪರ್ಯದಿಂದ ಭೂಮಿಯೊಳಗೆ ಸ್ಥಾಪಿಸಿದಂಥಾ ಹಿರಣ್ಯನಿಧಿ ಇರುವ ಸ್ಥಳವನ್ನು, ಅರಿಯದಂಥವರು ಆ ಸ್ಥಳದ ಮೇಲೆಯೇ ಪದೇ ಪದೇ ಸಂಚರಿಸುತ್ತಿದ್ದರೂ, ನಿಧಿಶಾಸ್ತ್ರ ಪ್ರಕಾರ ಅದನ್ನು ತಿಳಿಯಲಿಕ್ಕೆ ಸಾಧ್ಯವಿದ್ದರೂ, ಆ ನಿಧಿ ಉಂಟೆಂದು ಅದನ್ನು ಹೇಗೆ ತಿಳಿಯುವದಿಲ್ಲವೋ ಹಾಗೆಯೇ ವಿದ್ಯಾವಿಹೀನರಾದ ಸಕಲ ಪ್ರಜೆಗಳು ಪ್ರತಿದಿನವೂ ಸುಷುಪ್ತಿಕಾಲದಲ್ಲಿ ಈ ಮೊದಲು ಹೇಳಿನಂತೆ ಹೃದಯಾಕಾಶವೆಂಬ ಬ್ರಹ್ಮಲೋಕಕ್ಕೆ (ಬ್ರಹ್ಮವೇ ಬ್ರಹ್ಮಲೋಕ ಅಲ್ಲಿಗೆ) ಹೋದರೂ ಅದನ್ನು ಪಡಿಯುವದಿಲ್ಲ—ಎಂದರೆ “ನಾನು ಈಗ ಬ್ರಹ್ಮಲೋಕ (ಬ್ರಹ್ಮ) ಭಾವವನ್ನು ಪಡದಿದ್ದೇನೆ” ಎಂದು ತಿಳಿಯುವದಿಲ್ಲ. ಯಾಕೆಂದರೆ ಯಾವಕಾರಣದಿಂದ ಮೇಲೆ ಹೇಳಿದ ಅಜ್ಞಾನಾದಿ ದೋಷಗಳಿಂದ ತಮ್ಮ ಸ್ವರೂಪದಿಂದ ಹೊರಪಡಿಸಲ್ಪಟ್ಟಿರುತ್ತಾರೆಯೋ ಆ ಕಾರಣದಿಂದ ಜಂತುಗಳಿಗೆ ಬ್ರಹ್ಮವು ತಮ್ಮಲ್ಲಿಯೇ ಇದ್ದರೂ, ಶಿಕ್ಕದೆ ಇರುವದು ಕಷ್ಟವಾಗಿರುತ್ತದೆ ಎಂದು ಅಭಿಪ್ರಾಯವೆಂದು ಶಂಕರಾಚಾರ್ಯರು ವಿವರಿಸುತ್ತಾರೆ.

परमात्मनिष्ठाइमेसत्या अपहतपाप्मत्वादयः कामाः अनृतापिधानाः । × । अनृताच्छादिताः । ऋतेतरविषयोह्यनृतशब्दः । ऋतमिति कर्मवाचि । × । ऋतं, कर्मफलाभिसन्धिरहितं परमपुरुषाधनवेषं तत्प्राप्तिफलं । अत्रतद्व्यतिरिक्तफलं सांसारिकफलं कर्म । × । तेषां सत्यानां सतां विद्यमानानामेव कर्माच्छादकं । ततश्च स्वात्मभूतपरमात्मगता अपहतपाप्मत्वादयो धर्माः कर्मरूपाविद्यातिरोहितत्वान्नभासन्तइत्यर्थः । अस्यउपासकस्य योयोबन्धुवर्गः इतः प्रैतिनस इहद्रष्टुंशक्य इत्यर्थः । अस्यतुयेजीवन्तो नष्टाश्चबन्धवः अलभ्याश्च मनोरथाः तत्सर्वं दहराकाशं परमात्मानं प्राप्य लभते । × । य

(ಮೇಲೆ ಹೇಳಿದಂಥಾ) ಪರಮಾತ್ಮನಿಷ್ಟವಾದ ಈ ಸತ್ಯವಾದ ಅಪಹತಪಾಪ್ಮತ್ವಾದಿ ಕಾಮಗಳು (ಪಾಪರಹಿತತ್ವ ಮೊದಲಾದ ಬೇಕಾದ ಲಕ್ಷಣಗಳು) ಅನೃತದಿಂದ ಆಚ್ಛಾದಿಸಲ್ಪಟ್ಟಿವೆ. ಅನೃತವೆಂದರೆ ಋತಕ್ಕೆ ವಿರೋಧವಾದದ್ದು. ಋತ ಎಂದರೆ ಫಲದ ಉದ್ದೇಶವಿಲ್ಲದೆ ಮಾಡುವ ಪರಮ ಪುರುಷಾರಾಧನ ರೂಪವಾದಂಥಾ ಅವನನ್ನು ಪ್ರಾಪಿಸುವ ಫಲಉಳ್ಳ ಕರ್ಮ. ಇಲ್ಲಿ ಅದಕ್ಕೆ ವಿರೋಧವಾದ ಸಂಸಾರಕ್ಕೆ ಸಂಬಂಧಪಟ್ಟ ಫಲವುಳ್ಳ ಕರ್ಮ (ಎಂದು ಅರ್ಥ). ಆ ಪರಮಾತ್ಮನಲ್ಲಿ ವಿದ್ಯಮಾನವಾಗಿರುವ ಸತ್ಯವಾದ ಅಪಹತಪಾಪ್ಮತ್ವಾದಿ ಲಕ್ಷಣಗಳಿಗೆ ಕರ್ಮವು ಆಚ್ಛಾ

तदुपासकस्य काम्यमानाः भोग्यभूताः अप हतपाप्मत्वादय एतन्निष्ठाः पूर्वमनृतशब्दित कर्माच्छादिता इदानीं दहराकाशं प्राप्तस्या विर्भवन्ति। अतोनिरतिशयभोग्यत्वमित्यर्थः। हिशब्दोहेतुपरः । यथा अधस्तान्निक्षिप्तं हि रण्यनिधिं अक्षेत्रज्ञाः निधिमत्क्षेत्रस्वभाव विज्ञानहीनाः निधेरुपर्युपर्युपरि सञ्चरन्तो पि निधिं न लभन्ते एवमेवेमाः सर्वाः प्रजाः सुषुप्तिकाले अहरहर्गच्छन्त्यः । × । सुषुप्तौ अविभागं गच्छन्त्यः एतं दहराकाशाख्यं ब्र ह्मलोकं न विन्दन्ति न लभन्ते नजानन्ती त्यर्थः । × । अत्रहेतुमाह अनृतेनहि प्रत्यूढाः। प्रत्यूढाः प्रतीपंनीताः स्वभावान्तरं प्रापिताः आच्छादिता इतियावत् । यद्वा । अहरहर्ग च्छन्त्य इति न सुषुप्तिकालीनं गमनमुच्यते अपित्वन्तरात्मत्वेन सर्वदावर्तमानस्य दहरा काशस्य हिरण्यनिधिवत् परमपुरुषार्थभूत स्य उपर्युपर्यहरहर्गच्छन्त्यः सर्वस्मिन्काले व र्तमानास्तमजानन्त्यस्तं न विन्दन्ति न लभ न्तइत्यर्थः ॥ रं ॥

ದಕವಾಗಿ ಇದೆ. ಅದರಿಂದ ತನ್ನ ಆತ್ಮ ನಾದ ಪರಮಾತ್ಮನಲ್ಲಿರುವ ಅಪಹತ ಪಾ ಪ್ಮತ್ವ ಮೊದಲಾದ ಧರ್ಮಗಳು ಕರ್ಮರೂ ಪವಾದ ಅಜ್ಞಾನದಿಂದ ಮರೆಯಾಗಿರುವ ದರಿಂದ ತೋರುವದಿಲ್ಲ ಎಂದುಅರ್ಥ. ಈ ಉಪಾಸಕಗೆ ಬಂಧು ಆಗಿದ್ದವನು ಯಾರಾ ದರೂ ಇಲ್ಲಿಂದ ಮೃತಪಟ್ಟು ಹೋದರೆ ಇಲ್ಲಿ ಅವನನ್ನು ಕಾಣಕೂಡದು. ಪ ರಂತು ಈ ಉಪಾಸಕಗೆ ಬಂದುಗಳಾಗಿದ್ದ ವರಲ್ಲಿ ಬದುಕಿರುವವರಾಗಲೀ, ನಷ್ಟವಾದ ವರಾಗಲೀ, ಶಿಕ್ಕದೆ ಇರುವ ಮನೋರಥ ವಾಗಲೀ ಅದೆಲ್ಲ ದಹರಾಕಾಶವೆಂಬ ಪರ ಮಾತ್ಮನನ್ನು ಪ್ರಾಪಿಸಿ ಪಡೆಯುತ್ತಾನೆ. ಯಾವ ಕಾರಣದಿಂದ ಪೂರ್ವದಲ್ಲಿ ಅನೃತ ವೆಂದು ಹೇಳಲ್ಪಡುವ ಕರ್ಮದಿಂದ ಆಚ್ಛಾ ದಿಸಲ್ಪಟ್ಟಿದ್ದಂಥಾ, ಇವಗೆ ಭೋಗಿಸಲಿಕ್ಕೆ ಯೋಗ್ಯವಾದ ಅವ (ಪರಮಾತ್ಮ)ನಲ್ಲಿರು ವ ಅಪಹತ ಪಾಪ್ಮತ್ವಾದಿ ಗುಣಗಳು ದಹ ರಾಕಾಶವನ್ನು ಪ್ರಾಪಿಸಿದವಗೆ ಈಗ ಕಂ ಡುಬರುತ್ತವೋ ಆ ಕಾರಣದಿಂದ (ಆತ್ಮ ನು) ನಿರತಿಶಯ ಭೋಗ್ಯ ಉಳ್ಳವನೆಂದು ಅರ್ಥ. "ಹಿ" ಶಬ್ದವು ಹೇತುಪರ. ಅಡಿಯ ಲ್ಲಿ ಹೂಳಿಟ್ಟ ಚಿನ್ನದ ಕೊಪ್ಪರಿಗೆ ಇರುವ ಸ್ಥಳದ ಸ್ವಭಾವವನ್ನರಿಯದವರು ಆ ನಿಧಿ ಯ ಮೇಲೆ ಪದೇ ಪದೇ ಸಂಚರಿಸುತ್ತಾ ಇದ್ದರೂ ನಿಧಿಯನ್ನು ಹೇಗೆ ಪಡೆಯುವದಿಲ್ಲ ವೋ, ಅದೇ ರೀತಿ ಈ ಪ್ರಜೆಗಳು ಸುಷುಪ್ತಿಕಾಲದಲ್ಲಿ (ಅಲ್ಲಿ) ಕೂಡಿಕೊಂಡಾಗ್ಯೂ ಈ ದಹರಾಕಾಶವೆಂಬ ಬ್ರಹ್ಮಲೋಕವನ್ನು ತಿಳಿಯುವದಿಲ್ಲ ಎಂದು ಅರ್ಥ. ಇದಕ್ಕೆ ಕಾರಣವೇನಂದರೆ—(ಆಕಾಲದಲ್ಲವರು) ಅನೃತದಿಂದ ವಿರುದ್ಧ ಸ್ವಭಾವವನ್ನು ಪಡೆದಿ ರುತ್ತಾರೆ, ಆಚ್ಛಾದಿಸಲ್ಪಟ್ಟಿರುತ್ತಾರೆಂದು ಇಷ್ಟೆ. ಅಥವಾ ಅಂತರಾತ್ಮನಾಗಿ ಸದಾಕಾ

ಲದಲ್ಲಿಯೂ ಇರುವಂಥಾ ಮತ್ತು ಹಣವಿನ ಕೊಪ್ಪರಿಗೆಯಂತೆ ಪರಮ ಪುರುಷಾರ್ಥ ಭೂತವಾದ ದಹರಾಕಾಶವೆಂಬ ಬ್ರಹ್ಮದ ಮೇಲೆಯೇ ಈ ಪ್ರಜೆಗಳು ಸರ್ವಕಾಲದಲ್ಲಿ ಯೂ ಇರುವವರಾದರೂ ಅದನ್ನು ಪಡೆಯುವದಿಲ್ಲ ಎಂದು ಅರ್ಥವಾಗಿರುತ್ತದೆ ಎಂ ದು ರಾಮಾನುಜಾಚಾರ್ಯರು ವ್ಯಾಖ್ಯಾನಮಾಡಿರುತ್ತಾರೆ.

तइमेमुक्तौव्यक्ताः सत्याः कामाः मुक्तेः पूर्वं अनृतापिधानाः । तद्व्यनक्ति । तेषां स त्यकामानां सतां प्राग्विद्यमानानां अनृतं अ नाद्यज्ञानमपिधानमाच्छादनमिति । कुत एतादित्यतआह योयोहीति । हि यस्मात् अ स्यानृतापिहितसत्यकामस्यामुक्तस्यपुंसः । योयः पिताभ्रात्रादिर्वा इतोलोकात्प्रैति तं प्रे तं पित्रादिकं दर्शनाय द्रष्टुं इहलोके न लभते न शक्तो भवति । तस्मादनृतापिधानाइति अज्ञानाच्छादितसत्यकामत्वा देवप्रेतपित्रादि दर्शनं न लभते संसारिजीवइत्यर्थः । अथे त्यर्थान्तरे अनृतनिवृत्यनन्तरमितिवा । अ समुक्तस्य इहलोके येचजीवाः जीवन्तः पि त्राद्याः ये चप्रेताः मृताः तद्दर्शनादिकं न ल भते यद्यदन्यचेच्छन् इहसंसारदशायां न ल भते तत्सर्वं अत्रवैकुंठादि विष्णुलोके गत्वा विन्दते लभते । × । अत्रसंसारेसत्याः का माः अनृतापिधानाः ब्रह्मणः हृत्पद्माकाशेऽ नुपलंभात् नास्तिब्रह्मेति शंकांसदृष्टान्तं नि राहतद्यथेति । हिरण्यनिधिं अपिनिहितं अ क्षेत्रज्ञाः हिरण्यनिक्षेपस्थलमजानन्तः उपर्यु परिसञ्चरन्तोपि न विन्देयुर्नपश्यन्ति एव

ಮುಕ್ತಿಯಲ್ಲಿ ವ್ಯಕ್ತವಾಗುವಂಥಾ ಸ ತ್ಯಕಾಮಗಳು ಅದಕ್ಕೆ ಮೊದಲು ಸುಳ್ಳಿ ನಲ್ಲಿ ಅಡಗಿರುತ್ತವೆ. ಆ ಸಂಗತಿಯನ್ನು (ಈಗ) ಸ್ಪಷ್ಟಪಡಿಸಲಾಗುತ್ತದೆ. ಮೊ ದಲೇ ಸಿದ್ಧವಾಗಿ ಇರುವಂಥಾ ಸತ್ಯಕಾ ಮಗಳಿಗೆ (ಸುಳ್ಳೆಂದು ಹೇಳುವ) ಅನಾದಿ ಕಾಲದ ಅಜ್ಞಾನವು ಆಚ್ಛಾದನವಾಗಿರು ತ್ತದೆ ಎಂದು; ಯಾಕಂದರೆ ಮುಕ್ತಿಯ ನ್ನು ಪಡೆಯದೆ ಇರುವಂಥಾ ಸುಳ್ಳಿನಿಂದ ಮರೆಮಾಡಲ್ಪಟ್ಟ ಸತ್ಯಕಾಮಗಳುಳ್ಳ ಪು ರುಷಗೆ ತಂದೆಯಾಗಲಿ, ಸಹೋ ದರ ಮೊದಲಾದವರಾಗಲೀ, ಯಾರಾದ ರೂ ಈ ಲೋಕದಿಂದ ಮೃತಪಟ್ಟು ಹೋ ದರೆ ಅವನನ್ನು ಕಾಣಲಿಕ್ಕೆ (ಇವನು) ಶ ಕ್ತನಾಗುವದಿಲ್ಲ. ಆದ್ದರಿಂದ ಸಂಸಾರಿ ಯಾದ ಜೀವನು ಅಜ್ಞಾನದಿಂದ ಮರೆಮಾ ಡಲ್ಪಟ್ಟ ಸತ್ಯಕಾಮತ್ವ ಉಳ್ಳವನಾದ ದೆಸೆ ಯಿಂದಲೇ ಮೃತ ಪಿತೃಾದಿಗಳ ದರ್ಶನವ ನ್ನು ಪಡೆಯುವದಿಲ್ಲ ಎಂದು ಅರ್ಥ. ಪರಂತು ಅನೃತ (ಅಜ್ಞಾನ) ನಿವೃತ್ತಿ ಆದ ತರುವಾಯ ಮುಕ್ತಗೆ ಈ ಲೋಕದಲ್ಲಿ ಬದುಕಿಕೊಂಡಿರುವ ತಂದೆ ಮೊದಲಾದವ

मेवेमाः संसारिण्यः सर्वाः प्रजाः अहरहः प्रत्यहं एतंब्रह्मलोकं । × । सर्वाश्रयं ब्रह्म सुप्तौ गच्छन्त्योपि नविन्दन्ति नजानन्ति । तत्रहेतुमाह । × । अज्ञानेनाच्छादिताहि । रा ॥

यच्चान्यत् गन्धमाल्यादिकं । × । ब्रह्मलोकं विष्णुलोकं हृत्पद्मं तत्रत्यं ब्रह्मेति यावत् ॥ वे ॥

ರು ಆಗಲೀ, ಮೃತರಾದ (ತಂದೆ ತಾಯಿ ಮೊದಲಾದ) ವರಾಗಲೀ ಯಾರ ದರ್ಶನಾದಿಗಳು ಇಲ್ಲಿ ಲಾಭವಾಗುವದಿಲ್ಲವೋ, ಮತ್ತು ಸಂಸಾರದಶೆಯಲ್ಲಿ ಬೇರೆ ಯಾವದನ್ನಾದರೂ ಗಂಧ, ಹೂವು ವಗೈರೆ ಇಚ್ಛಿಸಿದರೆ ಯಾವದು ಇಲ್ಲಿ ದೊರೆಯುವದಿಲ್ಲವೋ, ಅದೆಲ್ಲ ವೈಕುಂಠಾದಿ ವಿಷ್ಣುಲೋಕಕ್ಕೆ ಹೋಗಿ ಪಡಿಯುತ್ತಾನೆ. (ಈಗ) ಇಲ್ಲಿ ಸಂಸಾರದಲ್ಲಿ ಸುಳ್ಳಿನಲ್ಲಿ ಅಡಗಿರುವ ಬ್ರಹ್ಮದ ಸತ್ಯಕಾಮಗಳು ಹೃತ್ಪದ್ಮಾಕಾಶದಲ್ಲಿ ಕಾಣದೆ ಹೋಗುವ ಪ್ರಯುಕ್ತ ಬ್ರಹ್ಮವೆಂಬ ವಸ್ತುವೇ ಇಲ್ಲ ಎಂದು ಆಕ್ಷೇಪಿಸಿದರೆ ಆ ಆಕ್ಷೇಪಕ್ಕೆ ಪರಿಹಾರರೂಪವಾಗಿ (ಶ್ರುತಿ) ಏನು ಹೇಳುತ್ತದೆಂದರೆ, ಹಣದ ಕೊಪ್ಪರಿಗೆಯನ್ನು ಬಚ್ಚಿಟ್ಟಂಥಾ ಸ್ಥಳವನ್ನು ತಿಳಿಯದವರು (ಅದರ) ಮೇಲೆ ಪದೇ ಪದೇ ಸಂಚರಿಸುತ್ತಿದ್ದರೂ ಹೇಗೆ ಆ ಕೊಪ್ಪರಿಗೆಯನ್ನು ಕಂಡುಕೊಳ್ಳುವದಿಲ್ಲವೋ ಅದೇ ರೀತಿ ಈ ಸಂಸಾರಿಗಳಾದ ಸಕಲ ಪ್ರಜೆಗಳು ಪ್ರತಿ ದಿವಸದಲ್ಲಿಯೂ ಸುಷುಪ್ತಿಯಲ್ಲಿ ಸರ್ವಾಶ್ರಯವಾದಂಥಾ ಈ ಹೃತ್ಪದ್ಮದಲ್ಲಿ ವಿದ್ಯಮಾನವಾದ ಬ್ರಹ್ಮಲೋಕವೆಂಬ ಬ್ರಹ್ಮದಲ್ಲಿ ಹೋದರೂ (ಅದನ್ನು) ತಿಳಿಯುವದಿಲ್ಲ. ಅದಕ್ಕೆ ಕಾರಣವೇನಂದರೆ (ಇವರು) ಅಜ್ಞಾನದಿಂದ ಆಚ್ಛಾದಿಸಲ್ಪಟ್ಟಿರುತ್ತಾರೆ. ಇದೇ ಕಾರಣ ಎಂದು ಮಾಧ್ವರ ವ್ಯಾಖ್ಯಾನಗಳಲ್ಲಿ ಹೇಳೋಣಾಗುತ್ತದೆ.

(೪) ಇನ್ನು ಈ ಪಾದದಲ್ಲಿ ಉಳಿದ ಶ್ರುತಿಗಳ ಪೈಕಿ ೯ನೇದರಲ್ಲಿ ಈ ವರೇಗೆ ವಿವರಿಸಿದ ಆಕಾಶನೆಂಬ ಆತ್ಮಗೆ ಹೃದಯವೆಂದು ಸಂಕೇತಮಾಡಿ, ೧೦ನೇ ಶ್ರುತಿಯಲ್ಲಿ ಸಂಪ್ರಸಾದನಾಗಿ ಪರಂಜೋತಿಯನ್ನು ಪ್ರಾಪಿಸಿ ಸ್ವರೂಪನಿಷ್ಪತ್ತಿಯನ್ನು ಪಡೆಯುವವನ ವಿಷಯ ಹೇಳೋಣಾಗಿ ಇದೆ. ಈ ಸಂದರ್ಭದಲ್ಲಿ ನಾವು ತಿಳಕೊಳ್ಳಬೇಕಾದ ಮುಖ್ಯ ಸಂಗತಿಯು—ಆ ಸಂಪ್ರಸಾದನೆಂಬವನ್ಯಾರು? ಮತ್ತು ಪ್ರಸ್ತುತ ೧೦ನೇ ಶ್ರುತಿಯಲ್ಲಿ ಪ್ರಯೋಗಿಸಿರುವ ಆತ್ಮಶಬ್ದವು ಸ್ವರೂಪನಿಷ್ಪತ್ತಿ ಹೊಂದಿದವಗೆ ಸಮ್ಮಂಧಸುತ್ತದೋ ಇಲ್ಲವೋ ಎಂಬದಾಗಿರುತ್ತದೆ.

सुषुप्तकाले स्वेनात्मनासता सम्पन्नः

ಶಂಕರಾಚಾರ್ಯರು, ಸುಷುಪ್ತಿಕಾಲ

सन्सम्यक् प्रसीदतीति । जाग्रत्स्वप्नयोर्विषयेन्द्रियसंयोगजातं कालुष्यं जहातीति । सम्प्रसादशब्दो यद्यपि सर्वजन्तूनां साधारणः तथापि एवं वित्स्वर्गमेतीति प्रकृतत्वा देष सम्प्रसादइति सन्निहितवद्वलविशेषात् सोऽथेदं शरीरं हित्वा अस्माच्छरीरात्समुत्थाय शरीरात्मभावनां परित्यज्येत्यर्थः ।×। परं परमात्मलक्षणं विज्ञप्तिस्वभावं ज्योतिरूपं सम्पद्य स्वास्थ्यमुपगम्येत्येतत् स्वेनात्मीयेन रूपेणाभिनिष्पद्यते । प्रागेतस्याः स्वरूपसम्पत्तेः अविद्यया देहमेवापरं रूपमात्मत्वेनोपगतइति तदपेक्षयेदमुच्यते स्वेनरूपेणेति । अशरीरताह्यात्मनस्स्वरूपं । यत्स्वं परंज्योतिस्स्वरूपमापद्यते संप्रसादः एष आत्मेतिहोवाच ।×। किञ्च एतदमृतं अविनाशिभूमा ।×। अतएवाभयं भूम्नोद्वितीयाभावात् अतएवब्रह्मेति ।×। तत्सत्यं अवितथं ॥ सतीयमिति । सकारस्तकारेयमिति च । इकारस्तकारे उच्चारणार्थोऽनुबन्धः ॥ शं ॥

ದಲ್ಲಿ (ಪುರುಷನು) ತನ್ನ ಸ್ವರೂಪವಾದ ಸತ್‌ದ ಸಂಗಡ ಶೇರಿಕೊಂಡು ಸಂಪೂರ್ಣಪ್ರಸನ್ನತೆಯನ್ನು ಪಡೆಯುತ್ತಾನೆ; ಎಂದರೆ ಜಾಗ್ರತ್ ಸ್ವಪ್ನಾವಸ್ಥೆಗಳಲ್ಲಿ ವಿಷಯೇಂದ್ರಿಯಗಳ ಸಂಯೋಗದಿಂದುಂಟಾದ ಮಾಲಿನ್ಯವನ್ನು ತ್ಯಜಿಸುತ್ತಾನೆ. ಸಂಪ್ರಸಾದ ಶಬ್ದವು ಸಕಲ ಜಂತು ಸಾಧಾರಣವಾದದ್ದು. ಆದರೂ "ಈ ರೀತಿ ತಿಳಿದವನು ಸ್ವರ್ಗಲೋಕವನ್ನು ಪ್ರಾಪಿಸುತ್ತಾನೆ" ಎಂದು (೯ನೇ ಶ್ರುತಿಯಲ್ಲಿ) ಹೇಳಿರುವದರಿಂದ ಈ ರೀತಿ ತಿಳಿದ ವಿದ್ವಾಂಸನೇ ಪ್ರಸ್ತುತ ಸಂಪ್ರಸಾದನಾಗಿರುತ್ತಾನೆ. ಯಾಕಂದರೆ — ಪ್ರಯತ್ನಪೂರ್ವಕವಾಗಿ ಸಮೀಪದಲ್ಲಿರುವ ಆ ವಿದ್ವಾಂಸನನ್ನೇ "ಈ" ಸಂಪ್ರಸಾದನೆಂದು ಕುರಿತಾಗಿ ಹೇಳೋಣಾಗುತ್ತದೆ. ಇವನು ಈ ಶರೀರತ್ಯಾಗಮಾಡಿ ಎಂದರೆ ಶರೀರವೇ ತಾನು ಎಂಬ ಭಾವನೆಯನ್ನು ಬಿಟ್ಟು, ಪರಮಾತ್ಮನೆಂಬ ವಿಜ್ಞಪ್ತಿ ಸ್ವಭಾವರೂಪವಾದ (ಪರಂ) ಜ್ಯೋತಿಯನ್ನು ಪ್ರಾಪಿಸಿ, ಎಂದರೆ ಸ್ವಸ್ಥತೆಯನ್ನು ಪಡದು, ತನ್ನ ಸ್ವಕೀಯರೂಪನಿಷ್ಪತ್ತಿಯನ್ನು ಪಡೆಯುತ್ತಾನೆ. ಈ ಸ್ವರೂಪನಿಷ್ಪತ್ತಿ ಆಗುವ ಮೊದಲು (ಇವನು) ಅಜ್ಞಾನದಿಂದ ಪರರೂಪವಲ್ಲದ ದೇಹವೇ ತಾನು ಎಂಬದಾಗಿ ತಿಳಿದಿರುತ್ತಾನಾದ ಕಾರಣ, "ಸ್ವಕೀಯವಾದ ರೂಪ"ವೆಂದು ಹೇಳಿದ್ದಾಗಿರುತ್ತದೆ. ಆತ್ಮನ ಸ್ವರೂಪವು ಶರೀರರಾಹಿತ್ಯವಾದದ್ದೆಂಬದು ಪ್ರಸಿದ್ಧವಾದ ಸಂಗತಿ ಯಾಗಿರುತ್ತದೆ. ಯಾವ ತನ್ನ ಸ್ವಕೀಯವಾದ ಪರಂಜ್ಯೋತಿರೂಪವನ್ನು ಪಡೆಯುತ್ತಾನೋ ಸಂಪ್ರಸಾದನಾದವನು ಇವನು ಆತ್ಮನು ಎಂದು ಗುರುಗಳು ಅಪ್ಪಣೆಕೊಟ್ಟರು. ಅಷ್ಟು ಮಾತ್ರವಲ್ಲ, ಇವನು

(ಆತ್ಮನು) ನಾಶರಹಿತನಾದವನು; ಇನ್ನೊಂದು ವಸ್ತು ಇಲ್ಲದವನಾದ ಪ್ರಯುಕ್ತ ಭಯವಿಲ್ಲದವನು; ಆದಕಾರಣ ಬ್ರಹ್ಮ. ಈ ಬ್ರಹ್ಮದ ಹೆಸರು "ಸತ್ಯ" (ಮಿಥ್ಯವಲ್ಲದ್ದು) ಎಂದು ಆಗಿರುತ್ತದೆ.

ಆ ಹೆಸರಿನಲ್ಲಿ ಸಕಾರ, ತಕಾರ, ಯಮ್ ಇಷ್ಟು ಅಕ್ಷರಗಳು ಇವೆ. ಇಕಾರ ತಕಾರ ಉಚ್ಚಾರಕ್ಕೋಸ್ಕರ ಕೂಡಿಸಲ್ಪಟ್ಟಂಥವು. (ಈ ಅಕ್ಷರಗಳ ಅರ್ಥ ಲಿನೇ ಪುಟದಲ್ಲಿ ಹೇಳಿ ಇದೆ),

ಎಂದು ವಿವರಿಸುತ್ತಾರೆ.

संप्रसादशब्दः सुषुप्तिस्थानवचनः सन् तत्संबन्धाज्जीवं लक्षयति । × । अहरहर्वा एवं विदिति पूर्ववाक्येनिर्दिष्टउपासको जीवः । अस्मात् हेयतयापरिदृश्यमानात् शरीरादुत्क्रम्य देशविशेषनिष्टं परमात्मानं प्राप्य स्वेनरूपेणाभिनिष्पद्यते इत्यर्थः । अस्यवाक्यस्यार्थः प्रजापति विद्यायां विशिष्यउच्यते । एषआत्मा एतदमृतमभयमेतदित्यत्रैतच्छब्दाः पूर्ववाक्ये परंज्योतिरूपसम्पद्येति प्राप्यतयानिर्दिष्टपरंज्योति शब्दित ब्रह्मपराः। प्राप्यतयाप्राधान्याद्व्यवहितत्वाच्च ॥ × ॥ सत् ति यमिति । सत्यनामत्र्यक्षरात्मक मित्यर्थः ॥ र ॥

ರಾಮಾನುಜಾಚಾರ್ಯರು, ಸಂಪ್ರಸಾದ ಶಬ್ದವು ಸುಷುಪ್ತಿಸ್ಥಾನವಾಚಿಯಾಗಿದ್ದುಕೊಂಡು, ಜೀವನನ್ನು ಲಕ್ಷೀಕರಿಸಿಕೊಂಡುಂಟು. ಯಾಕಂದರೆ ಅದು ಅದಕ್ಕೆ (ಸುಷುಪ್ತಿಗೆ) ಸಂಬಂಧಪಟ್ಟಿರುತ್ತದೆ. ಜೀವನೆಂಬವನು "ದಿನಚರೀ ಈ ರೀತಿ ತಿಳಿದವನು" ಎಂಬ ಈ ಮೊದಲಿನ ವಾಕ್ಯದಿಂದ ನಿರ್ದಿಷ್ಟನಾದ ಉಪಾಸಕನಾಗಿರುತ್ತಾನೆ. (ಇವನು) ತ್ಯಾಗಮಾಡಲಿಕ್ಕೆ ಯೋಗ್ಯವಾಗಿ ಕಂಡುಬರುವ ಈ ಶರೀರದಿಂದ ಹೊರಟು ದೇಶವಿಶೇಷದಲ್ಲಿರುವ ಪರಮಾತ್ಮನನ್ನು ಪ್ರಾಪಿಸಿ, ಸ್ವರೂಪನಿಷ್ಪತ್ತಿಯನ್ನು ಪಡಿಯುತ್ತಾನೆ ಎಂದು ಅರ್ಥ.

(ಇನ್ನು) ಈ ವಾಕ್ಯಕ್ಕೆ (ಮುಂದೆ ಬರುವ) ಪ್ರಜಾಪತಿಯ (ಪ್ರತ್ಯಗಾತ್ಮ) ವಿದ್ಯದಲ್ಲಿ (XIನೇ ಪಾಠದಲ್ಲಿ) ವಿಶೇಷವಾಗಿ ಅರ್ಥ ಹೇಳೋಣಾಗುತ್ತದೆ. "ಇವನು ಆತ್ಮ, ಇವನು ಸಾವಿಲ್ಲದವನು, ಭಯವಿಲ್ಲದವನು," ಎಂಬ ವಾಕ್ಯದಲ್ಲಿರುವ "ಇವನು" ಇವನು" ಎಂಬ ಶಬ್ದಗಳು ಅವುಗಳಿಗೆ ಮೊದಲು "ಪರಂಜ್ಯೋತಿಯನ್ನು ಪ್ರಾಪಿಸಿ" ಎಂಬದರಿಂದ ಪ್ರಾಪಿಸತಕ್ಕದಾಗಿ ನಿರ್ದಿಷ್ಟವಾದ ಪರಂಜ್ಯೋತಿ ಎಂದು ಹೇಳಲ್ಪಡುವ ಬ್ರಹ್ಮಪರವಾದವುಗಳಾಗಿರುತ್ತವೆ. ಯಾಕಂದರೆ ಅದು ಪ್ರಾಪಿಸಲ್ಪಡತಕ್ಕ ಮುಖ್ಯವಾದ ವಸ್ತುವಾಗಿರುವದಲ್ಲದೆ, (ಆ ಶಬ್ದಕ್ಕೆ) ಕೂಡಿಕೊಂಡಿರುತ್ತದೆ.

ಸತ್ಯವೆಂಬ ಹೆಸರು ಸತ್, ತಿ, ಯಮ್ ಈ ೩ ಅಕ್ಷರಗಳುಳ್ಳದ್ದು ಎಂದು ಅರ್ಥ;
ಎಂದು ಸಹ ಹೇಳುತ್ತಾರೆ.

यएषसंप्रसादः । सम्यक् प्रसादो यस्या सौसम्प्रसादः । भगवत्प्रसादवान् ज्ञानी । अस्माच्छरीरात्समुत्थाय परंज्योतिरुपसम्पद्य प्राप्य स्वेनरूपेण ज्ञानानन्दादि शुद्धरूपेणाभिनिष्पद्यते।परंज्योतिरित्युक्तः कइत्यत्राह एषआत्मेति । एषपरंज्योतिः शब्दोक्तः आत्मा परमात्मा न सन्निहितो जीवइत्युवाचह॥×॥ ॥ रा ॥ चरमशरीरात् । × । स्वस्वरूपाविर्भावं प्राप्नोति । × । यंप्राप्यासौ स्वरूपतामाप्नोति स एषः प्रागुक्तः आत्मेति होवाच । × । अमृतं नित्यमुक्तं । अभयं कदापि भयास्पृष्टं । एतत् ब्रह्मपूर्णमिति ॥ वे ॥ सत् ति यमिति । × । तत् तत्राक्षरत्रयमध्ये यत् सदित्यक्षरं तदमृतं मुक्तजातवाचकं । अथयत्तीत्यक्षरं तन्मर्त्यं संसारिजीववाचि । अथयत् यमित्यक्षरं तेनाक्षरेण उभे मुक्तामुक्तजाते सत् तीतिशब्दाभ्यामुक्ते यच्छति नियच्छति नियमयति इतिह्येषोऽर्थ उच्यतइत्यर्थः । तस्मान्नियन्तृत्वात् यमिति । × । ॥ रा । अत्रयद्यपि सदित्यक्षरद्वयं तथाचत्रीणीत्यनुपपन्नं । तथापि तकारस्य व्यञ्जनमात्रत्वेनाविवक्षयैवमुक्तमित्यवसेयं ॥ वे ॥

ಮಾಧ್ವರು, ಸಂಪ್ರಸಾದನೆಂದರೆ ಭಗವತ್ ಪ್ರಸಾದವನ್ನು ಸಂಪಾದಿಸಿಕೊಂಡ ಜ್ಞಾನಿಯಾಗಿರುತ್ತಾನೆ. (ಇವನು) ಈ ಚರಮ (ಹೊರಗಿನ ಸ್ಥೂಲ) ಶರೀರದಿಂದ ಹೊರಟು ಪರಂಜ್ಯೋತಿಯನ್ನು ಪ್ರಾಪಿಸಿ ತನ್ನ ಸ್ವಕೀಯವಾದ ಜ್ಞಾನಾನಂದಾದಿ ಲಕ್ಷಣಗಳುಳ್ಳ ಪರಿಶುದ್ಧವಾದ ರೂಪನಿಷ್ಪತ್ತಿಯನ್ನು ಪಡೆಯುತ್ತಾನೆ. (ಈ ಸಂಪ್ರಸಾದನಾದವನು) ಯಾರನ್ನು ಪ್ರಾಪಿಸಿ ಸ್ವರೂಪಸ್ಥಿತಿಯನ್ನು ಪಡೆಯುತ್ತಾನೋ ಆ ಪರಂಜ್ಯೋತಿ ಎಂದರೆ ಯಾರು? ಎಂದರೆ, ಅವನು ಪರಮಾತ್ಮನು, ಸಮೀಪಸ್ಥನಾದ ಜೀವನಲ್ಲ ಎಂದು ಹೇಳೋಣಾಗುತ್ತದೆ. ಈ ಆತ್ಮನು ನಿತ್ಯಮುಕ್ತನು. ಯಾವ ಕಾಲದಲ್ಲಿಯೂ ಭಯಪಡದೆ ಇರುವವನು. ಇವನೇ ಬ್ರಹ್ಮ, ಎಂದರೆ ಪೂರ್ಣನಾದವನು. ಸತ್ಯಂ ಎಂಬ ಶಬ್ದದಲ್ಲಿ "ಸತ್, ತಿ, ಯಂ" ಇಷ್ಟು ಅಕ್ಷರಗಳಿವೆ. ಆ ಪೈಕಿ "ಸತ್" ಇದರಲ್ಲಿ ಎರಡು ಅಕ್ಷರಗಳಿರುವದರಿಂದ ೩ ಅಕ್ಷರಗಳೆಂದು ಹೇಳುವದು ಸರಿ ಅಲ್ಲವಾದರೂ, ತಕಾರವು ಬರೀ ವ್ಯಂಜನವಾಗಿರುವದರಿಂದ, ಅದನ್ನು ಲೆಖ್ಖಕ್ಕೆ ಕೂಡಿಸದೆ ಆ ಮೇರೆಗೆ (ಮೂರು ಅಕ್ಷರಗಳೆಂದು) ಹೇಳಿದೆಂದು ತಿಳಿಯಬೇಕಾಗಿರುತ್ತದೆ. ಆ ಮೂರು ಅಕ್ಷರಗಳ ಪೈಕಿ "ಸತ್" ಈ ಅಕ್ಷರವು ಮುಕ್ತಸ

ಮುದಾಯವಾಚಿ; ಅನಂತರದ "ತಿ" ಎಂಬ ಅಕ್ಷರವು ಸಂಸಾರಿಯಾದ ಜೀವವಾಚಿ ಸ
ಹ ಆಗಿರುತ್ತವೆ. ಅನಂತರ ಯಾವ "ಯಂ" ಈ ಅಕ್ಷರ ಉಂಟೋ ಅದರಿಂದ ಸತ್,
ತಿ, ಎಂಬ ೨ ಅಕ್ಷರಗಳಿಂದ ಹೇಳಲ್ಪಡುವ ಮುಕ್ತಾಮುಕ್ತ ಈ ಉಭಯ ವರ್ಗಗಳೂ
ನಿಯಮಿಸಲ್ಪಡುತ್ತವೆ ಎಂದು ಅರ್ಥವೆಂದು ಹೇಳೋಣವಾಗುತ್ತದೆ ಎಂದು ಅರ್ಥವಾಗಿ
ರುತ್ತದೆ. ನಿಯಂತೃತ್ವ ಹೇತುವಿನಿಂದ "ಯಂ" ಎನ್ನುವದು ಎಂದು ಹೇಳುತ್ತಾರೆ.

## VIII. ನೇ ಪಾಠ.

# ಬ್ರಹ್ಮವಿದ್ಯ.

(१) सर्वं खल्विदं ब्रह्म तज्जलानिति शान्तउपासीताथ खलुक्रतुमयः पुरुषो यथा क्रतुरस्मिँल्लोके पुरुषो भवति तथेतःप्रेत्य भवति । सक्रतुं कुर्वीत ॥ (३—१४—१)

(೧) ಇದೆಲ್ಲ ಬ್ರಹ್ಮವೆ. (ಇದು) ಅದರಿಂದ ಉಂಟಾಗುತ್ತದೆ; ಅದರಲ್ಲಿ ಲಯವಾಗುತ್ತದೆ, ಅದರಲ್ಲಿ ಬದುಕಿಕೊಂಡುಂಟು ಎಂದು ಶಾಂತನಾಗಿ ಉಪಾಸಿಸಬೇಕು. ಯಾಕಂದರೆ ಪುರುಷನು ಕ್ರತುಮಯನು (ವಿವೇಚನೆಯುಳ್ಳ ಪ್ರಾಣಿ). ಈ ಲೋಕದಲ್ಲಿರುವಾಗ (ಅವನು) ಹೇಗೆ ನಿಶ್ಚಯಿಸಿಕೊಳ್ಳುತ್ತಾನೋ ಮರಣಪಟ್ಟು, ಇಲ್ಲಿಂದ ಹೋದ ನಂತರವೂ ಹಾಗೆ ಆಗುತ್ತಾನೆ. (ಆದಕಾರಣ) ಅವನು ಕ್ರತುವನ್ನು ಮಾಡಬೇಕು (ನಿಶ್ಚಯಿಸಿಕೊಳ್ಳಬೇಕು).

(२) मनोमयः प्राणशरीरो भारूपः सत्यसंकल्प आकाशात्मा सर्वकर्मा सर्वकामः सर्वगन्धः सर्वरसः सर्वमिदमभ्यात्तोऽवाक्यनादरः ॥ (३—१४—२)

(೨) ಮನೋಮಯನು (ಪ್ರಾಜ್ಞ), ಪ್ರಾಣರೂಪಶರೀರ ಉಳ್ಳವನು, ಪ್ರಕಾಶರೂಪನು, ಸತ್ಯಸಂಕಲ್ಪನು, ಆಕಾಶಸ್ವಭಾವ ಉಳ್ಳವನು, ಸರ್ವಕರ್ತನು, ಸರ್ವಕಾಮನು, ಸರ್ವಗಂಧನು, (ಪರಿಮಳನು), ಸರ್ವ ರಸನು (ರುಚಿಯಾಗಿರುವವನು), ಇದನ್ನೆಲ್ಲ ವ್ಯಾಪಿಸಿಕೊಂಡಿರುವವನು, ಮಾತಿಲ್ಲದವನು, ಉತ್ಸಾಹ ಇಲ್ಲದವನು.

(३) एष म आत्माऽन्तर्हृदयेऽणी

(೩) ಇವನು ಹೃದಯದೊಳಗೆ ಇರುವ ನನ್ನ

यान् व्रीहेर्वा यवाद्वा सर्षपाद्वा श्यामकाद्वा श्यामतण्डुलाद्वा एष म आत्माऽन्तर्हृदयेज्या यान् पृथिव्या ज्यायानन्तरिक्षाज्ज्यायान्दिवो ज्यायानेभ्योलोकेभ्यः ॥ (३–१४–३)

ಆತ್ಮನು. ಭತ್ತದಕ್ಕಿಂತಲೂ, ಯವಕ್ಕಿಂತಲೂ, ಸಾಸಿವೆಗಿಂತಲೂ, ಶಾವೆಗಿಂತಲೂ, ಶಾವೆ ಅಕ್ಕಿಗಿಂತಲೂ, ಅಣು (ಸೂಕ್ಷ್ಮ)ವಾದವನು. ಈ ನನ್ನ ಆತ್ಮನು ಹೃದಯದೊಳಗೆ ಪೃಥ್ವಿಗಿಂತಲೂ, ಅಂತರಿಕ್ಷಕ್ಕಿಂತಲೂ, ದ್ಯುಲೋಕಕ್ಕಿಂತಲೂ, ದೊಡ್ಡದಾದವನು. (ಈ) ಎಲ್ಲ ಲೋಕಗಳಿಗಿಂತಲೂ ದೊಡ್ಡದಾದವನು.

(४) सर्वकार्मा सर्वकामः सर्वगन्धः सर्वरसः सर्वमिदमभ्यात्तोऽवाक्यनादर एष म आत्माऽन्तर्हृदय एतद्ब्रह्मैतमितः प्रेत्या भिसम्भवितास्मीति यस्यस्यादद्धा नाविचिकित्साऽस्तीतिह स्माह शाण्डिल्यः शाण्डिल्यः ॥ (३–१४–४)

(೪) ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು, ಇದನ್ನೆಲ್ಲ ವ್ಯಾಪಿಸಿಕೊಂಡಿರುವವನು, ಮಾತಿಲ್ಲದವನು, ಉತ್ಸಾಹ ಇಲ್ಲದವನು, ಹೃದಯದೊಳಗಿರುವ ಈ ನನ್ನ ಆತ್ಮನು ಈ ಬ್ರಹ್ಮ. ಮರಣಪಟ್ಟು ಈ ಲೋಕದಿಂದ ಹೋಗಿ ಅದನ್ನು ನಾನು ಶೇರಿಕೊಳ್ಳುತ್ತೇನೆಂಬೀ ನಂಬಿಕೆ ಯಾರಿಗಿದೆಯೋ (ಅವನ ವಿಷಯದಲ್ಲಿ) ಸಂಶಯವಿಲ್ಲ ಎಂದು ಶಾಂಡಿಲ್ಯರು ಹೇಳಿದರು; ಶಾಂಡಿಲ್ಯರು ಹೇಳಿದರು.

(५) न्यग्रोधफलमत आहरेतीदं भगव! इति ॥ भिन्धीति ॥ भिन्नं भगव! इति ॥ किमत्रपश्यसीत्यण्व्य इवेमाधाना भगव! इत्यासामङ्गैकां भिन्धीति ॥ भिन्नाभगव! इति । किमत्रपश्यसीति ॥ न किञ्चन भगव! इति ॥ (६–१२–१)

(೫) (ಅ) ಗೋಳಿಮರದಿಂದ (ಒಂದು) ಹಣ್ಣನ್ನು ತಾ (ಎಂದು ಶ್ವೇತಕೇತುಗೆ ಉದ್ದಾಲಕರು) ಹೇಳಿದರು. ಇಲ್ಲಿ ಇದೆ ಸ್ವಾಮಿ! ಎಂದನು. ಒಡಿ ಎಂದರು. ಒಡದೆ ಸ್ವಾಮಿ! ಎಂದನು. ಅದರಲ್ಲಿ ನಿನಗೆ ಏನು ಕಾಣುತ್ತದೆ ಎಂದರು. ಈ ಸೂಕ್ಷ್ಮವಾದ ಬೀಜಗಳು ಸ್ವಾಮಿ! ಎಂದನು. ಅವುಗಳಲ್ಲಿ ಒಂದನ್ನು ಒಡಿ ಮಗು! ಎಂದರು. ಒಡೆದೆ ಸ್ವಾಮಿ! ಎಂದನು. ಅದರಲ್ಲಿ ನಿನಗೆ ಏನು ಕಾಣುತ್ತದೆ ಎಂದರು. ಏನೂ ಇಲ್ಲ ಸ್ವಾಮಿ! ಎಂದನು.

(६) तꣳहोवाच यंवैसोम्यैतमणिमानं न निभ्भालयस एतस्यवैसोम्यैषोऽणिम

(೬) (ಆಗ) ಅವನ ಕೂಡೆ (ಅವರು) ಹೇಳಿದ್ದೇನಂದರೆ:—ಹೇ ಸೋಮ್ಯ ಯಾ

एवं महान्यग्रोधस्तिष्ठति । श्रद्धत्स्वसोम्येति ॥ (६–१२–२)

ನ ಅಣುವಾದವನನ್ನು ನೀನು ಕಾಣುವದಿಲ್ಲವೋ, ಈ ಅಣುವಾದವನ ದೆಸೆಯಿಂದಲೇ ಸೋಮ್ಯ! ಈ ರೀತಿ (ಆ) ಗೋಳಿಮರವು ಮಹತ್ತಾಗಿ ಬೆಳದುಕೊಂಡುಂಟು: (ನಾನು ಹೇಳುವದನ್ನು) ನಂಬು ಸೋಮ್ಯ ಎಂದು.

(७) स यएषोऽणिमैतदात्म्यमिदꣳ सर्वं तत्सत्यꣳ स आत्मा "तत्वमसि" श्वेतकेतो! इति ॥ भूयएव मा भगवान् विज्ञापयत्विति ॥ तथासोम्येति होवाच ॥ (६–१२–३)

(೭) ಈ ಯಾರು ಸೂಕ್ಷ್ಮವಾಗಿರುವನೋ ಇವನಿಂದ ಇದೆಲ್ಲ ಆತ್ಮ (ಸಾರ) ಉಳ್ಳದ್ದಾಗಿದೆ. ಅದು (ಬ್ರಹ್ಮ) ಸತ್ಯ; ಅವನು ಆತ್ಮನು; ನೀನು ಅದೇ ಆಗಿರುವಿ ಶ್ವೇತಕೇತು! ಎಂದು. ನನಗೆ ಇನ್ನೊಮ್ಮೆ ಅಪ್ಪಣೆ ಕೊಡಬೇಕು ಸ್ವಾಮಿ! ಎಂದು (ಶ್ವೇತಕೇತು ಕೇಳಿಕೊಂಡನು). ಹಾಗಾಗಲಿ ಸೋಮ್ಯ! ಎಂದು (ತಂದೆಯು) ಹೇಳಿದರು.

(८) लवणमेतदुदकेऽवधायाथ मा प्रातरुपसीदथाइति ॥ सह तथाचकार ॥ तꣳ होवाच यद्दोषा लवणमुदकेऽवाधा अङ्ग तदाहरेति ॥ तद्धावमृश्य नविवेद ॥ (६-१३-१)

(೮) ಈ ಉಪ್ಪಿನ ಹೆಂಟೆಯನ್ನು ನೀರಿನಲ್ಲಿ ಹಾಕಿಟ್ಟು ನಾಳೆ ಪ್ರಾತಃಕಾಲ ನನ್ನ ಬಳಿಗೆ ಬಾ ಎಂದರು. ಅವನು ಹಾಗೆಯೇ ಮಾಡಿದನು. ರಾತ್ರೆ ನೀರಿನಲ್ಲಿ ಹಾಕಿಟ್ಟ ಉಪ್ಪು ತಕ್ಕೊಂಡು ಬಾ, ಮಗು! ಎಂದರು. ಅವನು ಹುಡುಕಿನೋಡಲು (ಅದು) ಅವಗೆ ಕಾಣಲಿಲ್ಲ.

(९) यथाविलीनमेवाङ्गास्यान्तादाचामेति । कथमिति ॥ लवणमिति ॥ मध्यादाचामेति ॥ कथमिति ॥ लवणमित्यंतादाचामेति ॥ कथमिति ॥ लवणमित्यभिप्राश्यैनदथमोपसीदथा इति ॥ तद्धतथा चकार । तच्छश्वत्संवर्तते । तꣳहोवाचात्रवावकिलतत्सोम्य!'न निभालयसेऽत्रैवाकिलेति ॥ (६–१३–२)

(೯) ಹೇ ಮಗು! (ಆ ಉಪ್ಪು) ಹೇಗೆ (ನೀರಿನಲ್ಲಿ) ಅಡಗಿತೋ (ಹಾಗೆಯೇ) ಅದರ ಮೇಲಿನಿಂದ (ಸ್ವಲ್ಪ ನೀರು ತಕ್ಕೊಂಡು) ರುಚಿನೋಡು (ಎಂದರು ಅವನು ಹಾಗೆ ಮಾಡಲು) ಹೇಗಿದೆ ಎಂದು ಕೇಳಿದರು. ಉಪ್ಪು ಎಂದನು. ಮಧ್ಯದಿಂದ (ಸ್ವಲ್ಪ ತಕ್ಕೊಂಡು) ರುಚಿನೋಡು ಎಂದರು. ಹೇಗಿದೆ, ಎಂದು ಕೇಳಿದರು. ಉಪ್ಪು ಎಂದನು. ಬುಡದಿಂದ ಸ್ವಲ್ಪ ತಕ್ಕೊಂಡು ರುಚಿನೋಡು ಎಂದರು. ಹೇ

ಗಿದೆ, ಎಂದು ಕೇಳಿದರು. ಉಪ್ಪು ಎಂದನು. (ಆಗ) ಅದನ್ನು (ಆ ನೀರನ್ನು) ಚೆಲ್ಲಿಬಿಟ್ಟು ನನ್ನ ಬಳಿಗೆ ಬಾ ಎಂದರು. ಅವನು ಹಾಗೆ ಮಾಡಿದನು. "ಅದು (ಉಪ್ಪು) ಯಾವಾಗಲೂ ಉಂಟು" (ಎಂದು ಶ್ವೇತಕೇತು ತನ್ನಷ್ಟಕ್ಕೆ ಅಂದುಕೊಂಡನು. (ಆಗ) ಅವನಿಗೆ (ಉದ್ದಾಲಕರು) ಹೇಳಿದ್ದೇನಂದರೆ:— ಹೇ ಸೋಮ್ಯ! (ನಾನು) ಹೇಳಿದ್ದು ( ಸತ್ ನಾಮಕವಾದ ಬ್ರಹ್ಮವು) ಇಲ್ಲಿಯೇ (ನಿನ್ನ ದೇಹದಲ್ಲಿಯೇ) ಇದೆ. ನಿನಗೆ ಕಾಣುವದಿಲ್ಲ; ನಿಜವಾಗಿ ಇಲ್ಲಿಯೇ ಇದೆ ಎಂದು.

(१०) स य एषोऽणिमैतदात्म्यमिदꣳसर्वं तत्सत्यꣳ स आत्मा "तत्वमसि" श्वेतकेतो! इति ॥ भूय एव मा भगवान् विज्ञापयत्विति ॥ तथासोम्येति होवाच ॥ (६–१३–३)

(೧೦) (ಈ) ಸೂಕ್ಷ್ಮನಾದವನು ಯಾರೋ, ಇವನಿಂದ ಇದೆಲ್ಲ ಆತ್ಮಉಳ್ಳದ್ದಾಗಿದೆ. ಅದು ಸತ್ಯ; ಅವನು ಆತ್ಮನು; ಹೇ ಶ್ವೇತಕೇತು! "ನೀನು ಅದೇ ಆಗಿರುವಿ" ಎಂದು (ಉದ್ದಾಲಕರು ಹೇಳಿದರು). ನನಗೆ ಇನ್ನೂ ಮತ್ತೆ ಅಪ್ಪಣೆ ಕೊಡಬೇಕು ಸ್ವಾಮಿ! ಎಂದು (ಕೇಳಿಕೊಂಡನು). ಹಾಗಾಗಲಿ ಸೋಮ್ಯ! ಎಂದು (ಅವರು) ಹೇಳಿದರು.

(११) यथासोम्य! पुरुषं गन्धारेभ्योऽभिनद्धाक्षमानीय तं ततोऽतिजने विसृजेत् । स यथातत्र प्राङ्वा उदङ्वाऽधराङ्वा प्रध्मायिताभिनद्धाक्ष आनीतोऽभिनद्धाक्षोविसृष्टः ॥ (६–१४–१)

(೧೧) ಹೇ ಸೋಮ್ಯ ಒಬ್ಬ ಮನುಷ್ಯನನ್ನು (ಯಾರಾದರೂ) ಕಂದಹಾರ ದೇಶದಿಂದ ಕಣ್ಣುಕಟ್ಟಿ ತಂದು ಬೇರೆ ಒಂದು ನಿರ್ಜನ ಪ್ರದೇಶದಲ್ಲಿ ಬಿಟ್ಟರೆ, ಆ ಮನುಷ್ಯನು ಅಲ್ಲಿ ಮೂಡುಮುಖವಾಗಿ ಆಗಲೀ, ಬಡಗುಮುಖವಾಗಿ ಆಗಲೀ, ಪಡುಮುಖವಾಗಿ ಆಗಲೀ, (ತಿರುಗಿಕೊಂಡು) "ನನಗೆ ಕಣ್ಣುಕಟ್ಟಿ ತಂದಿರೋ! ಕಣ್ಣು ಕಟ್ಟಿ ಬಿಟ್ಟಿದ್ದಾರೆ"! ಎಂದು ಹೇಗೆ ಬೊಬ್ಬೆ ಹೊಡದಾನೋ;

(१२) तस्ययथाऽभिनहनं प्रमुच्य प्रब्रूयादेतां दिशं गन्धारा एतां दिशंव्रजेति ॥ सग्रामाद्ग्रामं पृच्छन् पण्डितो मेधावी गन्धारानेवोपसम्पद्येतैवमेवेहाचार्य्यवान् पुरुषो वेदतस्यतावदेवचिरं यावन्नविमोक्ष्येऽथस

(೧೨) (ಪರಂತು) ಅವನ ಕಣ್ಣು ಕಟ್ಟನ್ನು ಬಿಚ್ಚಿ ಕಂದಹಾರ (ಫಲಾಣೆ) ಈ ಕಡೆ ಉಂಟು, ಈ ಕಡೆ ಹೋಗು ಎಂದು ಯಾರಾದರೂ ಹೇಳಿದರೆ, ಅವನು ಹೇಗೆ ಗ್ರಾಮದಿಂದ ಗ್ರಾಮಕ್ಕೆ ಕೇಳಿಕೊ

म्यतस्य इति ॥ (६–१४–२)

ಳ್ಳುತ್ತಾ ಹೋಗಿ ತಿಳಕೊಂಡು, ಮರೆಯುದೆ, ಕಂದಹಾರವನ್ನೇ ಪ್ರಾಪಿಸ್ಯಾನೋ, ಹಾಗೆಯೇ ಈ ವಿಷಯದಲ್ಲಿಯೂ ಗುರವುಳ್ಳ ಪುರುಷನು (ಉಪದೇಶದಿಂದ) ತಿಳಿಯುತ್ತಾನೆ. ಅವಗೆ ವಿಮೋಚನೆ (ಮೋಕ್ಷ) ಆಗದೆ ಇರುವಷ್ಟು ಕಾಲ ಮಾತ್ರ ವಿಳಂಬ. ಅನಂತರ ಅವನು (ಬ್ರಹ್ಮ) ಸಂಪತ್ತಿಯನ್ನು ಪಡೆಯುವನು ಎಂತಲೂ;

(१३) स य एषोऽणिमैतदात्म्यमिदं सर्वं तत्सत्यं स आत्मा "तत्वमसि" श्वेतकेतो! इति ॥ × ॥ (६–१४–३)

(೧೩) ಈ ಯಾರು ಸೂಕ್ಷ್ಮನಾಗಿರುವನೋ ಇವನಿಂದ ಇದೆಲ್ಲ ಆತ್ಮವುಳ್ಳದ್ದಾಗಿದೆ. ಅದು ಸತ್ಯ, ಅವನು ಆತ್ಮನು; "ನೀನು ಅದೇ ಆಗಿರುವಿ" ಶ್ವೇತಕೇತು! ಎಂತಲೂ, (ಉದ್ದಾಲಕರು ಮಗನಿಗೆ ಉಪದೇಶಿಸಿದರು).

## VIIIನೇ ಪಾಠದ
# ವ್ಯಾಖ್ಯಾನ ಸಂಗ್ರಹ.

(I) ಈ ಪಾಠವು ಕಳೆದ VIIನೇದಕ್ಕೆ ಸಂಬಂಧಿಸಿದ್ದು. ಅದರಲ್ಲಿ ನಮ್ಮ ಹೃದಯಾಂತರ್ವರ್ತಿಯಾದ ಆಕಾಶನೆಂಬ ಆತ್ಮನು ದಹರ (ಅಲ್ಪ)ನಾಗಿ ತೋರಿದರೂ, ಹೊರಗಿರುವ ಆಕಾಶ ಎಷ್ಟು ವಿಸ್ತಾರವಾದದ್ದೋ ಅದಕ್ಕಿಂತಲೂ ಅಧಿಕ ವಿಸ್ತಾರವಾದವನೆಂತಲೂ, ಅವನಲ್ಲಿ ಈ ದ್ಯಾವಾ ಪೃಥಿವ್ಯಾದಿಗಳೆಲ್ಲ ಅಡಗಿಕೊಂಡಿವೆ, ಎಂತ ಸಹ ಹೇಳೋಣಾಯಿತು. ಈ ಪಾಠದಲ್ಲಿ (೧ನೇ) ಅವಗೆ ಅಣುತ್ವ ಮಹತ್ವ, (೨ನೇ) ಅವನೇ ಈ ಜಗತ್ ಸೃಷ್ಟಿ, ಸ್ಥಿತಿ, ಲಯಗಳಿಗೆ ಕರ್ತನು, ಎಂದು ಸಹ ಪ್ರತಿಪಾದನೆ ಮಾಡೋಣಾಗುವದಲ್ಲದೆ, (೩ನೇ) ಅವನ ಸ್ವರೂಪ ಮುಂತಾದವುಗಳು, (೪ನೇ) ಈ ಪುರುಷನ ಸ್ವಭಾವ ಮತ್ತು ಸ್ವರೂಪ ಸಹ ವಿವರಿಸೋಣಾಗುತ್ತದೆ.

### (೧)ನೇ ಸಂಗತಿಯ ಕುರಿತು.

೩, ೫, ೬, ೯ನೇ ಶ್ರುತಿಗಳಿಂದ ನಮ್ಮ ಆತ್ಮನು ಕಣ್ಣಿಗೆ ಕಾಣದಷ್ಟು ಸೂಕ್ಷ್ಮನಾಗಿರುವವನಾದರೂ, ಈ ದ್ಯಾವಾ ಪೃಥಿವ್ಯಾದಿಗಳಿಗಿಂತಲೂ ಸ್ಥೂಲನಾದವನೆಂದು ತಿಳದು

ಬರುತ್ತದೆ. ಈ ಸಂದರ್ಭದಲ್ಲಿ ೬—ನೇ ಶ್ರುತಿಗಳಲ್ಲಿ ಪ್ರಯೋಗಿಸಿರುವ एतस्य (ಇವನ) अत्रवावकिलसत् (ನಿಜವಾಗಿ ಇದರಲ್ಲಿಯೇ ಇರುವ) ಎಂಬ ಶಬ್ದಗಳಿಗೆ ಮಾಧ್ವರು ಹೇಳುವ ಅರ್ಥಕ್ಕೂ ಮಿಕ್ಕ ಎರಡು ಮತದವರು ಹೇಳುವ ಅರ್ಥಕ್ಕೂ ವ್ಯತ್ಯಾಸವಿದೆ.

एतस्य (ಇವನ) ಇದಕ್ಕೆ:—

यमेतमणिमानं । × । परमसूक्ष्मं परमात्मानं ननिभालयसे न पश्यसि अस्याणिम्नः सूक्ष्मभगवतः सामर्थ्यादेवं परिदृश्यमान प्रकारेण महान्यग्रोधास्तिष्ठति ॥ रा ॥ एतमणिमानं अतिसूक्ष्म बीजजीवं । यद्वापरमात्मानं ॥ × ॥ वे ॥

ಮಾಧ್ವರು (ಗೋಳೀ ಬೀಜದ ದೃಷ್ಟಾಂತದಲ್ಲಿ) ಅದರಲ್ಲಡಗಿರುವಂಥಾ ಪರಮ ಸೂಕ್ಷ್ಮನಾದ ಯಾವ ಆ ಬೀಜದ ಜೀವ ಅಥವಾ ಪರಮಾತ್ಮನು ನಿನಗೆ ಕಾಣುವದಿಲ್ಲವೋ, ಅವನ "ಸಾಮರ್ಥ್ಯದಿಂದ" ಆ ಪ್ರಕಾರ ತೋರುವ ಮಹತ್ತಾದ ಗೋಳೀ ವೃಕ್ಷವು (ಬೆಳದುಕೊಂಡು) ನಿತ್ತಿದೆ ಎಂದು ಅರ್ಥ ಹೇಳುತ್ತಾರೆ.

य मेतं वटबीजाणिमानं न निभालयसे न पश्यसि किमित्यर्थः। एषमहान्यग्रोधः एतस्यैवैषोऽणिम्नः कार्यतया तिष्ठतीत्यर्थः ॥ रं ॥

ರಾಮಾನುಜಾಚಾರ್ಯರು, ಯಾವ ವಟಬೀಜದಲ್ಲಿರುವ ಸೂಕ್ಷ್ಮನಾದವನು ನಿನಗೆ ತೋರುವದಿಲ್ಲವೋ (ಆ) ಈ ಅಣುವಾದವನ "ಕಾರ್ಯರೂಪವಾಗಿಯೇ" ಈ ಮಹತ್ತಾದ ವಟವೃಕ್ಷವು ಬೆಳದುಕೊಂಡುಂಟು ಎಂದು ಅರ್ಥ ಹೇಳುತ್ತಾರೆ.

एतस्यवैकिलसोम्य एषमहान्यग्रोधो बीजस्याणिम्नः सूक्ष्मस्यादृश्यमानस्य कार्यभूतस्थूलशाखास्कन्ध-फल-पलाशवांस्तिष्ठति उत्पतन्नुत्तिष्ठतीति वोच्छन्दोऽध्याहर्तव्यः ॥ शं ॥

ಶಂಕರಾಚಾರ್ಯರು, ಹೇ ಸೋಮ್ಯ (ಶ್ವೇತಕೇತು) ಈ ಕಾಣದೆ ಇರುವಂಥಾ (ಗೋಳಿ) ಬೀಜದ ಸೂಕ್ಷ್ಮಭಾವದ "ಕಾರ್ಯಭೂತವಾಗಿಯೇ" ಈ ಮಹತ್ತಾದ ಗೋಳೀ ವೃಕ್ಷವು, ತೋರವಾದ ಗೆಲ್ಲುಗಳು ಹಣ್ಣುಗಳು, ಎಲೆಗಳು, ಇವುಗಳ ಸಮೇತ ಬೆಳಕೊಂಡು ನಿಂತದೆ ಎಂದು ಅರ್ಥ ಹೇಳುತ್ತಾರೆ.

ಇನ್ನು अत्रवावकिलसत् (ನಿಜವಾಗಿ ಇದರಲ್ಲಿಯೇ ಇರುವ) ಇದಕ್ಕೆ:—

अत्रवावेति । एतमणिमानं सूक्ष्मलव णं यत्रननिफालयसे तल्लवणं अत्रैवोदकेसत् विद्यमानं किल । × । अनेन लवणगुणे र सेदृश्यमानेपि लवणं न दृश्यते । तथाहरेः सामर्थ्येदृश्यमानेपि न भगवान् इत्युक्तं भ वति ॥ रा ॥ सामर्थ्येदृश्यमानेपि भगवान् न दृश्यतइति भावः ॥ वे ॥

(ಈ ಸೇ ಶ್ರುತಿಯಲ್ಲಿ ಹೇಳುವ) ಈ ಸೂಕ್ಷ್ಮವಾದ ಲವಣವು ನಿನಗೆ ಎಲ್ಲಿ ಕಂಡು ಬರುವದಿಲ್ಲವೋ ಆ ಲವಣವು ಈ ನೀರಿನಲ್ಲಿಯೇ ನಿಶ್ಚಯವಾಗಿ ಇರುತ್ತದೆ. ಇದರಿಂದ ಉಪ್ಪಿನ ರುಚಿ ತಿಳಿದುಬರುವದಾದರೂ, ಉಪ್ಪು ಕಣ್ಣಿಗೆ ಕಾಣುವದಿಲ್ಲ. (ಹೇಗೋ) ಹಾಗೆ ಹರಿಯ ಸಾಮರ್ಥ್ಯವು ಕಂಡುಬರುವದಾದರೂ ಅವನು ಕಾಣುವದಿಲ್ಲ ಎಂದು ಹೇಳಲ್ಪಡುತ್ತದೆ ಎಂದು ಮಾಧ್ವರು—

रसनेन्द्रियोपलभ्यमानतया वस्तुतः स देवलवणं यथाचक्षुषात्वचा वा नोपलभसे ए वमेवात्रैव जगत्यन्तरात्मतया आगमाचा र्योपदेशादिनावगन्तुं योग्यमेव सच्छब्दितं ब्रह्म अत्रैवकिलवर्ततइति ननिभालयसेद्रष्टुं न शक्नोसि न पश्यसीत्यर्थः ॥ रं ॥

ರಸನೇಂದ್ರಿಯ ದ್ವಾರಾ ತಿಳಿದುಬರುವ ರೂಪದಲ್ಲಿ ವಾಸ್ತವಿಕವಾಗಿ ಇರುವ ಲವಣವು ಹೇಗೆ ದೃಷ್ಟಿಯಿಂದಾಗಲೀ ತ್ವಗಿಂದ್ರಿಯದಿಂದಾಗಲೀ ನೀನು ಕಂಡುಕೊಳ್ಳುವದಿಲ್ಲವೋ, ಹಾಗೆಯೇ ಈ ಜಗತ್ತಿನಲ್ಲಿಯೇ ಅಂತರಾತ್ಮರೂಪದಲ್ಲಿ, ಶಾಸ್ತ್ರಾಚಾರ್ಯೋಪದೇಶಾದಿಗಳಿಂದ ತಿಳಕೊಳ್ಳಲಿಕ್ಕೆ ಯೋಗ್ಯವಾಗಿರುವ ಸತ್ ಶಬ್ದವಾಚ್ಯವಾದ ಬ್ರಹ್ಮವು ನಿಶ್ಚಯವಾಗಿ ಇದರಲ್ಲಿ (ಈ ಜಲದಲ್ಲಿ) ಇರುವದರಿಂದ (ಅದನ್ನು) ಕಾಣಲಿಕ್ಕೆ ನೀನು ಸಮರ್ಥನಾಗಿರುವದಿಲ್ಲ (ಎಂದರೆ) ನಿನಗೆ ಕಾಣುವದಿಲ್ಲ ಎಂದು ಅರ್ಥವಾಗಿರುತ್ತದೆಂದು ರಂಗರಾಮಾನುಜಾಚಾರ್ಯರು;

यथात्रैवउदके दर्शनस्पर्शनाभ्यामनुप लभ्यमानं लवणं विद्यमानमेव जिव्हयोपल ब्धवानसि एवमेवात्रैवाकिल विद्यमानं सत् जगन्मूलं उपायान्तरेण लवणमिवतदुपल प्स्यसइति वाक्यशेषः ॥ शं ॥

ಹೇಗೆ ಈ ನೀರಿನಲ್ಲಿಯೇ ದರ್ಶನ ಸ್ಪರ್ಶಗಳ ಮೂಲಕವಾಗಿ ಕಂಡುಬಾರದೆ ಇರುವ ಉಪ್ಪು ವಾಸ್ತವಿಕವಾಗಿ ಇರುವ ಸಂಗತಿ ನಾಲಿಗೆಯಿಂದ ನೀನು ತಿಳಕೊಂಡೆಯೋ, ಅದೇ ರೀತಿ ಇದರಲ್ಲಿಯೇ ನಿಜವಾಗಿ ವಿದ್ಯಮಾನವಾಗಿರುವ, ಜಗತ್ತಿಗೆ ಕಾರಣಭೂತವಾದ ವಸ್ತುವನ್ನು, ಉಪ್ಪಿನಂತೆಯೇ, ಉಪಾಯಾಂತರದಿಂದ ನೀನು ಕಂಡುಕೊಳ್ಳುವಿ ಎಂದು ವಾಕ್ಯದ ತಾತ್ಪ

ರ್ಯರಾಗಿರುತ್ತದೆಂದು ಶಂಕರಾಚಾರ್ಯರು

ಸಹ ಹೇಳುತ್ತಾರೆ.

## (೨ನೇ) ಸಂಗತಿಯ ಕುರಿತು.

सर्वं समस्तं । खल्विति वाक्यालंकारार्थो निपातः । इदं जगत् नामरूपविकृतं प्रत्यक्षादिविषयं ब्रह्मकारणं । वृद्धतमत्वाद्ब्रह्म । कथं सर्वस्य ब्रह्मत्वमित्यत आह "तज्जलानिति" । तस्माद्ब्रह्मणोजातं तेजोऽबन्नादिक्रमेण सर्वं अतस्तज्जं । तथातेनैव जननक्रमेण प्रतिलोमतयातस्मिन्नेवब्रह्मणि लीयते तदात्मतयाश्लिष्यत इतितल्लं । तथा तस्मिन्नेव स्थितिकाले अनिति प्राणिति चेष्टतइति । तस्माच्च सर्वमिदं ब्रह्म । अतः शान्तः रागद्वेषादिदोषरहितः संयतः सन् । × । उपासीत ॥ शं ॥

ಶಂಕರಾಚಾರ್ಯರು, ಪ್ರತ್ಯಕ್ಷಾದಿ ಪ್ರಮಾಣಗಳಿಗೆ ವಿಷಯವಾದಂಥಾ, ನಾಮರೂಪವಿಕಾರಾತ್ಮಕವಾದ ಈ ಸಮಸ್ತ ಜಗತ್ತು ಕಾರಣರೂಪವಾದ ಬ್ರಹ್ಮ. ಅತ್ಯಂತ ವಿಸ್ತಾರವಾದಂಥಾದಾಗಿರುವ ಪ್ರಯುಕ್ತ (ಅದಕ್ಕೆ) ಬ್ರಹ್ಮವೆಂದು ಹೇಳುವದು. ಸಕಲಕ್ಕೂ ಬ್ರಹ್ಮತ್ವ ಹೇಗೆ? ಎಂದರೆ ಸರ್ವವೂ ತೇಜೋಬನ್ನಾದಿ ಕ್ರಮದಲ್ಲಿ ಅದರ ದೆಸೆಯಿಂದ ಹುಟ್ಟಿದ್ದಾಗಿರುತ್ತದೆ. ಆದ್ದರಿಂದ तज्ज (ತಜ್ಜಂ) ಇದೆಲ್ಲ "ಅದರಲ್ಲಿ ಆರಂಭವಾಗಿರುತ್ತದೆ." ಹಾಗೆಯೇ ಹುಟ್ಟಿದಂತೆಯೇ ಪ್ರತಿಲೋಮ (ವಿಪರೀತ) ಕ್ರಮದಲ್ಲಿ ಅದೇ ಬ್ರಹ್ಮದಲ್ಲಿ ಐಕ್ಯ ಎಂದರೆ ಅದೇಯಾಗಿ ಸೇರಿಕೊಳ್ಳುತ್ತದೆ. ಆದ್ದರಿಂದ तल्लम् (ತಲ್ಲಂ) ಅದರಲ್ಲಿ ಲಯವಾಗುತ್ತದೆ." ಅದೇ ರೀತಿ ಇಲ್ಲಿರುವಾಗ ಅದರಲ್ಲಿಯೇ ಬದುಕಿಕೊಂಡುಂಟು. ಆದ್ದರಿಂದ तदन् (ತದನ್) "ಅದರಲ್ಲಿ ಜೀವನಮಾಡುತ್ತದೆ". ಆದಕಾರಣ ಇದೆಲ್ಲ ಬ್ರಹ್ಮವೇ ಆಗಿರುವದರಿಂದ, (ಉಪಾಸಕನು) ರಾಗದ್ವೇಷಾದಿಗಳನ್ನು ಬಿಟ್ಟು ತನ್ನ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡು, ಅದರನ್ನು ಉಪಾಸಿಸಬೇಕು ಎಂದು ವ್ಯಾಖ್ಯಾನಮಾಡಿರುತ್ತಾರೆ

जायतइतिजं । लीयतइतिलं । × । अनितीत्यन् अनिति जीवतीत्यर्थः । × । तस्य जलान् तज्जलान् । इतिर्हेत्वर्थः । सर्वशब्दः सर्वशरीरकपरः इदमित्येतद्ब्रह्मणः सर्वस्यवा विशेषणं । अतश्च तज्जत्वात्तल्लत्वात्तदनत्वा

ರಂಗರಾಮಾನುಜಾಚಾರ್ಯರು, ಬ್ರಹ್ಮವು ಸರ್ವಾತ್ಮಕವಾದದ್ದೆಂದು ಶಾಂತಚಿತ್ತದಿಂದ ಧ್ಯಾನಿಸಬೇಕು. ಯಾಕಂದರೆ, ಈ ಸಮಸ್ತ ಚರಾಚರ ಪ್ರಪಂಚವು ಅದರ ಮೂಲಕವಾದದ್ದು, ಅದನ್ನುಹೊಂದಿಕೊ

त्सर्वात्मकं ब्रह्मेति शान्तः सन्नुपासीतेत्यर्थः ॥ रं ॥

ಳ್ಳುತ್ತದೆ; ಅದರ ಬಲದಿಂದ ಬದುಕಿಕೊಂಡುಂಟು ಎಂದು ವಿವರಿಸುತ್ತಾರೆ.

ಮಾಧ್ವರು ೧ನೇ ಶ್ರುತಿಯಲ್ಲಿರುವ तज्जलान् (ತಜ್ಜಲಾನ್) ಎಂಬ ವಾಕ್ಯಕ್ಕೆ ಪ್ರಪಂಚವು ಬ್ರಹ್ಮದ ದೆಸೆಯಿಂದುಂಟಾಗಿ ಇದೆ; ಅದರಲ್ಲಿ ಲಯವಾಗುತ್ತದೆ; ಅದರಲ್ಲಿ ಜೀವಿಸಿಕೊಂಡುಂಟು ಎಂದು ಇತರರು(ಶಂಕರಾಚಾರ್ಯರು)ಹೇಳುವ ಅರ್ಥವು *ಕೆಳಗೆ ಕಾಣಿಸಿದ ಋಚಗಳಿಗೆ ವಿರುದ್ಧವಾದದ್ದು. ಆ ವಾಕ್ಯದ ನಿಜವಾದ ಅರ್ಥವು:—

सर्वान्तः स्थितत्वेनातिसामीप्यादिदमित्युक्तं विष्ण्वाख्यं ब्रह्म । सर्वं गुणपूर्णं । खलुप्रसिद्धं । तद्ब्रह्मजलान् जले प्रळयोदकेऽनिति चेष्टमानमास्ते इति शान्तोऽधिकारीउपासीत विद्यात् ॥ रा ॥ ब्रह्म हृदयगतं यत्परं ब्रह्म । इदं हृदयगत्वादेवातिसमीपगं । × । तज्जलानिति जले अनिति चेष्टते इति शान्तो भगवन्निष्ठबुद्धिः उपासीत ॥ वे ॥

ಎಲ್ಲರ ಹೃದಯದೊಳಗೂ ಇರುವ ಕಾರಣ (ಎಲ್ಲರಿಗೂ) ಅತಿ ಸಮೀಪವಾಗಿರುವ "ಈ" ಎಂಬ ಶಬ್ದದಿಂದ ಹೇಳಲ್ಪಟ್ಟ ವಿಷ್ಣುನಾಮಕವಾದ ಬ್ರಹ್ಮವು "ಸರ್ವಂ" (ಎಂದರೆ) ಗುಣಪೂರ್ಣವಾದದ್ದು. ಅದು ಪ್ರಳಯೋದಕದಲ್ಲಿ ವಿಹಾರಮಾಡಿಕೊಂಡುಂಟು ಎಂದು ಅಧಿಕಾರಿಯಾದವನು (ಭಗವನ್ನಿಷ್ಟ ಬುದ್ಧಿಯುಳ್ಳವನು) ಉಪಾಸಿಸಬೇಕೆಂದು ಆಗಿರುತ್ತದೆ.

ಎಂದು ಹೇಳುತ್ತಾರೆ.

### (೩)ನೇ ಸಂಗತಿಯ ಕುರಿತು.

ಈ ವಿಷಯವು ಎರಡು ಖಂಡಗಳಾಗಿ ವಿಭಾಗಿಸ ಬಹುದೆಂದು ತೋರುತ್ತದೆ. (೧)ನೇ ಆತ್ಮನ ಸ್ವರೂಪದ ಕುರಿತು, (೨)ನೇ ಅವನ ಸ್ವಭಾವದ ಕುರಿತು ಸಹ ಆಗಿರುತ್ತದೆ.

---

*आनीदवातं स्वधयातदेकं तस्माद्धान्यन्नपरः किञ्चनास ॥ २॥

तम आसी त्तमसागूळ्ह मग्रे अप्रकेतं सलिलं सर्वमाइदं ॥ ३ ॥

ऋ वे० । १०—१२९ ॥

ಆದರೆ ಇದು ಅಸಂದಿಗ್ಧ ಪ್ರಮಾಣವಾಗಿ ತೋರುವದಿಲ್ಲ. ಸಾಯನಾಚಾರ್ಯರ ಭಾಷ್ಯ (ಮತ್ತು) ತೈ. ಉ. ಭೃಗುವಲ್ಲಿ ೧ ಸಹ ನೋಡು.

## (೧) ಆತ್ಮನ ಸ್ವರೂಪ.

मनोमयः । प्राणशरीरः । भारूपः । आकाशात्मा । सर्वमिदमभ्यात्तः । अवाकी ॥

## (೨) ಆತ್ಮನ ಸ್ವಭಾವ.

सत्यसङ्कल्पः । सर्वकर्मा । सर्वकामः ॥ सर्वगन्धः । सर्वरसः । अनादरः ॥

### (೧)ನೇ ಆತ್ಮನ ಸ್ವರೂಪದ ಕುರಿತು.

ಮಾಧ್ವರು ಈ ೧ನೇ ಗಣದಲ್ಲಿ ಅಂತ್ಯದಲ್ಲಿರುವ अवाकी (ಅವಾಕೀ) ಶಬ್ದವನ್ನು ೨ನೇ ಗಣದ ಅಂತ್ಯದಲ್ಲಿರುವ अनादरः (ಅನಾದರಃ) ಎಂಬದಕ್ಕೆ ಕೂಡಿಸಿ अवाक्यः नादरः (ಅವಾಕ್ಯಃ ನಾದರಃ) ಎಂದು ಪದಗಳನ್ನು ಮಾಡಿ ಆ ಪೈಕಿ ಮೊದಲನೇದಕ್ಕೆ—

अवाक्यः लौकिकइव निरर्थकवाक्य रहितः । रा । न विद्यते अनुग्रहमन्तरेण वाक्यं यस्यसोऽवाक्यः ॥ वे ॥

ಒಬ್ಬ ಸಾಧಾರಣ ಮನುಷ್ಯನಂತೆ ನಿಷ್ಪ್ರಯೋಜನವಾಗಿ, (ಅಥವಾ) ತನ್ನ ದಯ ಉಂಟಾಗದೆ, ಮಾತನಾಡದವನು ಎಂದು ಅರ್ಥಹೇಳುತ್ತಾರೆ.

वाकः उक्तिः सोऽस्यनास्तीत्यवाकी ॥ रं ॥

ರಾಮಾನುಜಾಚಾರ್ಯರು अवाकी (ಅವಾಕೀ) ಎಂತಲೆ ಇಟ್ಟುಕೊಂಡು ಮಾತಿಲ್ಲದವನೆಂತಲೂ,

अवाकी उच्यतेऽनयेतिवाक् वागेववाकः । यद्वा वचेर्घञन्तस्यकरणे वाकः सयस्य विद्यते सवाकी नवाकी अवाकी । वाक् प्रतिषेधश्चात्रोपलक्षणार्थः । गन्धरसादिश्रवणात् ईश्वरस्यप्राप्तानि घ्राणादीनि करणानि गन्धादिग्रहणाय । अतोवाक् प्रतिषेधेन प्रतिषिध्यन्तेतानि ॥ शं ॥

ಶಂಕರಾಚಾರ್ಯರು, ಕರಣರೂಪವಾದ "ವಾಕ" ಎಂದರೆ ವಾಗಿಂದ್ರಿಯ. ಅದು ಇಲ್ಲದವನಾದ ಪ್ರಯುಕ್ತ ಅವಾಕೀ ಎಂತಲೂ, ಇಲ್ಲಿ ವಾಗಿಂದ್ರಿಯವನ್ನು ನಿಷೇಧಿಸಿದ್ದು ಉಪಲಕ್ಷಣಕ್ಕೋಸ್ಕರವಾಗಿರುತ್ತದೆ. ಪ್ರಸ್ತುತ ೨ನೇ ಶ್ರುತಿಯಲ್ಲಿ ಗಂಧ ರಸ ಮೊದಲಾದವುಗಳ ಪ್ರಸ್ತಾಪ ಕೂಡಾ ಇರುವದರಿಂದ ಅವುಗಳನ್ನು ಸ್ವೀಕಾರ ಮಾಡುವ ಬಗ್ಗೆ ಘ್ರಾಣ (ಮೂಗು) ಮೊದಲಾದ ಕರಣಗಳು ಈಶ್ವರಗೆ ಪ್ರಾಪ್ತವಾದವು; ಆದಕಾರಣ ವಾಗಿಂದ್ರಿಯ ನಿಷೇ

ಧವಮೂಲಕವಾಗಿ (ಅ) ಘ್ರಾಣಾದಿ ಇಂದ್ರಿಯಗಳು ಕೂಡಾ ನಿಷೇಧಿಸಲ್ಪಡುತ್ತವೆ, ಎಂದು ಸಹ ಹೇಳುತ್ತಾರೆ.

ಆದ್ದರಿಂದ ಪ್ರತಿಲೋಮ ಕ್ರಮದಲ್ಲಿ ನಾವು ಹೀಗೆಯೇ ವಿಚಾರಿಸುತ್ತಾ ಹೋದರೆ ೧ನೇ ಗಣದಲ್ಲಿ ಇನ್ನು ನಮಗೆ ಮೊದಲು ಸಿಕ್ಕುವದು:—

॥ सर्वमिदमभ्यात्तः ॥ ಈ ವಾಕ್ಯಕ್ಕೆ:—

[ सर्वमिदं जगदभ्यात्तः अभिव्याप्तः । अततेर्व्याप्त्यर्थस्य कर्तरिनिष्ठा । शं । कर्मणि निष्ठां व्यावर्त्तयति । आ । उक्तं सर्वमिदं कल्याणगुणजातमभ्यात्तः स्वीकृतवान् । × । कर्तरिक्तप्रत्ययः । अर्शआद्यजन्तोवा । रं । सर्वमिदं जगत्प्राप्तः । रा । सर्वमिदमभि अभितः आत्तोधृतः स्थितइतिवा ॥ वे ॥

ಶಂಕರಾಚಾರ್ಯರು ಈ ಜಗತ್ತನ್ನೆಲ್ಲ ವ್ಯಾಪಿಸಿಕೊಂಡು ಇರುವವನೆಂತಲೂ, ರಾಮಾನುಜಾಚಾರ್ಯರು(ಈಗ) ಹೇಳಿದ ಸಕಲ ಕಲ್ಯಾಣಗುಣಗಳನ್ನು ಸ್ವೀಕರಿಸಿದವನೆಂತಲೂ, ಮಾಧ್ವರು ಈ ಸಕಲ ಜಗತ್ತನ್ನು ಪ್ರಾಪಿಸಿ (ಧರಿಸಿ)ದವನು, ಅಥವಾ (ಅದರಲ್ಲಿ) ಇರುವವನೆಂತಲೂ, ಅರ್ಥ ಹೇಳುತ್ತಾರೆ.

आकाशात्मा. (ಆಕಾಶಾತ್ಮ.)

आकाश इवात्मास्वरूपं यस्य स आकाशात्मा । सर्वगतत्वं सूक्ष्मत्वं रूपादि हीनत्वञ्चाकाशतुल्यतेश्वरस्य ॥ शं ॥ आकाशवत् सूक्ष्मः स्वच्छस्वरूपः । सकलेतरकारणभूतस्याव्याकृताकाशस्यात्मभूतइतिवा आकाशात्मा । स्वयञ्चप्राकशते अन्यांश्च प्रकाशयतीतिवा आकाशात्मा ॥ रं ॥ आसमन्तात् काशते दीप्यत इत्याकाशः । रा । काशनञ्चात्रज्ञानं विवक्षितमिति न भारूप इत्यनेन पौनरुक्त्यमितिध्येयं । आत्माआदा नादिकर्ता ॥ वे ॥

ಆಕಾಶಾತ್ಮನೆಂದರೆ ಆಕಾಶದಂತೆ ಸ್ವರೂಪ ಉಳ್ಳವ. ಸರ್ವಗತತ್ವ, ಸೂಕ್ಷ್ಮತ್ವ, ಆಕಾರ ಮೊದಲಾದವುಗಳು ಇಲ್ಲದೆ ಇರೋಣ, ಇವುಗಳೇ ಈಶ್ವರಗೆ ಆಕಾಶಸಮತ್ವವಾಗಿರುತ್ತದೆಂದು ಶಂಕರಾಚಾರ್ಯರು; ಆಕಾಶದಂತೆ ಸ್ವಚ್ಛ ಸ್ವರೂಪ ಉಳ್ಳವನು; ಅಥವಾ ಇತರ ಸಕಲ ವಸ್ತುಗಳಿಗೂ ಕಾರಣಭೂತವಾದ ಅವ್ಯಾಕೃತಾಕಾಶಕ್ಕೆ ಸ್ವರೂಪಭೂತನಾದವನು; ಅಥವಾ ತಾನು ಸ್ವತಃ ಪ್ರಕಾಶಿಸುತ್ತಲಿದ್ದಾನೆ; ಇತರ ವಸ್ತುಗಳನ್ನು ಪ್ರಕಾಶಿಸು

ತ್ತಾನೆ, (ತೋರಿಸಿಕೊಡುತ್ತಾನೆ) ಆದಕಾರಣ ಆಕಾಶಸ್ವರೂಪನೆಂದು (ಹೇಳುವದೆಂದು) ರಾಮಾನುಜಾಚಾರ್ಯರು; ಮಾಧ್ವರಲ್ಲಿ ಒಬ್ಬರು ತೀರಾ ಪ್ರಕಾಶಿಸುತ್ತಿರುವವನೆಂತಲೂ, ಇನ್ನೊಬ್ಬರು ಇಲ್ಲಿ ಆಕಾಶಶಬ್ದದಿಂದ ಜ್ಞಾನವು ನಿರೀಕ್ಷಿಸಲ್ಪಟ್ಟಿದೆ; ಆದ್ದರಿಂದ ವಕ್ಷ್ಯಮಾಣ ಭಾ(ಪ್ರಕಾಶ) ರೂಪ ಎಂಬುದು ಪುನರುಕ್ತಿಯಲ್ಲ. ಆತ್ಮ ಎಂದರೆ "ಆ ದಾನಾದಿ ಕರ್ತಾ" ಎಂದು ಅರ್ಥವೆಂದು ಹೇಳುತ್ತಾರೆ. ಈ ಪಕ್ಷದಲ್ಲಿ ಆಕಾಶಾತ್ಮನೆಂದರೆ ಸಂಪೂರ್ಣಜ್ಞಾನಿ ಮತ್ತು ಸೃಷ್ಟಿಸಂಹಾರಕರ್ತನೆಂದು ಅರ್ಥವಾಗಿರುತ್ತದೆ.

## भारूपः (ಭಾರೂಪ)

भादीप्तिश्चैतन्यलक्षणं रूपं यस्य स भारूपः । शं । भास्वररूपः । × । अप्राकृतस्वासाधारणनिरतिशयकल्याणगुणगणनिरतिशयदीप्तियुक्तविग्रहशालीत्यर्थः । रं । भारूपः प्रकाशरूपः । रा । भारूपोदीप्तिरूपः ॥ वे ॥

ಭಾರೂಪನೆಂದರೆ ಚೈತನ್ಯಲಕ್ಷಣವಾದಂಥಾ ಕಾಂತಿರೂಪ ಉಳ್ಳವನೆಂದು ಶಂಕರಾಚಾರ್ಯರು; ಅಪ್ರಾಕೃತವಾದಂಥಾ ತನ್ನ ಅಸಾಧಾರಣವಾದ ನಿರತಿಶಯ ಕಲ್ಯಾಣಗುಣ ಸಮೂಹ, ನಿರತಿಶಯ ಕಾಂತಿಯುಕ್ತವಾಗಿರುವ ದೇಹವುಳ್ಳವನೆಂದು ಅರ್ಥವೆಂದು ರಾಮಾನುಜಾಚಾರ್ಯರು; ಪ್ರಕಾಶ, ಕಾಂತಿ ರೂಪವುಳ್ಳವನೆಂದು ಮಾಧ್ವರು;—

## प्राणशरीरः (ಪ್ರಾಣಶರೀರ.)

प्राणः लिंगात्मा विज्ञानक्रिया शक्तिद्वयसंमूर्च्छितः । × । सःशरीरं यस्य स प्राणशरीरः । शं । जगति सर्वेषां प्राणानां धारकः प्राणो यस्य शरीरं । रं । बलशरीरः । वे ।

ಪ್ರಾಣಶರೀರನೆಂದರೆ ವಿಜ್ಞಾನ (ಬುದ್ಧಿಚಾತುರ್ಯ) ಮತ್ತು ಕ್ರಿಯಾ (ಉದ್ಯೋಗ) ಈ ಎರಡು ತರಹದ ಶಕ್ತಿಗಳೂ ಒಟ್ಟು ಕೂಡಿರುವ ಲಿಂಗ (ಸೂಕ್ಷ್ಮವಾದ, ನಕ್ಷತ್ರದ ಹಾಗಿನ) ಶರೀರವುಳ್ಳವನೆಂದು ಶಂಕರಾಚಾರ್ಯರು;—ಸಕಲ ಪ್ರಾಣಿಗಳ ಪ್ರಾಣಗಳಿಗಾಧಾರವಾದ ಪ್ರಾಣವು ಶರೀರವಾಗಿ ಉಳ್ಳವನು ಯಾರೋ, ಅವನು ಪ್ರಾಣಶರೀರನೆಂದು ರಾಮಾನುಜಾಚಾರ್ಯರು; ಬಲಶರೀರನೆಂದು ಮಾಧ್ವರು.

## मनोमयः (ಮನೋಮಯ.)

मनोमयः मनः प्रायः । मनुतेऽनेनेति

ಮನೋಮಯನೆಂದರೆ ಮನಸ್ಸೇ ಅಧಿ

मनः । तत्स्ववृत्याविषयेषु प्रवृत्तं भवति । तेनमनसातन्मयः तथाप्रवृत्तइव तन्मायो निवृत्तइव च । शं । मनोमयः परिशुद्धमनोमात्रग्राह्यः । विवेकादिसाधनसप्तकानुगृहीतपरमात्मोपासननिर्मलीकृतमनोमात्रग्राह्यइत्यर्थः । रं । पूर्णज्ञानः । रा । महाज्ञानात्मकः ॥ वे ॥

ಕವಾಗಿ ಉಳ್ಳವನು. ಯಾವದು ಚಿಂತಿಸುತ್ತದೋ ಅದಕ್ಕೆ ಮನಸ್ಸೆಂದು ಹೇಳುವದು. ಅದು ತನ್ನಿಷ್ಟಕ್ಕೆ ತಾನೇ ವಿಷಯಗಳಲ್ಲಿ ಪ್ರವೃತ್ತವಾಗುತ್ತದೆ. ಅಂಥಾ ಮನಸು ಹೆಚ್ಚಾಗಿ ಇರುವ ಕಾರಣ ಅದು (ವಿಷಯಗಳಲ್ಲಿ) ಪ್ರವೃತ್ತವಾದರೆ ಇವನೂ ಪ್ರವೃತ್ತಿಮಾಡಿದಂತೆ ತೋರುವದು; ಅದು ಅವುಗಳಿಂದ ಹಿಂದೆ ಸರಿದರೆ, ಇವನೂ ಹಾಗೆ ತೋರುವದರಿಂದ ಮನೋಮಯನೆಂದು ಹೇಳುವದೆಂದು ಶಂಕರಾಚಾರ್ಯರು; ಪರಿಶುದ್ಧವಾದ ಮನಸ್ಸಿನಿಂದ ಮಾತ್ರ ತಿಳಿಯಲ್ಪಡತಕ್ಕವನು:—ಎಂದರೆ ವಿವೇಕ* ಮೊದಲಾದ ೭ ತರಹದ ಉಪಾಯ ಪುರಸ್ಸರವಾದ ಪರಮಾತ್ಮೋಪಾಸನದಿಂದ ಶುಚಿತ್ವವನ್ನು ಪಡದಂಥಾ, ಮನಸ್ಸಿನಿಂದ ಮಾತ್ರ ತಿಳಿಯಲ್ಪಡತಕ್ಕವನೆಂದು ಅರ್ಥವೆಂದು ರಾಮಾನುಜಾಚಾರ್ಯರು; ಪೂರ್ಣ ಜ್ಞಾನವುಳ್ಳವನು, ಮಹಾ ಜ್ಞಾನಾತ್ಮ(ಜ್ಞಾನಸ್ವರೂಪ ಉಳ್ಳವ)ನೆಂದು ಮಾಧ್ವರು—

ಸಹ ಅರ್ಥಗಳನ್ನು ಹೇಳುತ್ತಾರೆ,

## (೨ನೇ) ಆತ್ಮನ ಸ್ವಭಾವದ ಕುರಿತು.

### सत्यसङ्कल्पः (ಸತ್ಯಸಂಕಲ್ಪ)

सत्याः अवितथाः सङ्कल्पा यस्य सोऽयं सत्यसंकल्पः । नयथा संसारिण इवानैकान्तिकफलः संकल्प ईश्वरस्येत्यर्थः । शं । अप्रति

ಸತ್ಯಸಂಕಲ್ಪನೆಂದರೆ—ಯಾವವನ ನಿರ್ಣಯಗಳು ಮಿಥ್ಯವಾದವುಗಳಲ್ಲವೋ, ಅವನು ಸತ್ಯಸಂಕಲ್ಪನು, ಎಂದರೆ ಒಬ್ಬ

---

* (೧) ವಿವೇಕ. ಪರರ ದೃಷ್ಟಿಯಿಂದ ಅಶುಚಿಯಾಗದಿದ್ದ ಆಹಾರ ಸ್ವೀಕಾರ ಮಾಡೋಣ. (೨) ವಿಮೋಕ. ವಿಷಯಲಂಪಟ ಹೀನನಾಗಿರೋಣ. (೩) ಅಭ್ಯಾಸ. ಪುನಃ ಪುನಃ ಆವರ್ತಿ ಮಾಡೋಣ. (೪) ಕ್ರಿಯಾ. ಶ್ರೌತ ಸ್ಮಾರ್ತ ಕರ್ಮಾನುಷ್ಠಾನ. (೫) ಕಲ್ಯಾಣ. ಸತ್ಯ, ಆರ್ಜವ (ಏಕೀನಿ), ದಯಾ, ದಾನಾದಿಗಳು. (೬) ಅನವಸಾದ. ದೈನ್ಯವಡದೆ ಇರೋಣ. (೭) ಅನುದ್ಧರ್ಷ. ಸಂತುಷ್ಟಿ. ಇವುಗಳೇ ವಿವೇಕಾದಿಗಳು. ಸ.ಸಂ.೫೯.

हतसङ्कल्पः । रं । अबाधितसङ्कल्पः । रा । सफलसङ्कल्पः ॥ वे ॥

ಸಂಸಾರಿಯ ನಿರ್ಣಯಗಳು. ಸಫಲವಾಗದೆ ವ್ಯರ್ಥವಾಗುವಂತೆ ಈಶ್ವರನ ನಿರ್ಣಯಗಳು ಸಫಲವಾಗದೆ ಇರುವಂಥವುಗಳಲ್ಲೆಂದು ಅರ್ಥವಾಗಿರುತ್ತದೆಂದು ಶಂಕರಾಚಾರ್ಯರು; ಭಗ್ನವಾಗದೆ ಇರುವಂಥಾ ಸಂಕಲ್ಪ ಉಳ್ಳವನೆಂದು ರಾಮಾನುಜಾಚಾರ್ಯರು; ಬಾಧಕರಹಿತವಾದ ಯಾನೆ ಫಲಿಸುವಂಥಾ ಸಂಕಲ್ಪ ಉಳ್ಳವನೆಂದು ಮಾಧ್ವರು;

## सर्वकर्मा (ಸರ್ವಕರ್ಮ.)

सर्वं विश्वं तेनेश्वरेण क्रियतइति जगत्सर्वं कर्मास्येति सर्वकर्मा । शं । क्रियत इति कर्म सर्वं जगद्यस्य कर्मासौ सर्वकर्मा । सर्वाचाक्रिया यस्याराधनं असौसर्वकर्मा ॥रं॥ सर्वकारणशक्तिरूपः । रा । तत्तन्नियामकतया सर्वकर्मकर्त्ता ॥ वे ॥

ಸರ್ವ ಎಂದರೆ ಜಗತ್. ಅದು ಈಶ್ವರನಿಂದ ಉಂಟುಮಾಡಲ್ಪಡುತ್ತದೆ. ಆದ್ದರಿಂದ ಈ ಜಗತ್ತೆಲ್ಲ ಯಾರಿಂದ ನಿರ್ಮಾಣವಾಗಿ ಇದೆಯೋ ಅವನು ಸರ್ವಕರ್ಮನು ಎಂದು ಶಂಕರಾಚಾರ್ಯರು; ಕರ್ಮ ಎಂದರೆ ಮಾಡೋಣ. ಸಕಲ ಜಗತ್ತು ಯಾರ ಕೆಲಸವೋ ಅವನು ಸರ್ವಕರ್ಮನು, ಅಥವಾ ಸಕಲ ಕೆಲಸಗಳು ಯಾರ ಪೂಜೆಯೋ, ಅವನು ಸರ್ವಕರ್ಮನು ಎಂದು ರಾಮಾನುಜಾಚಾರ್ಯರು; ಸರ್ವಕಾರಣಶಕ್ತಿರೂಪ, (ಅಥವಾ ಆಯಾ) ಪ್ರಾಣಿಯಲ್ಲಿ ನಿಯಾಮಕನಾಗಿದ್ದುಕೊಂಡು ಸಕಲ ಕೆಲಸಗಳನ್ನು ಮಾಡುವವನು ಸರ್ವಕರ್ಮನೆಂದು ಮಾಧ್ವರು;

## सर्वकामः (ಸರ್ವಕಾಮ)

सर्वेकामाः दोषरहिता अस्येति सर्वकामः । शं । काम्यन्तइतिकामाः भोग्यभोगोपकरणादयः तेपरिशुद्धास्तस्य सन्तीत्यर्थः । रं। सर्वविषयेच्छावान् ॥ रा ॥ काम्यन्तइति कामाः द्रव्याणि ॥ वे ॥

ಸರ್ವ ಇಚ್ಛೆಗಳೂ ದೋಷರಹಿತವಾದವು ಯಾರದ್ದೋ ಅವನು ಸರ್ವಕಾಮನು ಎಂದು ಶಂಕರಾಚಾರ್ಯರು; ಕಾಮುಗಳು ಎಂದರೆ ಇಚ್ಛಿಸಲಿಕ್ಕೆ ಯೋಗ್ಯವಾದ ವಸ್ತುಗಳು, ಭೋಗ್ಯ ಭೋಗೋಪಕರಣ ಮೊದಲಾದವುಗಳು, ಇವು ಯಾರದ್ದು ಪರಿಶುದ್ಧವಾದವುಗಳೋ ಅವನು ಸರ್ವಕಾಮನು ಎಂದು ರಾಮಾನುಜಾಚಾರ್ಯರು; ಸರ್ವವಿಷಯೇಚ್ಛೆ ಉಳ್ಳವನು. ಕಾಮ

ಗಳೆಂದರೆ ಅಪೇಕ್ಷಿಸಲ್ಪಡುವ ದ್ರವ್ಯಗಳು, (ಅವುಗಳು)ಳ್ಳವನೆಂದು ಮಾಧ್ವರು;

|| सर्वगन्धः । सर्वरसः || (ಸರ್ವಗಂಧ, ಸರ್ವರಸ.)

सर्वगन्धाः सुखकरा अस्य सोऽयं सर्व गन्धः । तथारसा अपिविज्ञेयाः । शं । अप्राकृताः स्वासाधारणाः निरवद्याः निरतिशयाः कल्याणाः स्वभोग्यभूताः सर्वविधागन्धरसास्तस्यसन्तीत्यर्थः । रं । सर्वशुभगन्धरूपः । सर्वशुभरसरूपः । रा । गन्धरसशब्दौ गुणान्तर स्याप्युपलक्षकौ ॥ वे ॥

ಸುಖಕರಗಳಾದ ಸರ್ವ ಪರಿಮಳಗಳುಳ್ಳವನಾದ ಕಾರಣ "ಸರ್ವಗಂಧ ಉಳ್ಳವನು." ರಸ (ರುಚಿ)ಗಳ ವಿಷಯದಲ್ಲಿಯೂ ಹೀಗೆಯೇ ತಿಳಿಯತಕ್ಕದಾಗಿರುತ್ತದೆ. (ಅದ್ದರಿಂದ ಸುಖಕರಗಳಾದ) "ಸರ್ವರಸಗಳುಳ್ಳವನು" ಎಂದು ಶಂಕರಾಚಾರ್ಯರು; ಅಪ್ರಾಕೃತವಾದಂಥಾ ಅವನ ಮಾತ್ರಿಗೆ ಮಾತ್ರವಾಗಿಯೂ, ನಿಂದಿತವಲ್ಲದೆಯೂ, ನಿರತಿಶಯುವಾಗಿಯೂ, ಮಂಗಳಕರವಾಗಿಯೂ, ಅವನ ಭೋಗಕ್ಕೆ ಯೋಗ್ಯವಾದವುಗಳಾಗಿಯೂ ಇರುವ ಸಕಲ ತರಹದ ಗಂಧರಸಗಳುಳ್ಳವನೆಂದು ರಾಮಾನುಜಾಚಾರ್ಯರು; ಸರ್ವ ಶುಭಗಂಧರೂಪ ಉಳ್ಳವನು, ಸರ್ವ ಶುಭರಸರೂಪ ಉಳ್ಳವನು ಎಂತಲೂ, (ಇಲ್ಲಿ) ಗಂಧ ರಸ ಶಬ್ದಗಳು ಇತರ ಗುಣಗಳಿಗೂ (ಶಬ್ದ, ಸ್ಪರ್ಶ, ರೂಪಗಳಿಗೂ) ಉಪಲಕ್ಷಣಗಳಾಗಿರುತ್ತವೆ ಎಂತಲೂ ಮಾಧ್ವರು;

नादर (अनादर) (ಅನಾದರ.)

नादरः आत्मसंभावनारहितः ॥ रा ॥ नविद्यते आदरः आश्चर्यं यस्य सः नादरः ॥ वे ॥

ಆದರ ಇಲ್ಲದವನೆಂದರೆ—ಆತ್ಮ ಸಂಭಾವನೆ (ಸ್ವಮನ್ನಣೆ) ಇಲ್ಲದವನು. (ಅಥವಾ) ಆಶ್ಚರ್ಯ ರಹಿತನಾದವನೆಂದು ಮಾಧ್ವರು;

अवाप्तसमस्तकामत्वेनादर्त्तव्याभावात् आदररहितः ॥ रं ॥

ಸಕಲ ಇಚ್ಛಾಪದಾರ್ಥಗಳು ಸಂಪೂರ್ಣನಾಗಿರುವ ಪ್ರಯುಕ್ತ ಯಾವದೂ ಅಪೇಕ್ಷಿಸಬೇಕಾದದ್ದಿಲ್ಲವಾದಕಾರಣ ಆದರ (ಆಸಕ್ತಿ)ರಹಿತನಾದಂಥವನೆಂದು ರಾಮಾನುಜಾಚಾರ್ಯರು;

अनादर: असम्भ्रम: । अप्राप्तप्राप्तौ हि सम्भ्रम: स्यात् अनाप्तकामस्य नत्वाप्तकामत्वान्नित्यतृप्तस्येश्वरस्य संभ्रमोऽस्तिकचित् ॥ शं ॥

ಇಚ್ಛೆ ಪೂರ್ತಿ ಆಗದಿದ್ದವಗೆ ಶಿಕ್ಕದಿದ್ದ ಒಂದು ವಸ್ತುವನ್ನು ದೊರಕಿಸಿಕೊಳ್ಳುವ ವಿಷಯದಲ್ಲಿ ಆಸಕ್ತಿ ಉಂಟಾಗುತ್ತದೆ. ಆಪ್ತಕಾಮನಾಗಿ ನಿತ್ಯತೃಪ್ತನಾದ ಈಶ್ವರಗೆ ಅಂಥಾ ಆಸಕ್ತಿ ಯಾವಾಗಲೂ ಉಂಟಾಗುವದಿಲ್ಲವಾದಕಾರಣ, ಅವನು ಸಂಭ್ರಮ (ಭ್ರಾಂತಿ) ರಹಿತನಾದವನೆಂದು ಶಂಕರಾಚಾರ್ಯರು;

ಸಹ ವಿವರಿಸುತ್ತಾರೆ.

II. ಪರಂತು ಈ ಸಂದರ್ಭದಲ್ಲಿ ವಿಶೇಷವಾದ ಇನ್ನೊಂದು ಸಂಗತಿ ವಿಚಾರಿಸ ತಕ್ಕದ್ದಿದೆ. ಅದು ಯಾವದೆಂದರೆ:—ಹಿಂದೆ VIIನೇ ಪಾಠದಲ್ಲಿ ವಿವರಿಸಿದ ಅಪಹತ ಪಾಪ್ಮತ್ವಾದಿ ಗುಣಗಳುಳ್ಳ ಆಕಾಶನೆಂಬ ಆತ್ಮನೇ ಈ ಪಾಠದಲ್ಲಿ ಈ ವರೇಗೆ ವಿವರಿಸಿದ ಮನೋಮಯತ್ವಾದಿ ಗುಣಗಳುಳ್ಳನನೆಂದು ಇದರ ಆರಂಭದಲ್ಲಿ ಹೇಳೋಣಾಯಿತು. ಹಾಗಾದರೆ ಈ ಆತ್ಮನ ಉಪಾಸಕರಲ್ಲಿ ಒಬ್ಬಗೆ ಈ ಮೊದಲು ಹೇಳಿದಂತೆ ಸಕಲ ಲೋಕಗಳಲ್ಲಿಯೂ ಸ್ವತಂತ್ರ ದೊರೆಯುವದಕ್ಕೂ, ಪ್ರಸ್ತುತ ಉಪಾಸಕನ ಸಂಗತಿ ಯಲ್ಲಿ ಅದರ ಪ್ರಸ್ತಾಪವೇನೂ ಇಲ್ಲದೆ ಸುಮ್ಮಗೆ ಇವನು ಸತ್ತನಂತರ ಈ ಆತ್ಮನಲ್ಲಿ ಹೋಗಿ ಶೇರಿಕೊಳ್ಳುತ್ತಾನೆಂದು ಮಾತ್ರ ಈ ಪಾಠದ ೪ನೇ ಶ್ರುತಿಯಲ್ಲಿ ಹೇಳೋಣಾಗಿ ಇದೆ, ಇವನ ಉಪಾಸನಕ್ಕೆ ಈ ರೀತಿ ಫಲವಾಗುವದಕ್ಕೂ, ಕಾರಣವೇನು? ಎಂದರೆ ಈ ಎರಡು ವಿಧದ ಉಪಾಸನಗಳ ಪೈಕಿ ಯಾವದು ಶ್ರೇಷ್ಟವಾದದ್ದು? ಎಂಬದಾಗಿರು ತ್ತದೆ. ಈ ಉತ್ತರ—

यद्यपि दिग्देशकालादि भेदशून्यं ब्रह्म सदेकमेवाद्वितीयं आत्मैवेदं सर्वमिति षष्ठ सप्तमयोरधिगतं । तथापीह मन्दबुद्धीनां दिग्देशादिभेदवत् वस्त्वित्येवं भाविताबुद्धिर्न शक्यते सहसापरमार्थविषयीकर्त्तुमिति अनधिगम्य च ब्रह्म न पुरुषार्थसिद्धिरिति तदधिगमाय हृदयपुण्डरीकदेशउपदेष्टव्य: । यद्यपि सत्सम्यक् प्रत्ययैकविषयं निर्गुणं चा

ಶಂಕರಾಚಾರ್ಯರು ಇದೆಲ್ಲ ದಿಗ್ದೇಶ ಕಾಲ ಮೊದಲಾದ ಪರಿಮಿತಿ ಇಲ್ಲದ ಆತ್ಮ ಮತ್ತು ಒಂದೇ ಅದ್ವಿತೀಯವಾಗಿರುವ ಸತ್ ನಾಮಕ ಬ್ರಹ್ಮವೆಂಬದಾಗಿ ೬-೭ ನೇ ಪ್ರಪಾಠಕಗಳಲ್ಲಿ ತಿಳದುಬಂದಿರುವದಾದರೂ, ಲೋಕದಲ್ಲಿ ಮಂದಬುದ್ಧಿ ಯುಳ್ಳ ಜನರ ಭಾವನೆಯು ಅದು ದಿಗ್ದೇಶ ಮೊದಲಾದ ಭೇದವುಳ್ಳದ್ದೆಂತಲೇ ಆಗಿ

त्मतत्वं । तथापि मन्दबुद्धीनां गुणवत्वस्ये ष्टत्वात्सत्यकामादिगुणवत्वं च वक्तव्यं । तथायद्यपि ब्रह्मविदां स्त्र्यादिविषयेभ्यः स्वयमुपरमोभवति तथाप्यनेकजन्मविषयसेवाभ्यासजनिता विषयविषयातृष्णा न सहसा निवर्तयितुं शक्यतइति ब्रह्मचर्यादि साधनविशेषो विधातव्यः । तथायद्यप्यात्मैकत्वविदांगन्तृगमनगन्तव्याभावादविद्यादिशेष स्थितिनिमित्तक्षये गगनइव विद्युदुद्भूतइव वायुर्दग्धेन्धनइवाग्निः स्वात्मन्येव निर्वृतिः। तथापि गन्तृगमनादिवासितबुद्धीनां हृदयदेशगुणविशिष्ट ब्रह्मोपासकानां मूर्धन्ययानाड्या गतिर्वक्तव्येत्यष्टमः प्रपाठक आरभ्यते । दिग्देशगुणगतिफलभेदशून्यं हि परमार्थसदद्वयं ब्रह्म मंदबुद्धीनां असदिवप्रतिभाति । सन्मार्गस्थास्तावद्भवन्तु । ततः शनैः परमार्थसदपिग्राहयिष्यामीति मन्यते श्रुतिः ॥ (VII. १,) ॥ शं ॥ पुनस्तस्यैव त्रिपादमृतस्य (III. ५.) ब्रह्मणोऽनन्तगुणवतोऽनन्तशक्तेरनेकभेदोपास्यस्य विशिष्टगुणशक्तिमत्वेनोपासनं विधित्सन्नाह। (VIII. १.) प्रतीकद्वारा ब्रह्मोपासनमुक्त्वा प्रतीकं हित्वासगुणब्रह्मोपासन मुपन्यस्यति पुनरित्यादिना । आ ॥

ರುವದರಿಂದ ಪರಮಾರ್ಥ ಸತ್ಯವನ್ನು ತಿಳಿಯಲಿಕ್ಕೆ ಏಕಾಏಕಿ ಅವರ ಬುದ್ಧಿಗೆ ತ್ರಾಣ ಸಾಕಾಗುವದಿಲ್ಲವಾದ್ದರಿಂದಲೂ, ಬ್ರಹ್ಮವನ್ನು ತಿಳಿಯುದ ವಿನಹ ಪುರುಷಾರ್ಥ ದೊರಕುವದಿಲ್ಲವಾದ್ದರಿಂದ ಸಹ ಅವರ ತಿಳವಳಿಕೆಗೋಸ್ಕರ (೧ನೇ ಪರಿಮಿತಿಯುಳ್ಳ) ಹೃದಯಪುಂಡರೀಕ ಪ್ರದೇಶವನ್ನು ಉಪದೇಶಿಸಬೇಕು. ಆತ್ಮತತ್ವವು ಸತ್‌ನ ನಿಜವಾದ ಜ್ಞಾನ ಒಂದೇ ವಿಷಯ ಉಳ್ಳದ್ದಾಗಿಯೂ, ಗುಣರಹಿತವಾದದ್ದಾಗಿಯೂ, ಇರುವದಾದರೂ, ಮಂದಬುದ್ಧಿ ಉಳ್ಳವಂಥವರಿಗೆ ಗುಣಉಳ್ಳದ್ದೇ ಇಷ್ಟವಾಗಿರುವದರಿಂದ (೨ನೇ) ಸತ್ಯಕಾಮತ್ವ ಮೊದಲಾದ ಗುಣಯುಕ್ತತ್ವವನ್ನು ನಿರೂಪಿಸಬೇಕು. ಹಾಗೆಯೇ ಬ್ರಹ್ಮವನ್ನು ತಿಳದಂಥವರಿಗೆ ಸ್ತ್ರೀ ಮೊದಲಾದ ವಿಷಯಗಳಿಂದ ಉಪರಮವು ತನ್ನಷ್ಟಕ್ಕೆ ತಾನೇ ಉಂಟಾಗುವದಾದರೂ, ಅನೇಕ ಜನ್ಮಗಳಲ್ಲಿ ವಿಷಯಗಳನ್ನು ಸೇವಿಸಿದ ಅಭ್ಯಾಸ ಇರುವ ಕಾರಣ ಅದರಿಂದುಂಟಾಗಿರುವ ವಿಷಯ ಭೋಗದಾಶೆಯು ಏಕಾಯೇಕಿ ನಿವೃತ್ತಿಯಾಗುವದಿಲ್ಲವಾದ ಪ್ರಯುಕ್ತ ಆ ಗೋಸ್ಕರ (೩)ನೇ ಬ್ರಹ್ಮಚರ್ಯಾದಿ ಉಪಾಯ ವಿಶೇಷಗಳನ್ನು ವಿಧಿಸಬೇಕು. ಅದೇ ಪ್ರಕಾರ ಆತ್ಮನು ಒಬ್ಬನೇ ಎಂದು ತಿಳದವರಿಗೆ ಹೋಗುವವ, ಹೋಗೋಣ, ಮತ್ತು ಹೋಗಿ ಶೇರುವ ಸ್ಥಳ ಎಂಬ ಭೇದ ಇಲ್ಲದ ಕಾರಣ ಅಜ್ಞಾನ ಮೊದಲಾದವುಗಳ

ಶೇಷರೂಪವಾದ ದೇಹವನ್ನು ಪಡಿಯಲಿಕ್ಕೆ ಉಂಟಾದ ಕಾರಣವು ನಾಶವಾದ ಪಕ್ಷದಲ್ಲಿ ಆಕಾಶದಲ್ಲಿ ಹುಟ್ಟಿದ ಮಿಂಚು, ಮೈಗೆ ತಗಲುವ ಘಾಳಿ, ಕಾಷ್ಟವು ತೀರಾ ಸುಟ್ಟು ಬೂದಿಯಾದ ನಂತರ ಅಗ್ನಿ ಸಹಾ ಹೇಗೆ ತಮ್ಮ ತಮ್ಮಲ್ಲಿಯೇ ಅಡಗುತ್ತವೋ ಹಾಗೆ ತಮ್ಮ ಆತ್ಮನಲ್ಲಿಯೇ ತೃಪ್ತಿಯು ಉಂಟಾಗುತ್ತದೆ. ಆದರೂ ಹೋಗುವವ, ಹೋಗೋಣ ಮೊದಲಾದವುಗಳೆಂಬ ವಾಸನೆಯುಕ್ತವಾದ ಗ್ರಹಿಕೆಯುಳ್ಳಂಥಾ ಹೃದಯವುಳ್ಳ ಡರ್ೀಕ ದೇಶಪರಿಮಿತ ಉಳ್ಳ ಬ್ರಹ್ಮೋಪಾಸಕರಿಗೆ (೪ನೇ) ಮಸ್ತಕದಲ್ಲಿರುವ ಸುಷುಮ್ನಾ ನಾಡಿ (ಛಿದ್ರ) ದ್ವಾರಾ ಉತ್ಕ್ರಾಂತಿಯನ್ನು ನಿರೂಪಿಸಬೇಕು ಎಂಬದರಿಂದ ಈ ೮ನೇ ಪ್ರಪಾಠಕವು ಆರಂಭಿಸೋಣಾಗುತ್ತದೆ. ದಿಕ್ಕು, ದೇಶ, ಗುಣ, ಗತಿ, ಫಲ, ಇವುಗಳ ಭೇದ (ಪರಿಮಿತಿ) ಇಲ್ಲದ ಶುದ್ಧ ಸದ್ರೂಪವುಳ್ಳ ಅದ್ವಿತೀಯವಾದ ಬ್ರಹ್ಮವು ಮಂದಬುದ್ಧಿಯುಳ್ಳ ಜನರಿಗೆ ಇಲ್ಲದ ಹಾಗೆ ತೋರುತ್ತದೆ. ಅಂಥವರು ಪ್ರಥಮತಃ ಸನ್ಮಾರ್ಗಸ್ಥರಾಗಲಿ, ಅನಂತರ ಮೆಲ್ಲ ಮೆಲ್ಲಗೆ ಪಾರಮಾರ್ಥಿಕವಾದ ಸತ್‌ನ್ನು ತಿಳಿಸಿಕೊಡುತ್ತೇನೆಂದು ಶ್ರುತಿಯು ಅಭಿಪ್ರಾಯಪಡುತ್ತದೆ. (ಇದು ಪ್ರತೀಕ (ಪ್ರತಿಮಾ) ದ್ವಾರಾ ಬ್ರಹ್ಮೋಪಾಸನೆ ವಿಷಯವಾಗಿರುತ್ತದೆ).

ಪುನಃ ಅದೇ (IIIನೇ ಪಾಠದಲ್ಲಿ ಹೇಳಿದ) ಮೂರು ಪಾದಗಳುಳ್ಳ ನಿತ್ಯವಾದಂಥಾ ಅನಂತಗುಣ ಅನಂತಶಕ್ತಿಗಳುಳ್ಳ ಮತ್ತು ಅನೇಕ ವಿಧವಾಗಿ ಉಪಾಸಿಸಲ್ಪಡುವ ಬ್ರಹ್ಮವು ಶ್ರೇಷ್ಟವಾದ ಗುಣ ಮತ್ತು ಶಕ್ತಿಗಳುಳ್ಳದ್ದೆಂದು ಉಪಾಸಿಸಬೇಕಾಗಿ ನಿಯಮಮಾಡಿ ಹೇಳೋಣಾಗುತ್ತದೆ. (ಇದು ಪ್ರತೀಕ ವಿನಹ ಗುಣವಿಶಿಷ್ಟ ಬ್ರಹ್ಮೋಪಾಸನ ವಿಷಯ)

ಎಂದು (ಶಂಕರಾಚಾರ್ಯರು) ಹೇಳುತಾರೆ.

पूर्वत्र (छा. ६—७) सर्वगतत्वादि सर्वगुणैर्भूमादिरूपो विष्णुरुपास्य इत्युक्तं । सच न सर्वमुमुक्षुभिः उपासितुं शक्यइति । सर्वमुमुक्षुसाधारणमुपास्यरूपं निरूपयत्यत्राध्याये ॥ (VII १.) ॥ रा ॥ पूर्वाध्यायेषु बाह्याएव ब्रह्मविद्यानिरूपिताः । इदानीं आन्तरीं सर्वमुमुक्षुसाधारणीं हृत्पुंडरीकाविद्यां

ಮಾಧ್ವರು ಈ ಮೊದಲು (ಛಾಂ ೬-೭ ನೇ ಅಧ್ಯಾಯ (ಪ್ರಪಾಠಕ)ಗಳಲ್ಲಿ) ವಿಷ್ಣುವು ಸರ್ವಗತತ್ವ ಮೊದಲಾದ ಸಕಲ ಗುಣಭರಿತವಾದ ಭೂಮಾ (ಅಪಾರ) ಮೊದಲಾದ ರೂಪವುಳ್ಳವನೆಂದು ಧ್ಯಾನಿಸಬೇಕೆಂದು, ಎಂದರೆ ಹೊರ ಬ್ರಹ್ಮವಿದ್ಯೆಗಳು ಮಾತ್ರ ನಿರೂಪಿಸಲ್ಪಟ್ಟವು. ಮೋಕ್ಷಾ

निरूपयत्यनेनाध्यायेन । येषां बहिरुपासने न मोक्षः तेषामपि हृद्युपासनं किञ्चित्कार्यमेव ॥ (VII १.) ॥ वे ॥ हृद्गतोपास्ति प्रकारपूर्वं इदं वावतद्यदिदमस्मिन्नन्तपुरुषे ज्योतिरिति हृद्गतेन बहिष्ठस्य ऐक्यमुक्तं तदयुक्तं हृद्गतस्याणुत्वाद्बाह्यस्य महत्वादणुमहतो रैक्या योगादित्यतो हृद्गते महत्वस्यापि सत्वादैक्यमुक्तमिति भाविनाहसर्वमिति ॥ (VIII १.) रा ॥ हृद्गतस्यैवोपास्त्यन्तराणिदर्शयं स्तद्यदिदमस्मिन्नन्तःपुरुषे ज्योतिरिति हृद्गतेन बहिष्ठस्य ऐक्यमुक्तं तध्दृद्गतस्याणुत्वेन बहिष्ठस्य व्याप्तत्वेन नोपपन्नमित्याशंकामपि हृद्गतस्य व्याप्तत्वोपपादनेन परिहरति ॥ (VIII १. ॥ वे ॥

ಕಾಂಕ್ಷೆಯುಳ್ಳ ಸರ್ವರೂ ಅಂಥಾ ರೂಪವಿಶಿಷ್ಟನಾದವನನ್ನು ಉಪಾಸಿಸುವದಕ್ಕೆ ಸಮರ್ಥರಲ್ಲ. ಆದ್ದರಿಂದ ಈಗ ಮೋಕ್ಷವಾಗಬೇಕೆಂಬ ಅಪೇಕ್ಷೆಯುಳ್ಳ ಸರ್ವರೂ ಸಾಮಾನ್ಯವಾಗಿ ಉಪಾಸಿಸಲಿಕ್ಕೆ ಯೋಗ್ಯವಾದ ಒಳಗೆ ನಮ್ಮ ಹೃತ್ಪುಂಡರೀಕದಲ್ಲಿ ವಿದ್ಯಮಾನವಾದ ರೂಪೋಪಾಸನೆ, ಯಾನೆ ಆ ಪುಂಡರೀಕ ವಿದ್ಯವನ್ನು ಈ (೮ನೇ) ಅಧ್ಯಾಯದಲ್ಲಿ ನಿರೂಪಿಸೋಣಾಗುತ್ತದೆ. ಹೊರ ಉಪಾಸನೆಯಿಂದ ಮೋಕ್ಷ ಪಡೆಯುವವರು ಕೂಡಾ ಹೃದಯದಲ್ಲಿ ಸ್ವಲ್ಪ ಉಪಾಸನೆ ಮಾಡಲೇ ಬೇಕು ಎಂತಲೂ, (೩ನೇ ಪ್ರಪಾಠಕದಲ್ಲಿ) ಹೃದ್ಗತರೂಪೋಪಾಸನಾ ಪೂರ್ವಕವಾಗಿ

"ಈ ಪುರುಷನಲ್ಲಿ ಯಾವ ಜ್ಯೋತಿ ಇದೆಯೋ ಇದೂ ಅದೇ" (III १५) ಎಂದು ಹೇಳುವದರ ಮೂಲಕವಾಗಿ ಹೊರಗಿನ ಜ್ಯೋತಿಯೊಂದಿಗೆ ಹೃದ್ಗತ ಜ್ಯೋತಿಗೆ ಐಕ್ಯ ಪ್ರತಿಪಾದನೆ ಮಾಡೋಣಾಯಿತು. ಹೃದ್ಗತ ಜ್ಯೋತಿಯು ಅಲ್ಪವಾಗಿ ಬಹಿರ್ಜ್ಯೋತಿಯು ಮಹತ್ತಾಗಿ ಸಹ ಇರುವ ಕಾರಣ ಅಣುಮಹತ್‌ಗಳಿಗೆ ತಮ್ಮೊಳಗೆ ಐಕ್ಯ ಕೂಡಿಬರುವದಿಲ್ಲವಾದ್ದರಿಂದ ಹಾಗೆ ಪ್ರತಿಪಾಧನೆ ಮಾಡಿದ್ದು ಯುಕ್ತವಲ್ಲ ಎಂಬ ಆಕ್ಷೇಪಣೆಗೆ ಪರಿಹಾರರೂಪವಾಗಿ ಹೃದ್ಗತವಾದದ್ದರಲ್ಲಿ ಮಹತ್ವ ಕೂಡಾ ಇರುವದರಿಂದ ಐಕ್ಯ ಹೇಳೋಣಾಯಿತೆಂಬ ಭಾವದಿಂದ "ಗುಣಪೂರ್ಣ"ನಾದವನು ಎಂದು ವಸ್ತೈರೆ (VIII ೧) ಎಂದರೆ ವ್ಯಾಪ್ತತ್ವವನ್ನು ಉಪಪಾದನೆ ಮಾಡೋಣಾಗುತ್ತದೆ ಎಂದು ಹೇಳುತ್ತಾರೆ.

## (೪ನೇ) ಪುರುಷನ ಸ್ವಭಾವ ಮತ್ತು ಸ್ವರೂಪದ ಕುರಿತು.

ಈ ಪಾಠದ ೧ನೇ ಶ್ರುತಿಯಲ್ಲಿ ಪುರುಷನು ಕ್ರತುमयः (ಕ್ರತುಮಯನು) ಎಂದು ಹೇಳೋಣಾಗಿದೆ.

क्रतु: निश्चय: अध्यवसाय: एवमेवना न्यथेत्यविचल: प्रत्यय: । तंक्रतुं कुर्वीत उपासीतेत्यनेन व्यवहितेन संबन्ध: । × । अथ खल्वितिहेत्वर्थ: । यस्मात्क्रतुमय: क्रतुप्राय: अध्यवसायात्मक: पुरुष: जीव: यथाक्रतु: यादृश: क्रतुरस्यसोयं यथाक्रतु: यथाध्यवसाय: यादृङ्निश्चयोऽस्मिंल्लोके जीवन्निह पुरुषो भवति तथेत: अस्माद्देहात् प्रेत्यमृत्वा भवति क्रत्वनुरूपफलात्मको भवतीत्यर्थ: ॥ ॥ शं ॥

ಶಂಕರಾಚಾರ್ಯರು, ಕ್ರತು ಎಂದರೆ ನಿಶ್ಚಯ (ಅಧ್ಯವಸಾಯ) ಹೀಗೆಯೇ ಸರಿ ಇನ್ನೊಂದು ಪ್ರಕಾರವಲ್ಲೆಂಬ ದೃಢವಾದ ಗ್ರಹಿಕೆ. ಇಂಥಾ ಗ್ರಹಿಕೆಯಿಂದ ಉಪಾಸನೆ ಮಾಡಬೇಕು. ಯಾವಕಾರಣದಿಂದ ಪುರುಷನೆಂದರೆ ಜೀವನು ಕ್ರತುವೇ ಅಧಿಕವಾಗಿ ಉಳ್ಳವನೋ (ನಿಶ್ಚಯಾತ್ಮಕನೋ) ಆ ಕಾರಣದಿಂದ ಆವನು ಈ ಲೋಕದಲ್ಲಿ ಬದುಕಿರುವಾಗ ಯಾವ ತರಹದ ಕ್ರತು (ನಿಶ್ಚಯ) ಉಳ್ಳವನಾಗಿರುತ್ತಾನೋ ಈ ದೇಹದಿಂದ ಮರಣಪಟ್ಟು ಹೋದ ತರುವಾಯ ಆ ಕ್ರತುವಿಗನುಗುಣವಾದ ಫಲ ಉಳ್ಳವನಾಗುತ್ತಾನೆ ಎಂದು ಅರ್ಥವಾಗಿರುತ್ತದೆಂದು ಹೇಳುತ್ತಾರೆ.

यथाक्रतु: यथोपासन: । × । क्रतुमय: क्रतुप्रधान: उपासनाप्रधानइत्यर्थ: ॥ रं ॥

ರಾಮಾನುಜಾಚಾರ್ಯರು ಕ್ರತು ಎಂದರೆ ಉಪಾಸನಾ (ಧ್ಯಾನ) ಆದ್ದರಿಂದ ಕ್ರತುಮಯನೆಂದರೆ ಉಪಾಸನಾ ಪ್ರಧಾನ (ಧ್ಯಾನವೇ ಅಧಿಕವಾಗಿ ಉಳ್ಳವ) ಎಂದು ಹೇಳುತ್ತಾರೆ.

क्रतुमय: ज्ञानप्रधान: । × । यादृशभगवद्विषयकनिश्चयवान् अस्मिंल्लोके पुरुषो भवति मृतिकाले तथातदनुरूप: इतो लोकाद्देहात्प्रेत्यनिर्गत्य भवति ॥ रा ॥ क्रतुमय: स्वयोग्यज्ञानरूपफलवान् ॥ वे ॥

ಮಾಧ್ವರು ಕ್ರತುಮಯ ಎಂದರೆ ಸ್ವಯೋಗ್ಯ ಜ್ಞಾನಪ್ರಧಾನ (ಎಂದು ಅರ್ಥ) ಪುರುಷನು ಈ ಲೋಕದಲ್ಲಿ ಭಗವಂತನ ಕುರಿತು ಯಾವ ತರಹದ ನಿಶ್ಚಯಜ್ಞಾನ ಉಳ್ಳವನಾಗಿರುತ್ತಾನೋ, ಮರಣ ಕಾಲದಲ್ಲಿ ಮತ್ತು ಈ ಶರೀರ ಬಿಟ್ಟುಹೋದ ನಂತರ ಸಹ ಅದಕ್ಕನುಸಾರವಾದ ಜ್ಞಾನರೂಪ (ಫಲ) ಉಳ್ಳವನಾಗುತ್ತಾನೆಂದು ಹೇಳುತ್ತಾರೆ.

ಪುರುಷನ ಸ್ವರೂಪದ ಕುರಿತು ೭-೧೦-೧೩ನೇ ಶ್ರುತಿಗಳಲ್ಲಿರುವ तत्वमसि (ತತ್ವಮಸಿ) ಎಂಬ ವಾಕ್ಯವು ಮುಖ್ಯವಾದದ್ದು. ಈ ಕುರಿತು,

स: यः सदाख्यएषः उक्तोऽणिमा अणुभावो जगतोमूलं । ऐतदात्म्यं एतत् सदात्मायस्य सर्वस्य तदेतदात्मतस्यभाव ऐतदात्म्यं । एतेन सदाख्येनात्मनात्मवत् सर्वमिदं जगत् नान्योस्दास्त्यात्माऽसंसारी संसारीवा । × । येनचात्मनात्मवत्सर्वमिदं जगत्तदेवसदाख्यं कारणं सत्यं परमार्थसत् । अतः स एवात्माजगतः प्रत्यक्स्वरूपं सतत्वयाथात्म्यं आत्मशब्दस्य निरुपपदस्य प्रत्यगात्मनि गवादिशब्दवन्निरूढत्वात् । अतस्तत् सत्वमसि हेश्वेतकेतो इति ॥

६—८—{६/७} ॥ शं ॥

ಶಂಕರಾಚಾರ್ಯರು, (ಈಗ) ಹೇಳಿದ ಅಣುಭಾವರೂಪವಿಶಿಷ್ಟವಾದ ಸತ್ ಎಂದು ಕರೆಯಲ್ಪಡುವಂಥಾ ಜಗತ್ತಿಗೆ ಕಾರಣವಾದದ್ದು ಯಾವದೋ, ಎಲ್ಲಕ್ಕೂ ಆತ್ಮಭೂತವಾದದ್ದು ಅದೇ. ಎಲ್ಲವೂ ಅದರಿಂದಲೇ ಆತ್ಮಭಾವ ಉಳ್ಳದ್ದಾಗಿದೆ—ಎಂದರೆ ಈ ಸಕಲ ಜಗತ್ತಿಗೂ ಸನ್ನಾಮಕವಾದ ಆತ್ಮನೇ ಆತ್ಮವಲ್ಲದೆ ಇನ್ನ್ಯಾರಾದರೂ ಒಬ್ಬ ಸಂಸಾರಿಯಾಗಲೀ ಅಸಂಸಾರಿಯಾಗಲೀ (ಇದರ) ಆತ್ಮನಲ್ಲ. ಮತ್ತು ಯಾವ ಆತ್ಮದಿಂದ ಈ ಸಕಲ ಜಗತ್ತು ಆತ್ಮ (ಸಾರ) ಉಳ್ಳದಾಗಿದೆಯೋ ಅದೇ ಸತ್ ಎಂದು ಹೇಳಲ್ಪಡುವ ಕಾರಣರೂಪ, ಸತ್ಯ, ಮತ್ತು ಪರಮಾರ್ಥ ಶ್ರೇಷ್ಟವಾದ ಸತ್ (ವಸ್ತು) ಆಗಿರುತ್ತದೆ. ಆದಕಾರಣ ಜಗತ್ತಿಗೆ ಪ್ರತ್ಯಕ್ ಸ್ವರೂಪನಾದವನು ವಾಸ್ತವಿಕವಾದ ಅದೇ ರೂಪವುಳ್ಳ ಆ ಆತ್ಮನೇ ಆಗಿರುತ್ತಾನೆ. ಯಾಕಂದರೆ ವಿಶೇಷಣರಹಿತವಾದ ಆತ್ಮಶಬ್ದವು, ಗೋವು ಮೊದಲಾದ ಶಬ್ದಗಳಂತೆ ಪ್ರತ್ಯಗಾತ್ಮಗೆ ನೆಟ್ಟಗೆ ಸಾಂಕೇತಿತವಾಗಿರುತ್ತದೆ. ಆದ್ದರಿಂದ ಶ್ವೇತಕೇತು! "ನೀನು ಅದು (ಆ ಸತ್) ಆಗಿರುವಿ" ಎಂದು ಉದ್ದಾಲಕರು ಹೇಳಿದರು ಎಂಬದಾಗಿ ವಿವರಿಸುತ್ತಾರೆ.

स यएषोऽणिमा एतादृशः सच्छब्दितः स एषः अणिमा अणुवद्दुर्विज्ञेयः मानान्तरागोचर इत्यर्थः । (६—८—६) ऐतदात्म्यमिदं सर्वमित्यत्रापीदं सर्वमिति केवलचिदचिदात्मकः प्रपञ्चः परामृश्यते।×। ऐतदात्म्यं उपादान भूतेन अन्तर्यामि भूतेन च ब्रह्मणाव्याप्यमित्यर्थः । × । एतदात्म

ರಂಗರಾಮಾನುಜಾಚಾರ್ಯರು ಸತ್ ಶಬ್ದವಾಚ್ಯವಾಗಿ ಈ ರೀತಿ ಅಣುವಿನಂತೆ ಪ್ರಮಾಣಾಂತರದಿಂದ ಯಾವದು ತಿಳದು ಬರುವದಿಲ್ಲವೊ ಆ ಬ್ರಹ್ಮವೇ ಉಪಾದಾನ (ಕಾರಣ) ಭೂತನಾಗಿಯೂ, ಅಂತರ್ಯಾಮಿಭೂತನಾಗಿಯೂ ಈ ಚಿದಚಿದಾತ್ಮಕ ಪ್ರಪಂಚವನ್ನು ವ್ಯಾಪಿಸಿರುವದು; ಎಂದರೆ

मेवैतदात्म्यं । × । तत्सत्यं ऐतदात्मकमेव सत्यं प्रपञ्चस्य प्रामाणिकमित्यर्थः । × । सत्यं प्रमाणप्रतिपन्नं तदिदं सर्वं जगदैतदात्म्यं अनेन ब्रह्मणाव्याप्तमित्यर्थः । × । स आत्मानियन्तेत्यर्थः । × । तत्त्वमसि श्वेतकेतोऽइति सर्वं तदात्मकमितिवत् त्वंतदात्मक इत्यर्थः ॥ ६—८— (१/७) ॥ रं ॥

ಪ್ರತ್ಯಕ್ಷ ಮೊದಲಾದ ಸಾಕ್ಷಿಯಿಂದ ಸ್ಥಾಪಿಸಲ್ಪಡುವ ಈ ಜಗತ್ತು ಬ್ರಹ್ಮದಿಂದ ವ್ಯಾಪ್ತವಾಗಿದೆ ಎಂದು ಅರ್ಥ. ಅವನು ನಿಯಾಮಕನು. ಹೇ ಶ್ವೇತಕೇತು! ಎಲ್ಲವೂ ಅವನಿಂದ ವ್ಯಾಪಿಸಿರುವಂತೆ ನೀನು (ಕೂಡಾ) ಅವನಿಂದ ವ್ಯಾಪ್ತನಾಗಿರುವಿ ಎಂದು ಅರ್ಥ ಎಂದು ಹೇಳುತ್ತಾರೆ.

सारत्वात्सः नियामकत्वाद्यः अप्रतिहत सर्वेच्छारूपत्वादेषः । सूक्ष्मज्ञानेन मीयते विषयी क्रियतइत्यणिमा इदं सर्वं एतदात्म्यं । एष आत्मास्वामी अस्ये त्येतदात्म्यं तदेवैतदात्म्यं । × । एतत्स्वामिकं । × । ततत्वात्परानन्दरूपत्वात् सत्यं स विष्णुरात्मापूर्णगुणः । त्वमतदसिभिन्नवस्त्वासि श्वेतकेतो! इत्युवाचपितेति योज्यं ॥ रा ॥ ६—८—(६,७,८)

अतत्त्वमिति तत्त्वमिति च पदच्छेदः । हे श्वेतकेतो तत्त्वं तत्त्वतः त्वमतदसि । तस्मादन्यद्वस्त्वसीत्यर्थः । वे । ६—८—(७,८)

ಮಾಧ್ವರು ಇದೆಲ್ಲ ಸಾರ ಉಳ್ಳವನಾಗಿಯೂ, ನಿಯಾಮಕನಾಗಿಯೂ, ನಿವಾರಣೆ ಮಾಡಕೂಡದ ಸಕಲೇಚ್ಛಾರೂಪ ಉಳ್ಳವನಾಗಿಯೂ, ಸೂಕ್ಷ್ಮಜ್ಞಾನದಿಂದ ತಿಳಿಯಲ್ಪಡತಕ್ಕವನಾಗಿಯೂ, ಇರುವವನು ಯಾರೋ ಅವನೇ ಸ್ವಾಮಿಯಾಗಿ ಉಳ್ಳದ್ದು (ಮತ್ತು) ವ್ಯಾಪ್ತ ಮತ್ತು ಉತ್ಕೃಷ್ಟವಾದ ಆನಂದರೂಪ ಉಳ್ಳವನಾದ್ದರಿಂದ ಸತ್ಯ ಎಂದರೆ ಆತ್ಮನಾದ ವಿಷ್ಣುವು ಪೂರ್ಣ ಗುಣಉಳ್ಳವನು. ಹೇ ಶ್ವೇತಕೇತು! ನೀನು ನಿಜವಾಗಿ ಅವನಲ್ಲ. ಅವನಿಂದ ಭಿನ್ನ ವಸ್ತುವಾಗಿರುವಿ; ಎಂದು (ಅವನ) ತಂದೆಯು ಅಪ್ಪಣೆ ಕೊಟ್ಟರೆಂದು ಯೋಜನೆಮಾಡಬೇಕಾಗಿ ಹೇಳುತ್ತಾರೆ.

## IXನೇ ಪಾಠ.

# ಮರಣದ ಕುರಿತು.

(१) अस्य सोम्म! महतोवृक्षस्य यो मूलेऽभ्याहन्याजीवन् स्रवेद्योमध्येऽभ्याहन्याजीवन् स्रवेद्योऽग्रेऽभ्याहन्याजीवन् स्रवेत्स एषजीवेनाऽऽत्मानानुप्रभूतः पेपीयमानो मोदमानस्तिष्ठति ॥ (६—११—१.)

(೧) (ಉದ್ದಾಲಕರು ಶ್ವೇತಕೇತುಗೆ ಹೇಳುತ್ತಾರೆ) ಹೇ ಸೋಮ್ಯ! ಯಾರಾದರೂ ಈ ದೊಡ್ಡ ಮರದ ಬೇರಿನಲ್ಲಿ ಘಾಯಮಾಡಿದರೆ ಅದು ಸ್ರವಿಸುತ್ತಾ ಬದುಕಿ ಇದ್ದೀತು. ಮಧ್ಯದಲ್ಲಿ ಘಾಯಮಾಡಿದರೆ ಸ್ರವಿಸುತ್ತಾ ಬದುಕಿ ಇದ್ದೀತು. ತುದಿಯಲ್ಲಿ ಘಾಯಮಾಡಿದರೆ ಸ್ರವಿಸುತ್ತಾ ಬದುಕಿ ಇದ್ದೀತು. ಈ ವೃಕ್ಷವು ಜೀವರೂಪನಾದ ಆತ್ಮನಿಂದ ವ್ಯಾಪಿಸಲ್ಪಟ್ಟಿರುವದರಿಂದ ಬೇಕಷ್ಟು ನೀರು ಕುಡಿಯುತ್ತಾ ಸಂತೋಷಪಟ್ಟುಕೊಂಡುಂಟು.

(२) अस्य यदेकाꣳ शाखां जीवो जहात्यथसाशुष्यति । द्वितीयां जहात्यथसाशुष्यति । तृतीयां जहात्यथसाशुष्यति । सर्वं जहाति सर्वः शुष्यत्येवमेव खलुसोम्य! विद्धीति होवाच ॥

जीवापेतं वावकिलेदं म्रियते न जीवो म्रियतइति ॥ × ॥ ६—११—(२/३)

(೨) (ಪರಂತು) ಜೀವನು ಅದರ ಒಂದು ಗೆಲ್ಲನ್ನು ಬಿಟ್ಟರೆ ಆ ಗೆಲ್ಲು ಒಣಗುತ್ತದೆ. ಎರಡನೇದನ್ನು ಬಿಟ್ಟರೆ ಅದು ಒಣಗುತ್ತದೆ. ಮೂರನೇದನ್ನು ಬಿಟ್ಟರೆ ಅದು ಒಣಗುತ್ತದೆ. ಸರ್ವ (ಇಡೀ ಮರ)ವನ್ನು ಬಿಟ್ಟರೆ ಎಲ್ಲವೂ (ಇಡೀ ಮರ) ಒಣಗುತ್ತದೆ. ಹೇ ಸೋಮ್ಯ! ಇದೇ ರೀತಿ ಎಂದು ನೀನು ನಿಶ್ಚಯವಾಗಿ ತಿಳಿ ಎಂದು ಹೇಳಿದರು.

ಜೀವನು ಬಿಟ್ಟು ಹೋದಾಗ್ಯೂ ಈ ದೇಹವು ಸಾಯುತ್ತದೆ ಅಲ್ಲದೆ ಜೀವನು ನಿಶ್ಚಯವಾಗಿ ಸಾಯುವದಿಲ್ಲ ಎಂದು.

(३) पुरुषꣳ सोम्योतोपतापिनं ज्ञातयः पर्य्युपासते जानासिमां जानासिमामि

(೩) ಹೇ ಸೋಮ್ಯ! ಒಬ್ಬ ಮನುಷ್ಯನು ಸಂಕಟದಲ್ಲಿರುವಾಗ ಜ್ಞಾತಿಗಳು

ति ॥ तस्ययावन्नवाङ्मनसि सम्पद्यते मनः प्राणे प्राणःस्तेजसि तेजःपरस्यां देवतायां तावज्जानाति ॥ ६–१५–१

ಅವನ ಸುತ್ತಲು ಮುತ್ತಿಕೊಂಡು "ನನ್ನನ್ನು ಬಲ್ಲಿಯೋ?" "ನನ್ನನ್ನು ಬಲ್ಲಿಯೋ?" ಎಂದು ಕೇಳುವರು. ಎಷ್ಟು ಕಾಲ ಪರ್ಯಂತರ ಅವನ ವಾಕ್ ಮನಸ್ಸಿನಲ್ಲಿ, ಮನಸ್ಸು ಪ್ರಾಣದಲ್ಲಿ, ಪ್ರಾಣವು ತೇಜಸ್ಸಿನಲ್ಲಿ, ತೇಜಸ್ಸು ಪರದೇವತೆಯಲ್ಲಿ ಸಂಪತ್ತಿಯನ್ನು ಪಡೆಯುವದಿಲ್ಲವೋ (ಅಡಗುವದಿಲ್ಲವೋ) ಅಷ್ಟುಕಾಲ ಪರ್ಯಂತರ ಅವನು (ಅವರನ್ನು) ತಿಳಿಯುತ್ತಾನೆ (ಗುರ್ತುಹಿಡಿಯುತ್ತಾನೆ).

(४) अथयत्रैतदबलिमानं नीतो भवति तमभित आसीना आहुर्जानासिमां जानासिमामिति । सयावदस्माच्छरीरादनुत्क्रान्तो भवतितावज्जानाति ॥ ((८–६–४)

(೪) ಮತ್ತು ಒಬ್ಬ ಮನುಷ್ಯನು ಅಶಕ್ತನಾಗಿರುವಾಗ, ಅವನ ಸುತ್ತಲು ಕೂತಂಥವರು "ನನ್ನನ್ನು ಬಲ್ಲಿಯೋ?" "ನನ್ನನ್ನು ಬಲ್ಲಿಯೋ?" ಎಂದು ಕೇಳುವರು. ಅವನು ಈ ಶರೀರದಿಂದ ಹೊರಟು ಹೋಗದೇ ಇರುವ ಪರ್ಯಂತರ (ಅವರನ್ನು) ತಿಳಿಯುತ್ತಾನೆ.

(५) अथयदाऽस्य (पुरुषस्य प्रयतो) वाङ्मनसि सम्पद्यते मनःप्राणे प्राणःस्तेजसि तेजःपरस्यां देवतायामथनजानाति ॥ {६–८–६– / ६–१५–२}

(೫) ಮತ್ತು ಯಾವಾಗ (ಒಬ್ಬ ಸಾಯುವವನ) ವಾಕ್ ಮನಸ್ಸಿನಲ್ಲಿ, ಮನಸ್ಸು ಪ್ರಾಣದಲ್ಲಿ, ಪ್ರಾಣವು ತೇಜಸ್ಸಿನಲ್ಲಿ, ತೇಜಸ್ ಪರದೇವತೆಯಲ್ಲಿ ಸಂಪತ್ತಿಯನ್ನು ಪಡಿಯುತ್ತದೋ (ಅಡಗುತ್ತದೋ) ಅನಂತರ ಅವನು ತಿಳಿಯುವದಿಲ್ಲ.

## IXನೇ ಪಾಠದ

# ವ್ಯಾಖ್ಯಾನಸಂಗ್ರಹ.

—:o:—

(೧) ಸಾಯುವದು ಜೀವವೋ, ದೇಹವೋ, ಮತ್ತು ಒಬ್ಬ ಮನುಷ್ಯನು ಸಾಯುವಾಗ ಅವನ ವಾಗಾದಿ ಕರಣಗಳು ಏನಾಗುತ್ತವೆ ಎಂಬ ಸಂಗತಿಗಳನ್ನು ಈ ಪಾಠದಲ್ಲಿ ನಿರೂಪಿಸೋಣಾಗುತ್ತದೆ.

ಸಾಯುವದು ದೇಹವಲ್ಲದೆ ಜೀವವಲ್ಲ ಎಂಬದು ಎಲ್ಲರೂ ಒಪ್ಪುವ ಸಂಗತಿಯಾಗಿರುತ್ತದೆ. ಆದರೂ ಅದಕ್ಕೆ ದೃಷ್ಟಾಂತವಾಗಿ ೧ನೇ ೨ನೇ ಶ್ರುತಿಗಳಲ್ಲಿ ಹೇಳುವ ವೃಕ್ಷದ ಸಂಗತಿಯುಲ್ಲಿ ಮಾಧ್ವರು "ವೃಕ್ಷಜೀವ" ಎಂತ ಒಂದು ಜೀವಶಬ್ದವನ್ನು ಹೆಚ್ಚಾಗಿ ಸೇರಿಸಿಕೊಂಡು, ಆ ಶ್ರುತಿಗಳಲ್ಲಿರುವ जीवेनात्मना (ಜೀವರೂಪನಾದ ಆತ್ಮನಿಂದ) जीव (ಜೀವ) ಎಂಬ ಶಬ್ದಗಳಿಗೆ ಕೆಳಗೆ ವಿವರಿಸುವಂತೆ ಅರ್ಥಗಳನ್ನು ಹೇಳುತ್ತಾರೆ.

## (೧)ನೇ ಶ್ರುತಿಯ ಕುರಿತು.

जीवेन भगवताधिष्ठितश्चेत् रसमेवोद्गिरेत् नतुम्रियत एव । एवं स एष वृक्षजीवः अनेन प्रकृतजीवेनात्मना परमेश्वरेणानुप्रभूतः प्राप्तोऽधिष्ठितदेहः पुनः पुनः भृशंवापिबन् तिष्ठति ॥ रा ॥ एषः वृक्षजीवोऽनेन प्रकृतेन जीवेनात्मना परमात्मनानुप्रभूतः । × । तिष्ठति ॥ वे ॥

ಪ್ರಸ್ತುತ ವೃಕ್ಷವು ಭಗವಂತನಿಂದ ಅಧಿಷ್ಠಿತವಾಗಿದ್ದ ಪಕ್ಷದಲ್ಲಿ ರಸವನ್ನೇ ಕಾರೀತಲ್ಲದೆ ಸಾಯಲಾರದು. ಹೀಗೆ ಆ ವೃಕ್ಷಜೀವವು ಪ್ರಕೃತ (ಶ್ರುತಿಯಲ್ಲಿ ಹೇಳುವ) ಪರಮೇಶ್ವರನಿಂದ ಅಧಿಷ್ಠಿತವಾಗಿರುವ ದೇಹದಲ್ಲಿದ್ದುಕೊಂಡು ಪುನಃ ಪುನಃ ಅಥವಾ ಯಥೇಷ್ಟ ನೀರು ಕುಡಿಯುತ್ತಾ ಬದುಕಿರುತ್ತದೆ ಎಂತಲೂ;

## (೨)ನೇ ಶ್ರುತಿಯಲ್ಲಿರುವ जीव (ಜೀವ) ಶಬ್ದದ ಕುರಿತು.

एकां शाखां जीवोहरिर्जहाति । × । जीवेन हरिणापेतं त्यक्तमिदं प्राणिजातं म्रियते न जीवोहरिः म्रियते ॥ रा ॥ जीवापेतं जीवेन परमात्मनात्यक्तं त्यक्तदेहमिति यावत् । किलवावइदं संसारिजातं म्रियते प्राणैर्वियुज्यते । जीवः परमात्माकदापि न म्रियते ॥ वे ॥

ಜೀವ ಎಂದರೆ ಹರಿ ಪರಮಾತ್ಮ. ಅವನಿಂದ ತ್ಯಜಿಸಲ್ಪಟ್ಟ ಪ್ರಾಣಿ, ಸಂಸಾರಿ ಸಮೂಹವು ಸಾಯುತ್ತದೆ; ಪ್ರಾಣನಷ್ಟ ಹೊಂದುತ್ತದೆ ಅಲ್ಲದೆ ಜೀವ ಎಂದರೆ ಹರಿ ಪರಮಾತ್ಮ ಸಾಯುವದಿಲ್ಲ ಎಂತಲೂ, ಅರ್ಥ ಹೇಳುತ್ತಾರೆ.

जीवेनात्मनानुप्रभूतः ॥ जीवः ॥ शं ॥

ಶಂಕರಾಚಾರ್ಯರು ೧ನೇ ಶ್ರುತಿಯಲ್ಲಿರುವ ಜೀವರೂಪನಾದ ಆತ್ಮನಿಂದ ಎಂಬ ಶಬ್ದಗಳಿಗೆ ಆ ಶಬ್ದಗಳನ್ನೇ, ೨ನೇ ಶ್ರುತಿಯುಲ್ಲಿರುವ ಜೀವಶಬ್ದಕ್ಕೆ ಆ ಶಬ್ದವನ್ನೇ ಪ್ರಯೋಗಿಸುತ್ತಾರೆ.

जीवात्मा । जीवः । × । अतोमनुष्यादिष्वपि जीवत्यागकृतं देहस्यमरणं नजीवस्यमरणं ॥ रं ॥

ರಂಗರಾಮಾನುಜಾಚಾರ್ಯರು "ಜೀವಾತ್ಮಾ" "ಜೀವ" ಎಂತ ಪ್ರಯೋಗಿಸಿರುವದಲ್ಲದೆ, ಮನುಷ್ಯಾದಿಗಳಲ್ಲಿಯೂ ಜೀವವು ಬಿಟ್ಟುಹೋದ ದೇಹಕ್ಕೆ ಮರಣವಲ್ಲದೆ ಜೀವಕ್ಕೆ ಮರಣವಿಲ್ಲ ಎಂದು ವಿವರಿಸುತ್ತಾರೆ.

(೨) ಈಗ ಈ ಪಾಠದ ೩-೫ನೇ ಶ್ರುತಿಗಳಲ್ಲಿ ವಾಕ್ ಮನಸ್ಸು ಇವೆರಡರ ಸುದ್ದಿಮಾತ್ರ ಉಂಟಲ್ಲದೆ, ಮಿಕ್ಕ ಇಂದ್ರಿಯಗಳ ವಿಷಯ ಹೇಳೋಣಾಗಿರುವದಿಲ್ಲ. ಆ ಶ್ರುತಿಗಳಲ್ಲಿ ಹೇಳುವಂತೆ ವಾಕ್ ಮನಸ್ಸಿನಲ್ಲಿ ಲಯವಾದರೆ ಮನಸ್ಸು ಪ್ರಾಣದಲ್ಲಿ ಸೇರಿಕೊಳ್ಳುವ ತನಕ ಅದರ ವ್ಯಾಪಾರ ನಡೆಯದೇ ಇರಲಿಕ್ಕೆ ಕಾರಣವಿಲ್ಲದ್ದರಿಂದ ಆಗ ಆ ಮೃತಪಡುವವನನ್ನು ನೋಡಲಿಕ್ಕೆ ಬಂದ ಜ್ಞಾತಿಗಳ ಕೂಡೆ ಅವಗೆ ಮಾತಾಡ ಕೂಡದಿದ್ದರೂ ಅವರ ಗುರ್ತು ಅವಗೆ ಶಿಕ್ಕಬಹುದು; ಮತ್ತು ಅವರು ಆಡುವ ಮಾತಿನ ಅಭಿಪ್ರಾಯ ಅವಗೆ ಆಗಲೂ ಬಹುದು- ಇದಕ್ಕೆ ಕಣ್ಣು, ಕಿವಿ ಇವುಗಳ ಸಹಾಯ ಅಗತ್ಯವಿದೆ. ಈ ಇಂದ್ರಿಯಗಳು ವಾಗಿಂದ್ರಿಯಕ್ಕೆ ಒಳಪಟ್ಟವುಗಳಲ್ಲ. ಆದ್ದರಿಂದ ಇವುಗಳ ಮತ್ತು ಉಳಿಕೆ ಎಲ್ಲ ಕರಣಗಳ ಅವಸ್ಥೆಯೇನಾಗುತ್ತದೆಂದು ತಿಳಿಯುವದು ಅಗತ್ಯವಿದೆ. ಈ ಸಂಗತಿಯಕುರಿತು:—

वाङ्मनसि सम्पद्यते मनस्युपसंह्रियते अथतदाहुर्ज्ञातयो न वदतीति । मनःपूर्वको हि वाग्व्यापारः । × । वाच्युपसंहृतायां मनसि मननव्यापारेण केवलेन वर्तते । मनोपियदोपसंह्रियते तदामनः प्राणे संपन्नं भवति । सुषुप्तकालइव । [प्राणसंपत्तिर्मनसः तदधीनत्वम् आ.] । तदापार्श्वस्थाज्ञातयो न विजानातीत्याहुः । प्राणश्च तदोर्ध्वश्वासी स्वास्मिन्युपसंहृतबाह्यकरणः । संवर्गविद्यायां दर्शनात् हस्तैपादादीन् विक्षिपन् मर्मस्थानां

ಶಂಕರಾಚಾರ್ಯರು, ಸಾಯುವವನ ವಾಕ್ ಮನಸ್ಸಿನಲ್ಲಿ ಅಡಗುತ್ತದೆ; ಅನಂತರ ಅವನು ಮಾತಾಡುವದಿಲ್ಲೆಂದು ಜ್ಞಾತಿಗಳು ಹೇಳುತ್ತಾರೆ. ಯಾಕೆಂದರೆ ವಾಗಿಂದ್ರಿಯದ ವ್ಯಾಪಾರವು ಮನಃಪೂರ್ವಕ (ಮನಸ್ಸು ಮೊದಲುಗೊಂಡು) ಆಗಿರುತ್ತದೆ. ವಾಕ್ ಮನಸ್ಸಿನಲ್ಲಿ ಅಡಗಲು, ಇದ (ಮನಸ್ಸು) ಕೇವಲ ಯೋಚನೆಮಾಡುವ ಕೆಲಸದಲ್ಲಿರುತ್ತದೆ. ಮನಸೂ ಯಾವಾಗ ಲಯವಾಗುತ್ತದೋ ಆಗ

नि निष्क्रन्तमिवोत्सृजन् क्रमेणोपसंहृतकरण स्तेजसि सम्पद्यते । तदाहुर्ज्ञातयो न चल तीति । मृतः नेतिवा विचिकित्सन्तो देह मालभमाना उष्णञ्चोपलभमाना देहउष्णः जीवतीति । यदाप्यौष्ण्यं लिंगं तेजउपसंह्रि यते तदातत्तेजः परस्यां देवतायां प्रशाम्य ति । तदेवं क्रमेणोपसंहृते स्वमूलं प्रासेमन सितत्स्थोजीवोपि सुषुप्तकालवन्निमित्तोपसंहा राद्दुपसंह्रियमाणः सन्सत्याभिसन्धिपूर्वकञ्चे दुपसंह्रियते । सदेव संम्पद्यते । न पुनर्देहा न्तराय सुषुप्तादिवोत्तिष्ठति । × । इतरस्त्व नात्मज्ञः तस्मादेवमूलात्सुषुप्तादिवोत्थाय मृ त्वापुनर್देहजालमाविशति ॥ शं ॥ ६–८–६

ಸುಷುಪ್ತಿಕಾಲದಲ್ಲಾಗುವಂತೆ ಅದು ಪ್ರಾಣದಲ್ಲಿ ಸೇರಿಕೊಳ್ಳುತ್ತದೆ, ಎಂದರೆ ಪ್ರಾಣದ ಅಧೀನವಾಗುತ್ತದೆ. ಆಗ ಸಮೀಪ ಇರುವ ಜ್ಞಾತಿಗಳು (ಅವಗೆ) ಗೊತ್ತಾಗುವದಿಲ್ಲ ಎಂದು ಹೇಳುತ್ತಾರೆ. ಆ ಕಾಲದಲ್ಲಿ ಪ್ರಾಣವು ಊರ್ಧ್ವಶ್ವಾಸಿಯಾಗಿ ಹೊರಗಿನ ಇಂದ್ರಿಯಗಳನ್ನೆಲ್ಲ ಸಂವರ್ಗವಿದ್ಯ (VI ಕ) ದಲ್ಲಿ ಕಂಡಂತೆ ತನ್ನಲ್ಲಿ ಸೆಳಕೊಂಡು ಕೈಕಾಲುಗಳನ್ನು ಅತ್ತಿತ್ತ ಇಡುತ್ತಾ ಸಂಧಿಸ್ಥಳಗಳನ್ನು ಕತ್ತರಿಸಿದಂತೆ ತೋರಿಸಿಕೊಂಡು, ದೇಹವನ್ನು ಬಿಟ್ಟು ಕ್ರಮವಾಗಿ ಇಂದ್ರಿಯಗಳನ್ನು ಸ್ವಾಧೀನಪಡದು, ತೇಜಸ್ಸಿನಲ್ಲಿ ಅಡಗುತ್ತದೆ. ಆಗ ಜ್ಞಾತಿಗಳು (ಇವನು) ಹಂದಾಡುವದಿಲ್ಲ ಎಂದು ಹೇಳುತ್ತಾರೆ. ಈಗ ಸತ್ತನೋ ಬದುಕಿದ್ದಾನೋ ಎಂಬ ವಿಷಯದಲ್ಲಿ ಸಂಶಯಪಟ್ಟು ಮೈ ಮುಟ್ಟಿ ನೋಡಿ ಅದು ಬೆಚ್ಚಗಿದ್ದರೆ "ದೇಹದಲ್ಲಿ ಬಿಸಿಯುಂಟು, ಬದುಕಿದ್ದಾನೆ" (ಎಂದು ಹೇಳುತ್ತಾರೆ). ಈ ಊಷ್ಣರೂಪವಾದ ಚಿನ್ಹೆ ಇರುವ ತೇಜಸ್ ಕೂಡಾ ಯಾವಾಗ ಅಡಗುತ್ತದೋ ಆಗ ಅದು (ತೇಜಸ್) ಪರದೇವತೆಯಲ್ಲಿ ಶಾಂತವಾಗುತ್ತದೆ. ಈ ಕ್ರಮದಲ್ಲಿ ಮನಸ್ಸು ತನಗೆ ಮೂಲವಾದ ಪಂಚಭೂತಗಳನ್ನು ಸೇರಿಕೊಳ್ಳಲಾಗಿ, ಅದರಲ್ಲಿ ವಾಸವಾಗಿರುವ ಜೀವ ಕೂಡಾ ಸುಷುಪ್ತಿಯಲ್ಲಿ ಸಂಭವಿಸುವಂತೆ ಅವನ ಇರುವಿಕೆಗೆ ಕಾರಣವಾದ ಮನಸ್ಸು ಉಪಸಂಹಾರ ಮಾಡಲ್ಪಟ್ಟಿದ್ದರಿಂದ (ತಾನೂ) ಉಪಸಂಹರಿಸಲ್ಪಟ್ಟು, ಅದು ಸತ್ಯವನ್ನು ಉದ್ದೇಶಿಸಿಕೊಂಡು ಇರುವ ಪಕ್ಷದಲ್ಲಿ ಸನ್ನಾಮಕವಾದ ಬ್ರಹ್ಮವನ್ನು ಪ್ರಾಪಿಸುತ್ತಾನೆ. ಸುಷುಪ್ತಿಯಿಂದ ಎದ್ದು ಬರುವಂತೆ, ದೇಹಾಂತರ ಪಡಿಯುವಗೋಸ್ಕರ ಪುನಹ ಅಲ್ಲಿಂದ ಹೊರಟು ಬರುವದಿಲ್ಲ. ಅವನು ಆತ್ಮಜ್ಞಾನಶೂನ್ಯನಾದಂಥವನಾಗಿದ್ದ ಪಕ್ಷದಲ್ಲಿ, ಸುಷುಪ್ತಿಯಿಂದ ಎದ್ದುಬರುವಂತೆ, ಮೇಲೆ ಹೇಳಿದ ಮೂಲದಿಂದ ಹೊರಟುಕೊಂಡು, ಮೃತಪಟ್ಟು ಪುನಹ ದೇಹರೂಪವಾದ ಬಲೆಯಲ್ಲಿ ಶಿಕ್ಕಿಕೊಳ್ಳುತ್ತಾನೆ ಎಂದು ವಿವರಿಸುತ್ತಾರೆ.

अत्रवाचोमनः प्रकृतिकत्वासंभवात् व्यापारोपरमहेतुभूतसंश्लेषविशेषएव वाचो मनसिलयः। मनसः प्राणे लयोपि तादृशएव॥ प्राणो जीवेन संपन्नः सन् जीवेन सहतेजः शब्दोपलक्षितेषु सर्वेषु भूतेषु सम्पन्नो भवति। ततःपरं सुखदुःखोपभोगायासविश्रमाय तेजःशब्दितानां सजीवानां भूतसूक्ष्माणां परस्यां देवतायां परमात्मनिसम्पत्तिर्भवतीत्यर्थः ॥ (६–८–६) ॥ रं ॥

ರಾಮಾನುಜಾಚಾರ್ಯರ ಅಭಿಪ್ರಾಯ ಪ್ರಕಾರ ವಾಕಿಗೆ ಮನಸ್ಸಿನ ಸ್ವಭಾವ ಇರೋಣ ಅಸಂಭವವಾದ್ದರಿಂದ ಅದಕ್ಕೆ ಮನಸ್ಸಿನಲ್ಲಿ ಲಯವೆಂದರೆ ಅದರ ವ್ಯಾಪಾರ ನಿಲ್ಲುವದಕ್ಕೆ ಹೇತುವಾದ ಆಲಿಂಗನ ವಿಶೇಷ(ಅಂಟಿಕೊಳ್ಳುವದು)ಮಾತ್ರವಾಗಿರುತ್ತದೆ. ಮನಸ್ಸಿಗೆ ಪ್ರಾಣದಲ್ಲಿ ಆಗುವ ಲಯವೂ ಅದೇ ತರಹದ್ದು. ಪ್ರಾಣವು ಜೀವನಿಂದ ಕೂಡಿಕೊಂಡು ಜೀವ ಸಮೇತ ತೇಜಸ್ ಶಬ್ದದಿಂದ ಸೂಚಿಸಲ್ಪಡುವ ಸಕಲ (೫) ಭೂತಗಳಲ್ಲಿ ಅಡಗುತ್ತದೆ. ತರುವಾಯ ಸುಖದುಃಖಗಳನ್ನು ಅನುಭವಿಸಿದದರಿಂದುಂಟಾದ ಆಯಾಸ ಪರಿಹಾರಕ್ಕಾಗಿ ತೇಜಸ್ ಎಂದು ಹೇಳಲ್ಪಡುವ ಜೀವಸಮೇತವಾದ ಪಂಚಭೂತಗಳು ಪರದೇವತೆಯಾದ ಪರಮಾತ್ಮನಲ್ಲಿ ಲಯವಾಗುತ್ತವೆ.

हेसोम्य प्रयतो म्रियमाणस्य मुच्यमानस्य चास्यजीवस्य वाक् वाग्देवीउमा मनसिमनःप्रेरके रुद्रे सम्पद्यते । मनोरुद्रश्च प्राणे। प्राणस्तेजसि श्रीतत्वे सम्पद्यतइत्यन्वेति। प्राणस्य तेजसि सम्पत्तिः द्वारमात्रं नतुलय इतिज्ञेयं। तेजः श्रीतत्वं च परस्यां देवतायां सम्पद्यते । पुरुषाः मृत्यादौ वाग्देवीमुमां प्राप्य परंपरया ईश्वरं प्राप्नुवन्तीत्यर्थः । (६–८–१६) यावत् वाक्उमामनसि रुद्रे न सम्पद्यते मुक्तव्यापारासती न रुद्रे तिष्ठतीति यावत्। एवमग्रेपि ॥ (६–१५–१) ॥ रा ॥ हे सोम्य अस्य पुरुषस्य चतुर्मुखस्य प्रयतः मुच्यमानस्यसतः। चतुर्मुखमुक्ति

ಮಾಧ್ವರು ಪ್ರಸ್ತುತ ವಾಗಾದಿ ಇಂದ್ರಿಯಗಳ ಸಂಗಡ ಅವುಗಳ ಅಭಿಮಾನಿಗಳೆಂಬ ದೇವತೆಗಳ ಸಂಪತ್ತಿಯನ್ನು ಕೂಡಿಸಿ ಹೇಳುವದಲ್ಲದೆ, ಸಮುದಾಯವಾಗಿ ಈ ಜಗತ್ತೆಲ್ಲ ನಾಶಪಡುವಾಗಲೂ ಪ್ರಸ್ತುತ ಶ್ರುತಿಗಳಲ್ಲಿ ಹೇಳುವ ಸಂಪತ್ತಿ ಕ್ರಮವೇ ನಡಿಯುತ್ತದೆಂದು ತೋರಿಸುವದಕ್ಕಾಗಿ, ಅವುಗಳಲ್ಲಿ ಪ್ರಯೋಗಿಸಿರುವ ಪುರುಷಶಬ್ದದಲ್ಲಿ ಮೋಕ್ಷ ಹೊಂದಲಿಕ್ಕೆ ಸಿದ್ಧನಾದ ಚತುರ್ಮುಖ ಬ್ರಹ್ಮನನ್ನು ಶೇರಿಸಿ ಅರ್ಥಮಾಡುತ್ತಾರೆ. ಅದ್ದರಿಂದ ಇವರ ಮತಪ್ರಕಾರ:— ಮರಣಪಡುವ ಮನುಷ್ಯನ ವಾಕ್ (ಅದರ ಅಭಿಮಾನಿ)

काले प्राप्ते सर्ववेदाः वाचिसम्पद्यन्ते वाक् वागभिमान्युमामनसि मनोऽभिमानिरुद्रे सम्पद्यते देहलयमाप्नोति । मनः रुद्रः प्राणे मुख्यवायौसम्पद्यते । प्राणः तेजसिसम्पद्यते। तेजः परस्यां देवतायां परमात्मसमीपे सम्पद्यते । (६—८—६) तस्य म्रियमाणस्य पुरुषस्य वाक् । × । ग्रस्तव्यापारा न भवति ॥ × ॥ ६—१५—१)

ಉಮಾ ಯಾವ ವರೇಗೆ ತನ್ನ ವ್ಯಾಪಾರವನ್ನು ನಿಲ್ಲಿಸಿ ಮನಸ್ (ಎಂದರೆ) ರುದ್ರನಲ್ಲಿ ಶೇರಿಕೊಳ್ಳುವದಿಲ್ಲವೋ (ಇದೇರೀತಿ ವಿಕೃವುಗಳು ಕೂಡಾ) ಆ ವರೇಗೆ ಅವನು ತಿಳಿಯುತ್ತಾನೆ. ಪುರುಷನೆಂದರೆ ಚತುರ್ಮುಖ ಬ್ರಹ್ಮ. ಆತಗೆ ಮುಕ್ತಿಕಾಲ ಪ್ರಾಪ್ತವಾದಾಗ ಸಕಲ ವೇದಗಳು ವಾಕ್‌ನಲ್ಲಿ ಸಂಪತ್ತಿಯನ್ನು (ಲಯವನ್ನು) ಹೊಂದುತ್ತವೆ. ಸಾಯುವವನ ಮತ್ತು ಮೋಕ್ಷ ಹೊಂದುವವನ ವಾಕ್ ವಾಗಭಿಮಾನಿ ಉಮಾದೇವಿಯು ಮನಃಪ್ರೇರಕನಾದಂಥಾ ಅದರ ಅಭಿಮಾನಿ ರುದ್ರನಲ್ಲಿ ಸಂಪತ್ತಿ ಎಂದರೆ ತನ್ನ ದೇಹಾವಸಾನವನ್ನು ಪಡಿಯುತ್ತಾಳೆ. ಮನಸ್ಸು ಮತ್ತು ರುದ್ರ ಕೂಡಾ ಪ್ರಾಣ (ಮುಖ್ಯ ವಾಯುವಿ)ನಲ್ಲಿ ಸಂಪತ್ತಿಯನ್ನು ಪಡಿಯುತ್ತಾರೆ. ಪ್ರಾಣನು ತೇಜಸ್ಸಿನಲ್ಲಿ (ಶ್ರೀತತ್ವದಲ್ಲಿ) ಸಂಪತ್ತಿಹೊಂದುತ್ತಾನೆ. ಆದರೆ ವಾಯುವಿಗೆ ಈ ಶ್ರೀತತ್ವದಲ್ಲಾಗುವ ಸಂಪತ್ತಿಯು ದ್ವಾರಮಾತ್ರವಾಗಿರುತ್ತದೆ, ಲಯವಲ್ಲ ಎಂದು ತಿಳಿಯಬೇಕಾಗಿರುತ್ತದೆ. ತೇಜಸ್ ಮತ್ತು ಶ್ರೀತತ್ವ ಕೂಡಾ ಪರದೇವತೆ ಎಂದರೆ ಪರಮಾತ್ಮನಲ್ಲಿ ಸಂಪತ್ತಿಯನ್ನು ಪಡಿಯುತ್ತದೆ ಎಂದರೆ ಅವನ ಸಮೀಪ ಶೇರುತ್ತದೆ. (ಈ ರೀತಿ) ಜೀವಗಳು ಮರಣ ಮೊದಲಾದ ಸಂಗತಿಗಳಲ್ಲಿ (ಮೋಕ್ಷ ಆಗುವ ವೇಳೆ) ವಾಗಭಿಮಾನಿ ಉಮಾದೇವಿಯನ್ನು ಪ್ರಾಪಿಸಿ (ಅವಳ ಮುಖಾಂತರ) ಪರಂಪರೆಯಿಂದ ಈಶ್ವರನನ್ನು ಪ್ರಾಪಿಸುತ್ತಾರೆಂದು ಅರ್ಥವಾಗಿರುತ್ತದೆ.

## X ನೇ ಪಾಠ.

# ಗತಿ (ಮಾರ್ಗ) ಗಳ ಕುರಿತು.

(१) अथयत्रैतदस्माच्छरीरादुत्क्राम त्यथैतैरेव रश्मिभिरूर्ध्वमाक्रमते । स ओमिति वाहोद्वामीयते । सयावत्क्षिप्येन्मनस्तावदादित्यं गच्छत्येतद्वै खलु लोकद्वारं विदुषां प्रपदनं निरोधोऽविदुषाम् ॥ (८—६—५).

(೧) ಈಗ ಒಬ್ಬ ಮನುಷ್ಯನು ಯಾವಾಗ ಈ ಶರೀರದಿಂದ ಹೊರಟು ಹೋಗುತ್ತಾನೋ ಆಗ ಈ (ಹೃದಯದಲ್ಲಿರುವ) ರಶ್ಮಿಗಳಿಂದಲೇ ಮೇಲೆ ಆಕ್ರಮಿಸುತ್ತಾನೆ. ಮತ್ತು ಓಂಕಾರವನ್ನು ಧ್ಯಾನಿಸುತ್ತಾ ಹೋಗುತ್ತಾನೆ. ಅವನು ಮನಸ್ಸು ಸೋಲುವ ಮೊದಲೇ ಆದಿತ್ಯನನ್ನು ಪ್ರಾಪಿಸುತ್ತಾನೆ. ಯಾಕಂದರೆ ಅದು (ಆದಿತ್ಯನು) ಈ ಲೋಕಕ್ಕೆ ಪ್ರಸಿದ್ಧವಾದ ದ್ವಾರವಾಗಿರುತ್ತದೆ. ವಿದ್ವಾಂಸರು (ಅದನ್ನು) ದಾಟುತ್ತಾರೆ. ಅವಿದ್ವಾಂಸರಿಗೆ ಅದು ತಡೆಯಾಗಿರುತ್ತದೆ.

(२) तदेषश्लोकः । शतञ्चैकाच हृदयस्य नाड्यस्तासां मूर्धानमभिनिःसृतैका तयोर्ध्वमायन्नमृतत्वमेति । विष्वङ्ङन्या उत्क्रमणे भवन्त्युत्क्रमणे भवन्ति ॥ (८--६--६).

(೨) ಈ ಕುರಿತು ಈ (ವಕ್ಷ್ಯಮಾಣ) ಶ್ಲೋಕವು ಪ್ರವೃತ್ತವಾಗಿದೆ. ಹೃದಯಕ್ಕೆ ನೂರು ಮತ್ತೊಂದು (೧೦೧) ನಾಡಿಗಳಿವೆ. ಅವುಗಳಲ್ಲಿ ಒಂದು ಶಿರಸ್ಸಿನಲ್ಲಿ ಪ್ರವೇಶಿಸಿಕೊಂಡುಂಟು. ಅದರಿಂದ ಮೇಲೆ ಹೋದವನು ಅಮೃತಭಾವ (ಮರಣರಾಹಿತ್ಯ)ವನ್ನು ಪ್ರಾಪಿಸುತ್ತಾನೆ. ಮಿಕ್ಕವುಗಳು ಬೇರೆ ಬೇರೆ ಕಡೆಗಳಿಗೆ ಹೋಗುವದಕ್ಕೆ, ಹೋಗುವದಕ್ಕೆ ಉಪಯೋಗವಾದಂಥವುಗಳಾಗಿರುತ್ತವೆ.

(३) तद्यइत्थं विदुर्येचेमेऽरण्ये "श्रद्धातप" इत्युपासते तेऽर्चिषमभिसम्भवन्त्यर्चिषोऽहरह्न आपूर्यमाण पक्षमापूर्यमाण पक्षाद्यान् षडुदङ्ङेति मासाꣳस्तान् ॥ मासेभ्यः संवत्सरꣳ संवत्सरादादित्यमादित्याच्चन्द्रमसं

(೩) ಅವರಲ್ಲಿ (IIನೇ ಪಾಠದಲ್ಲಿ ಹೇಳಿದಂತೆ ಹುಟ್ಟಿದವರಲ್ಲಿ) ಇದನ್ನು (ಈ ಪಂಚಾಗ್ನಿವಿದ್ಯವನ್ನು) ತಿಳದವರು, ಮತ್ತು ಯಾರು ಅರಣ್ಯದಲ್ಲಿ "ಶ್ರದ್ಧಾ ಮತ್ತು ತಪಸ್ಸು" ಈ ಕ್ರಮವನ್ನನುಸರಿಸಿ

चन्द्रमसो विद्युतं तत्पुरुषोऽमानवः स एनान् ब्रह्मगमयत्येष देवयानः पन्थाइति ॥

५-१०-(१, २)

ಉಪಾಸನೆ ಮಾಡುತ್ತಾರೋ ಅಂಥವರು ಪ್ರಕಾಶವನ್ನು ಪ್ರಾಪಿಸುತ್ತಾರೆ. ಪ್ರಕಾಶದಿಂದ ಹಗಲು, ಹಗಲಿನಿಂದ ಶುಕ್ಲ ಪಕ್ಷ, ಶುಕ್ಲಪಕ್ಷದಿಂದ ಸೂರ್ಯನು ಉತ್ತರದಿಕ್ಕಿನಲ್ಲಿ ಸಂಚರಿಸುವ (ಉತ್ತರಾಯಣ) ೬ ಮಾಸಗಳು, ಇವುಗಳಿಗೆ;

(ಆ ೬) ಮಾಸಗಳಿಂದ ಸಂವತ್ಸರಕ್ಕೆ, ಸಂವತ್ಸರದಿಂದ ಸೂರ್ಯ (ಮಂಡಲ)ಕ್ಕೆ ಸೂರ್ಯ (ಮಂಡಲ)ದಿಂದ ಚಂದ್ರ(ಮಂಡಲ)ಕ್ಕೆ, ಚಂದ್ರ(ಮಂಡಲ)ದಿಂದ ಮಿಂಚಿಗೆ (ಹೋಗುತ್ತಾರೆ). ಅಲ್ಲಿ ಮನುಷ್ಯನಲ್ಲದ ಒಬ್ಬ ಪುರುಷನು ಇವರನ್ನು ಬ್ರಹ್ಮಲೋಕಕ್ಕೆ ಸಾಗಿಸುತ್ತಾನೆ. ಇದಕ್ಕೆ ದೇವಯಾನ ಮಾರ್ಗವೆಂದು ಸಂಜ್ಞೆ.

(४) एषदेवपथो ब्रह्मपथ एतेन प्रतिपद्यमाना इमं मानवमावर्तं नावर्तन्ते नावर्तन्ते ॥

(४-१५-६, ५-१०-२)

(೪) ಇದು ದೇವಪಥ (ಮಾರ್ಗ). (ಇದೇ) ಬ್ರಹ್ಮಪಥ (ಮಾರ್ಗ)ವಾಗಿರುತ್ತದೆ. ಇದರಿಂದ ಹೋದವರು ಈ ಮಾನವ (ಸಂಸಾರವೆಂಬ) ಸುಳಿಯಲ್ಲಿ (ಪುನಃ) ಸುಳಿದಾಡುವದಿಲ್ಲ (ಖರೆ) ಸುಳಿದಾಡುವದಿಲ್ಲ.

(५) अथयइमे ग्रामइष्टापूर्तेदत्तमित्युपासते ते धूममभिसम्भवन्ति धूमाद्रात्रिं रात्रेरपरपक्षमपरपक्षाद्यान्षड्दक्षिणैति मासाꣳस्तान्नैते संवत्सरमभिप्राप्नुवन्ति ॥ मासेभ्यः पितृलोकं पितृलोकादाकाशमाकाशाच्चन्द्रमसमेषसोमोराजा तद्देवानामन्नं तं देवा भक्षयन्ति ॥

(५-१०-(३, ४))

(೫) ಇನ್ನು ಯಾರು ಗ್ರಾಮದಲ್ಲಿ "ಇಷ್ಟಾ, ಪೂರ್ತಿ, ದಾನ" ಇವುಗಳ ಮೂಲಕವಾಗಿ ಉಪಾಸಿಸುತ್ತಾರೋ, ಅವರು ಧೂಮವನ್ನು ಸೇರುತ್ತಾರೆ, ಧೂಮದಿಂದ ರಾತ್ರಿ, ರಾತ್ರಿಯಿಂದ ಕೃಷ್ಣಪಕ್ಷ, ಕೃಷ್ಣಪಕ್ಷದಿಂದ (ಸೂರ್ಯ) ದಕ್ಷಿಣಕ್ಕೆ ಹೋಗುವ ಆರು ಮಾಸಗಳು, ಇವುಗಳನ್ನು ಪ್ರಾಪಿಸುತ್ತಾರೆ. ಇವರು ಸಂವತ್ಸರಕ್ಕೆ ತಲ್ಪುವದಿಲ್ಲ.

(ಆ) ಮಾಸಗಳಿಂದ ಪಿತೃಲೋಕಕ್ಕೆ, ಪಿತೃಲೋಕದಿಂದ ಆಕಾಶಕ್ಕೆ, ಆಕಾಶದಿಂದ ಚಂದ್ರ(ಮಂಡಲ)ಕ್ಕೆ ಹೋಗುತ್ತಾರೆ. ಈ ಸೋಮನು ಅರಸು. ಅದು ದೇವತೆಗಳ ಆಹಾರವಾಗಿರುತ್ತದೆ. ಅವನನ್ನು (ಚಂದ್ರರೂಪ ಅನ್ನವನ್ನು) ದೇವತೆಗಳು ಭಕ್ಷಿಸುತ್ತಾರೆ.

(६) तस्मिन्यावत्सम्पातमुषित्वाऽथै तमेवाध्वानं पुनर्निवर्तन्ते । यथेतमाकाश माकाशाद्वायुं वायुर्भूत्वा धूमो भवति धूमो भूत्वाऽभ्रं भवति ॥ अभ्रं भूत्वामेघो भवति मेघो भूत्वाप्रवर्षति । तइहव्रीहियवा ओषधि वनस्पतयस्तिलामाषा इतिजायन्तेऽतोवै ख लुदुर्निष्प्रपतरं योयोह्यन्नमात्ति योरेतः सिञ्च ति तद्भूयएव भवति ॥

(५–१०– (५/६))

(೬) ಅಲ್ಲಿ (ಚಂದ್ರಮಂಡಲದಲ್ಲಿ) ಅವಧಿ ಪರ್ಯಂತರ ವಾಸಿಸಿಕೊಂಡಿದ್ದು, ನಂತರ ಇದೇ (ಈಗ ಹೇಳುವ) ಮಾರ್ಗ ದಲ್ಲಿಯೇ ಪುನಹ ಹಿಂದೆ ಬರುತ್ತಾರೆ. ಹೋದ ಹಾಗೆ (ಪ್ರಥಮತಃ) ಆಕಾಶಕ್ಕೆ, ಆಕಾಶದಿಂದ ವಾಯುವಿಗೆ, ವಾಯುವಾ ಗಿ ಧೂಮ (ಹೊಗೆ)ಯಾಗುತ್ತಾನೆ. ಹೊ ಗೆಯಾಗಿ ಅಭ್ರ (ತುಷಾರ)ವಾಗುತ್ತಾನೆ. ಅಭ್ರವಾಗಿ ಮೇಘವಾಗುತ್ತಾನೆ. ಮೇ ಘವಾಗಿ ಮಳೆ (ಹನಿ)ಯಾಗಿ ಸುರಿಯು ತ್ತಾನೆ. ಅವುಗಳು (ಹನಿಗಳ ರೂಪದಲ್ಲಿ ಇಳಿದು ಬಂದ ಜೀವಗಳು) ಇಲ್ಲಿ ಭತ್ತ, ಯವ, ಗಿಡಮರಗಳು, ಎಳ್ಳು, ಉದ್ದು ಇತ್ಯಾದಿಗಳಾಗುತ್ತಾರೆ. ಇದರಿಂದ (ಈ ಅವ ಸ್ಥೆಯಿಂದ) ತಪ್ಪುವದು ಬಹಳ ಕಷ್ಟ, ಯಾಕಂದರೆ ಯಾರ್ಯಾರು (ಯಾವ ಯಾವ ಪ್ರಾಣಿ) ಆಹಾರವಾಗಿ (ಅದನ್ನು) ತಿನ್ನುತ್ತಾನೋ, ಯಾರು ರೇತಸ್ ಸೇಚನೆ (ಗರ್ಭ ಉತ್ಪತ್ತಿ) ಮಾಡುತ್ತಾನೋ, ಅವನ (ಆ ಪ್ರಾಣಿಯ) ಹಾಗೆಯೇ ಆಗಿ ಇವನು ಹುಟ್ಟು ತ್ತಾನೆ.

(७) तयइह रमणीयचरणा अभ्या शोह यत्तेरमणीयां योनिमापद्येरन् ब्राह्मण योनिं वा क्षत्रिययोनिं वा वैश्ययोनिं वाऽथ यइहकपूयचरणा अभ्याशोह यत्तेकपूयां यो निमापद्येरञ्श्वयोनिं वा सूकरयोनिं वा च ण्डालयोनिं वा ॥ (५–१०–७)

(೭) ಅವರಲ್ಲಿ ಯಾರು ಇಲ್ಲಿ ಒಳ್ಳೇ ಕೆಲಸಗಳನ್ನು ಮಾಡಿರುತ್ತಾರೋ, ಅಂಥ ವರು ಬೇಗನೇ ಒಳ್ಳೇ ಜನ್ಮವನ್ನು ಪಡಿ ಯುತ್ತಾರೆ, ಬ್ರಾಹ್ಮಣ ಜನ್ಮವಾಗಲೀ, ಕ್ಷತ್ರಿಯ ಜನ್ಮವಾಗಲೀ, ವೈಶ್ಯಜನ್ಮವಾಗ ಲಿ. ಪರಂತು ಯಾರು ನಿಂದಿತಕರ್ಮವ ನ್ನು ಮಾಡಿರುತ್ತಾರೋ, ಅಂಥವರು ಬೇಗನೆ ನಿಂದಿತವಾದ ಜನ್ಮವನ್ನು ಪಡಿಯುತ್ತಾರೆ. ನಾಯಿ ಜನ್ಮವಾಗಲೀ, ಹಂದಿಜನ್ಮವಾಗಲೀ, ಚಂಡಾಲಜನ್ಮವಾಗಲಿ.

(८) अथैतयोः पथोर्नकतरेणच न तानीमानिक्षुद्राण्यसकृदावर्त्तीनि भूतानि

(೮) ಇನ್ನು ಈ ಎರಡು ಮಾರ್ಗ ಗಳ ಪೈಕಿ ಯಾವದೊಂದರಿಂದಲೂ ಹೋ

भवन्ति "जायस्व म्रियस्वे" त्येतत्तृतीयꣳ स्थानं । ते नासौलोको न सम्पूर्यते । तस्मा ज्जुगुप्सेत । तदेष श्लोकः ॥ स्तेनोहिरण्यस्य सुरां पिबꣳश्चगुरोस्तल्पमावसन् ब्रह्महा चै तेपतन्तिच त्वारः पञ्चमश्चाऽऽचरꣳस्तैरिति (५-१०-९)

ಗದಂಥವುಗಳು ಪದೇ ಪದೇ ಆವರ್ತಿಸುವ ಡುವ ಈ ಕ್ಷುದ್ರ ಜಂತುಗಳಾಗಿರುತ್ತವೆ. ಇದು "ಹುಟ್ಟು ಸಾಯಿ" ಎನ್ನುವ ಮೂರನೇ ಸ್ಥಾನವಾಗಿರುತ್ತದೆ. ಆದಕಾರಣ ಆ (ಸ್ವರ್ಗ) ಲೋಕವು ಭರ್ತಿಯಾಗುವದಿಲ್ಲ. ಅದರಿಂದ ಅಸಹ್ಯಪಡಬೇಕಾಗಿರುತ್ತದೆ. ಈ ವಿಷಯದಲ್ಲಿ ವಕ್ಷಮಾಣ ಶ್ಲೋಕವು ಪ್ರವೃತ್ತವಾಗಿದೆ.

ಹಣವನ್ನು ಕದಿಯುವವ, ಹೆಂಡಕುಡುಕ, ಗುರುಪತ್ನಿಗಾಮಿ, ಬ್ರಹ್ಮಹತ್ಯ ಮಾಡಿದವ, ಈ ನಾಲ್ವರು ಕೆಳಗೆ ಬೀಳುತ್ತಾರೆ. ಅವರ ಸಂಗಡ ಕೂಡಿ ನಡದವನು ಐದನೆಯವನಾಗಿರುತ್ತಾನೆ.

ಎಂದು (ಪ್ರವಾಹಣನು ಉದ್ದಾಲಕರಿಗೆ ಹೇಳಿದನು.)

## Xನೇ ಖಂಡದ

# ವ್ಯಾಖ್ಯಾನ ಸಂಗ್ರಹ.

(೧) ಹಿಂದೆ IIನೇ ಖಂಡದಲ್ಲಿ ಪ್ರಾಣಿಗಳು ಹುಟ್ಟುವ ರೀತಿ ವಿವರಿಸುವಣಾಗಿದೆ. ಈ ಖಂಡದಲ್ಲಿ ಅವರು ಸತ್ತ ನಂತರ ಅವರ ಗತಿ ಏನಾಗುತ್ತದೆಂದು ಹೇಳೋಣಾಗುತ್ತದೆ.

ಸಾಯುವವರಲ್ಲಿ ೪ ವಿಧದವರು ಇರುತ್ತಾರೆ. ೧ನೇ ವಿದ್ವಾಂಸರು ೨ನೇ IIನೇ ಖಂಡದಲ್ಲಿ ವಿವರಿಸಿದ ಪಂಚಾಗ್ನಿ ಜ್ಞಾನಿಗಳು; ಮತ್ತು ತಪಸ್ವಿಗಳು. ೩ನೇ ಇಷ್ಟಾಪೂರ್ತಿ ಮೊದಲಾದ ಪುಣ್ಯ ಕರ್ಮಗಳನ್ನು ಮಾಡಿದವರು. ೪ನೇ ಪಾಪಿಷ್ಟರು. ಇವರೆಲ್ಲರು ಹೋಗುವ ಮಾರ್ಗವ ಶೇರುವ ಸ್ಥಳ ಸಹ ಒಂದೇ ಅಲ್ಲ. ಬೇರೆ ಬೇರೆಯಾಗಿರುತ್ತವೆ.

## ೧ನೇ ವಿದ್ವಾಂಸರ ಗತಿ (೧ನೇ ಶ್ರುತಿ.)

(೨) ಇಲ್ಲಿ ವಿದ್ವಾಂಸನೆಂದರೆ:—

विद्वान् यथोक्तसाधनसम्पन्नः । [यथोक्तसाधनं दहरविज्ञानं तेन सम्पन्नः विशिष्ट इत्यर्थः ॥ आ] ॥ शं ॥

ಹಿಂದೆ (VIIನೇ ಪಾಠದಲ್ಲಿ) ಹೇಳಿದ ಹೃದಯಾಕಾಶಜ್ಞಾನವಿಶಿಷ್ಟನಾದವನೆಂದು, ಶಂಕರಾಚಾರ್ಯರು,

ಪ್ರಸ್ತುತ ೧ನೇ ಶ್ರುತಿಯು IXನೇ ಪಾಠದ ೪ನೇ ಶ್ರುತಿಯ ನಂತರದ್ದಾಗಿರುತ್ತದೆ. ಆ ಶ್ರುತಿಯಲ್ಲಿ ಪ್ರಸ್ತಾಪಿಸಲ್ಪಟ್ಟ ರೋಗಿ ಅಥವಾ ವೃದ್ಧನೇ ಈ ಶ್ರುತಿಗೆ ವಿಷಯನಾಗಿರುತ್ತಾನೆ. ಅವನ ಕುರಿತು—

एषहृद्गतेश्वरोपासकोज्ञानी ॥ रा ॥ एवमुपासनयाऽपरोक्षीकृतभगवद्रूपसाधिकारिणः ॥ वे ॥

ಹೃದಯದಲ್ಲಿರುವ ಈಶ್ವರೋಪಾಸಕನಾದ ಜ್ಞಾನಿ (ಎಂದರೆ)ಉಪಾಸನೆಯಿಂದ ಭಗವದ್ರೂಪವನ್ನು ಪ್ರತ್ಯಕ್ಷವಾಗಿ ಕಂಡುಕೊಂಡಂಥಾ ಅಧಿಕಾರಿಗಳು ಎಂದು ಮಾಧ್ವರು—
ಸಹ ಅಭಿಪ್ರಾಯ ಪಡುತ್ತಾರೆ.

ಈ ತರಹದವನು ತನ್ನ ಮರಣಕಾಲದಲ್ಲಿ ಹಿಂದೆ VIನೇ ಪಾಠದಲ್ಲಿ ಹೇಳಿದ ಹೃದಯದಲ್ಲಿರುವ ಸೂರ್ಯರಶ್ಮಿಗಳ ಆಧಾರದಿಂದ ದೇಹತ್ಯಾಗಮಾಡಿ ಮೇಲೆ ಹೋದ ಪಕ್ಷದಲ್ಲಿ, ಸೂರ್ಯನನ್ನು ಪ್ರಾಪಿಸುತ್ತಾನೆಂದು ಪ್ರಸ್ತುತ ೧ನೇ ಶ್ರುತಿಯು ಹೇಳುತ್ತದೆ; ಮತ್ತು ಆ ಶ್ರುತಿಯಿಂದ ಸೂರ್ಯನು ವಿದ್ವಾಂಸರಿಗೆ ಮಾತ್ರ ಬ್ರಹ್ಮಲೋಕಪ್ರವೇಶಕ್ಕೆ ದ್ವಾರವಾಗಿರುತ್ತಾನೆ, ವಿದ್ವಾಂಸರಲ್ಲದವರಿಗೆ ತಡೆ ಎಂದು ಸಹ ತಿಳಿದು ಬರುತ್ತದೆ. ಈ ಕಾರಣಗಳಿಂದ:—

अथयत्रयदा एतत् क्रियाविशेषणमिति अस्माच्छरीरादुत्क्रामति अथतदा एतैरेव यथोक्ताभीरश्मिभिरूर्ध्वमाक्रमते । यथा कर्मजितं लोकं प्रेत्यविद्वान् । इतरस्तु विद्वान् यथोक्तसाधनसम्पन्नः स ओमिति ओंकारेणात्मानं ध्यायन् यथापूर्वं, वाह, एव, उत ऊर्ध्वंवा विद्वांश्चेत् । इतरस्तिर्यङ्वेत्यभिप्रा

ಶಂಕರಾಚಾರ್ಯರು, ಅನಂತರ (ಪ್ರಸ್ತುತ ಅಶಕ್ತನು) ಈ ಶರೀರದಿಂದ ಈ ರೀತಿ ಯಾವಾಗ ಹೊರಟು ಹೋಗುತ್ತಾನೋ, ಆಗ ವಿದ್ವಾಂಸನಲ್ಲದವನು ಕರ್ಮದಿಂದ ಸಂಪಾದಿಸಿದ ಲೋಕಕ್ಕೆ ಹೇಗೆ ಹೋಗುತ್ತಾನೊ, ಹಾಗೆ ಈ ಮೊದಲು ಹೇಳಿದ ಸೂರ್ಯರಶ್ಮಿಗಳ ಆಧಾರದಿಂದ

यः । मीयते प्रमीयते गच्छतीत्यर्थः । स विद्वानुत्क्रमिष्यन् यावत्क्षिप्येन्मनः यावताकालेन मनसः क्षेपः स्यात्तावत् तावताकालेन आदित्यं गच्छति प्राप्नोति क्षिप्रं गच्छतीत्यर्थः । न तुतावतैवकालेनेति विवक्षितं । किमर्थं आदित्यं गच्छतीति उच्यते । एतद्वैखलु प्रसिद्धं ब्रह्मलोकस्यद्वारं य आदित्यः । तेन द्वारभूतेन ब्रह्मलोकं गच्छति विद्वान् । अतोविदुषां प्रपदनं । प्रपद्यन्ते ब्रह्मलोकं अनेन द्वारेणेति प्रपदनं । निरोधोऽस्मादादित्यादविदुषां भवतीति निरोधः । सौरेण तेजसा देहएव निरुद्धाः सन्तोमूर्धन्यया नाड्यानोत्क्रामन्त्येवेत्यर्थः ॥ शं ॥

ಮೇಲೆ ಹೋಗುತ್ತಾನೆ; ಎಂದರೆ ಈ ಮೊದಲು ವಿವರಿಸಿದ ಪ್ರಕಾರ ಹೃದಯಾಕಾಶ ಜ್ಞಾನ ಸಂಪನ್ನನಾದವನು, ಶಕ್ತನಾಗಿದ್ದಾಗ ಹೇಗೋ ಹಾಗೆ ಓಂಕಾರದಿಂದ ಆತ್ಮನನ್ನು ಧ್ಯಾನಿಸುತ್ತಾ (ನೆಟ್ಟಗೆ) ಮೇಲಿಯೇ ಹೋಗುತ್ತಾನೆ ವಿದ್ವಾಂಸನಾಗಿರುವ ಪಕ್ಷದಲ್ಲಿ, ಅವಿದ್ವಾಂಸನಾದ ಪಕ್ಷದಲ್ಲಿ ಅಡ್ಡ ಹೋಗುತ್ತಾನೆಂದು ಅಭಿಪ್ರಾಯವಾಗಿರುತ್ತದೆ. ಸಾಯುವ ವಿದ್ವಾಂಸನು ಎಷ್ಟು ಹೊತ್ತಿನಲ್ಲಿ ಸೂರ್ಯನನ್ನು ಪ್ರಾಪಿಸುತ್ತಾನೆಂದರೆ, ಎಷ್ಟು ಹೊತ್ತಿನಲ್ಲಿ ಇವನ ಮನಸ್ಸಿಗೆ ಆಯಾಸ ಉಂಟಾಗುತ್ತದೋ, ಅಷ್ಟು ಹೊತ್ತಿನಲ್ಲಿ ಎಂದರೆ ಶೀಘ್ರವಾಗಿ ಆದಿತ್ಯನನ್ನು ಪ್ರಾಪಿಸುತ್ತಾನೆಂದು ಅರ್ಥವಲ್ಲದೆ, ಅಷ್ಟೇ ಹೊತ್ತಿನಲ್ಲಿ ಎಂತ ತಾತ್ಪರ್ಯವಲ್ಲ. ಯಾವಗೋಸ್ಕರ ಆದಿತ್ಯಮಂಡಲಕ್ಕೆ ಹೋಗುತ್ತಾನೆಂದರೆ, ಈ ಆದಿತ್ಯನೆಂಬವನೇ ಬ್ರಹ್ಮಲೋಕಕ್ಕೆ ಪ್ರಸಿದ್ಧವಾದ ದ್ವಾರವಾಗಿರುತ್ತಾನೆ. ವಿದ್ವಾಂಸನು ಆ ಬಾಗಲಿನಿಂದ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಆದಕಾರಣ ಅದು ವಿದ್ವಾಂಸರ ಮಾರ್ಗವಾಗಿರುತ್ತದೆ. ಈ ಬಾಗಲಿನಿಂದ ಅವರು ಬ್ರಹ್ಮಲೋಕಕ್ಕೆ ಹೋಗುವದರಿಂದ ಆದಿತ್ಯಗೆ ಪ್ರಪದನ (ಮಾರ್ಗ) ವೆಂದು ಹೇಳುವದಾಗಿರುತ್ತದೆ. ವಿದ್ವಾಂಸರಲ್ಲದವರಿಗೆ (ಬ್ರಹ್ಮಲೋಕಕ್ಕೆ ಹೋಗುವದಕ್ಕೆ) ಈ ಆದಿತ್ಯನಿಂದ ಆತಂಕವಾಗುವದರಿಂದ ಅವನು ಆತಂಕವಾಗಿರುತ್ತಾನೆ. (ಅವರು) ಸೂರ್ಯನ ತೇಜಸ್‌ನಿಂದ ದೇಹದಲ್ಲಿಯೇ ನಿರ್ಬಂಧಿಸಲ್ಪಡುವದರಿಂದ, ಮಸ್ತಕದಲ್ಲಿರುವ ನಾಡಿಯಿಂದ ಪ್ರಯಾಣ ಮಾಡುವದಿಲ್ಲವೆಂದು ಅರ್ಥ ಎಂದು ಹೇಳುತ್ತಾರೆ.

एतैरेवरश्मिभिः पूर्वोक्तैरादित्यरश्मिभिरित्यर्थः । × । सः विद्वान् । × । परमात्मानं आह कीर्तयन्नेवच मीयते प्रमीयते च ।×। यद्वा स एतैः रश्मिभिरुन्मीयते उन्नीयते च ।

ರಂಗರಾಮಾನುಜಾಚಾರ್ಯರು, ವಿದ್ವಾಂಸನಾದವನು ಈ ಮೊದಲು ಹೇಳಿದ ಸೂರ್ಯರಶ್ಮಿಗಳಿಂದಲೇ, ಪರಮಾತ್ಮನನ್ನು ನೆನವರಿಕೆ ಮಾಡುತ್ತಾ, ಪ್ರಯಾಣಮಾ

एकोवा शब्दोऽवधारणार्थः । मनोवेगेनादित्यं स गच्छतीत्यर्थः । × । विदुषां ब्रह्मलोकस्य द्वारं प्रपदनं । प्रपद्यतेऽनेनेति प्रपदनं प्राप्तिसाधनं य आदित्यः । × । अविदुषाञ्च निरोधः रोधकः । अविद्वांसोहि सूर्यमंडलभेदासामर्थ्यान्नगन्तुं शक्नुवन्तीत्यर्थः ॥ ५ ॥

ಡುತ್ತಾನೆ. ಅಥವಾ ಅವನು ಈ ರಶ್ಮಿಗಳಿಂದಲೇ ಮೇಲೆ ವೈಯ್ಯಲ್ಪಡುತ್ತಾನೆ. (ಶ್ರುತಿಯಲ್ಲಿರುವ) ಒಂದು "ವಾ" ಶಬ್ದವು ನಿಶ್ಚಯಾರ್ಥ ಉಳ್ಳದ್ದು. ಅವನು ಮನೋವೇಗದಿಂದ ಆದಿತ್ಯಮಂಡಲವನ್ನು ಪ್ರಾಪಿಸುತ್ತಾನೆಂದು ಅರ್ಥ. ಆದಿತ್ಯನು ವಿದ್ವಾಂಸರಿಗೆ ಬ್ರಹ್ಮಲೋಕಕ್ಕೆ ಹೋಗುವದಕ್ಕೆ, ಎಂದರೆ ಆ ಲೋಕವನ್ನು ಪ್ರಾಪಿಸುವದಕ್ಕೆ ಸಾಧನವಾಗಿರುವದರಿಂದ, ದ್ವಾರವಾಗಿರುತ್ತಾನೆ. ವಿದ್ವಾಂಸರಲ್ಲದವರಿಗೆ ತಡೆ ಮಾಡುವಂಥವನು, ಯಾಕಂದರೆ ಅವರು ಸೂರ್ಯಮಂಡಲವನ್ನು ಭೇದಿಸುವದಕ್ಕೆ ಅಸಮರ್ಥರಾದ್ದರಿಂದ, (ಬ್ರಹ್ಮಲೋಕಕ್ಕೆ) ಹೋಗಲಿಕ್ಕೆ ಶಕ್ತರಾಗುವದಿಲ್ಲ ಎಂದು ಹೇಳುತ್ತಾರೆ.

अथयत्रयदाएतत् एषः शरीरादुत्क्रामति अथैतैर्नाडीगतैः रश्मिभिरूर्ध्वे आक्रमते गच्छति । × । स ऊर्ध्वमाक्रममाणः ओमिति वाहा ओमिति नामहरिवाहकेन वायुनो द्वामीयते भद्रीक्रियते । सवायुः यावत् यदा ज्ञानिनं नेतुं मनः क्षिपेत् कुर्वन् भवति तावत्तदादित्यं गच्छति जीवः प्राप्नोति । आदित्यगतिः कुतइत्यत्राह एतद्वै आदित्यमंडलं वै ब्रह्मलोकद्वारं विदुषां प्रपदनं प्राप्यं । अविदुषां निरोधः ॥ ५ ॥ एतैरेव रश्मिभिः नाडीस्थसौररश्मिभिः प्रकाशित नाडीद्वारः ऊर्ध्वे ऊर्ध्वलोकानुसारी आक्रमते गन्तुमभिमुखो भवति । सः ज्ञानी । ओमिति वाहा । वहतीति वाट्वायुः । ते न तत्प्रसादेन उद्वामीयते दिव्यचिद्रूपाख्यवामभावं प्राप्नोति । × । आदित्यं तत्स्थं परमात्मानं गच्छ

ಮಾಧ್ವರು ಅನಂತರ ಯಾವಾಗ ಈ ಜ್ಞಾನಿಯಾದವನು ಶರೀರದಿಂದ ಹೊರಟು ಹೋಗುತ್ತಾನೋ, ಆಗ ಇದೇ ನಾಡಿಗಳಲ್ಲಿರುವ ಸೂರ್ಯನ ರಶ್ಮಿಗಳಿಂದ ಬೆಳಕು ಮಾಡಲ್ಪಟ್ಟ (ಆ) ನಾಡಿಗಳ ದ್ವಾರಾ ಊರ್ಧ್ವಲೋಕವನ್ನು ಹುಡುಕಿಕೊಂಡು ಹೋಗುತ್ತಾನೆ; ಎಂದರೆ (ಅಲ್ಲಿಗೆ) ಹೋಗಲಿಕ್ಕೆ ಸಿದ್ಧವಾಗುತ್ತಾನೋ; ಆಗ ಅವನು ಓಂ ಎಂಬ ಹೆಸರುಳ್ಳ ಹರಿಯ ವಾಹಕ (ಹೊರುವವ)ನಾದ ವಾಯುವಿನಿಂದ, ಎಂದರೆ ಅವನ ದಯೆಯಿಂದ, ಪರಿಷ್ಕಾರ ಮಾಡಲ್ಪಡುತ್ತಾನೆ. ದಿವ್ಯವಾದ ಚಿದ್ರೂಪವೆಂಬ ಸೌಂದರ್ಯಭಾವವನ್ನು ಪಡೆಯುತ್ತಾನೆ (ಎಂದು ಅರ್ಥ). ಆ ವಾಯುವು ಯಾವಾಗ (ಆ) ಜ್ಞಾನಿಯನ್ನು ಸಾಗಿಸುವದಕ್ಕೆ ಮನಸ್ಸು ಮಾಡುತ್ತಾನೋ, ಆಗ

ति । × । एतद्वैखलु आदित्यस्थं ब्रह्मैव खलु लोकद्वारं ब्रह्मलोकस्य द्वारं ॥ वे ॥

ಜೀವನು ಆದಿತ್ಯಮಂಡಲಕ್ಕೆ ಎಂದರೆ ಆದಿತ್ಯನಲ್ಲಿರುವ ಪರಮಾತ್ಮನ ಬಳಿಗೆ ತಲ್ಪುತ್ತಾನೆ. ಆದಿತ್ಯಮಂಡಲಕ್ಕೆ ಯಾಕೆ ಹೋಗಬೇಕೆಂದರೆ, ಈ ಆದಿತ್ಯನ ಮಂಡಲ, ಎಂದರೆ, ಅದರಲ್ಲಿರುವ ಬ್ರಹ್ಮನು, ಬ್ರಹ್ಮಲೋಕಕ್ಕೆ ದ್ವಾರವಾಗಿರುತ್ತಾನೆ; ವಿದ್ವಾಂಸರಿಂದ ಪ್ರಾಪಿಸಲ್ಪಡತಕ್ಕವನು, ವಿದ್ವಾಂಸರಲ್ಲದವರಿಗೆ ಆತಂಕವಾಗಿರುವನು ಎಂದು ಅರ್ಥ ಹೇಳುತ್ತಾರೆ.

## ೨ನೇ ಪಂಚಾಗ್ನಿಜ್ಞಾನಿಗಳು ಮತ್ತು ತಪಸ್ವಿಗಳ ಗತಿ.

(೩) ಇವರೆಲ್ಲ ಈ ಪಾದದ ೩ನೇ ಶ್ರುತಿಯಲ್ಲಿ ಪ್ರಸ್ತಾಪಿಸಲ್ಪಟ್ಟವರಾಗಿರುತ್ತಾರೆ. ಇವರು—

तत्रलोकं प्रत्युत्थितानां अधिकृतानां ग्रहमेधिनां ये इत्थं एवं यथोक्तपञ्चाग्निदर्शनं द्युलोकाद्यग्निभ्योवयं क्रमेणजाता अग्निस्वरूपाः पञ्चाग्न्यात्मान इत्येवं विदुः जानीयुः । × । ये चेमेरण्येवानप्रस्थाः परिव्राजकाश्च [त्रिदंडिनः आ.] सहनैष्टिक ब्रह्मचारिभिः श्रद्धातपइत्येवमाद्युपासते । श्रद्धधानास्तपश्विनश्चेत्यर्थः । उपासनशब्दस्तात्पर्यार्थः । × । ये चसत्यंब्रह्म हिरण्यगर्भाख्यमुपासते ते सर्वे अर्चिरभिमानिनीं देवतां प्रतिपद्यन्ते ॥ शं ॥

ಊರ್ಧ್ವಲೋಕವನ್ನು ಪ್ರಾಪಿಸಲಿಕ್ಕೆ ಯೋಗ್ಯರಾಗಿ ಹುಟ್ಟಿದಂಥಾ ಅಧಿಕಾರಿಗಳಾದ ಕುಟುಂಬೀಕರಲ್ಲಿ ಯಾರು ಈ ಮೊದಲು (IIನೇ ಪಾದದಲ್ಲಿ) ವಿವರಿಸಿದಂತೆ "ದ್ಯುಲೋಕ ಮೊದಲಾದ ಅಗ್ನಿಗಳ ದೆಸೆಯಿಂದ ನಾವು ಕ್ರಮವಾಗಿ ಹುಟ್ಟಿದಂಥವರು, ಅಗ್ನಿಸ್ವರೂಪರು, ಪಂಚಾಗ್ನಿರೂಪಸ್ವಭಾವವುಳ್ಳವರು" ಎಂದು ಈ ರೀತಿ ಪಂಚಾಗ್ನಿವಿದ್ಯವನ್ನು ತಿಳಿದಿರುತ್ತಾರೋ ಅಂಥವರು; ಯಾರು ಅರಣ್ಯದಲ್ಲಿದ್ದುಕೊಂಡು ಶ್ರದಾ ತಪಸ್ ಈ ರೀತಿ ಉಪಾಸನೆ ಮಾಡುತ್ತಾರೋ ಎಂದರೆ ಶ್ರದ್ಧೆ ಉಳ್ಳವರು ಮತ್ತು ತಪಸ್ವಿಗಳಾಗಿರುತ್ತಾರೋ, ಅಂಥಾ ವಾನಪ್ರಸ್ಥರು, ಮತ್ತು ಸನ್ಯಾಸಿಗಳು, ನೈಷ್ಟಿಕ ಬ್ರಹ್ಮಚಾರಿಗಳು ಸಹ; ಮತ್ತು ಸತ್ಯನೆಂಬ ಬ್ರಹ್ಮ (ಎಂದರೆ) ಹಿರಣ್ಯಗರ್ಭನೆಂದು ಹೇಳಲ್ಪಡುವವನನ್ನು ಯಾರು ಉಪಾಸಿಸುತ್ತಾರೋ, ಅಂಥವರು;

ಇವರೆಲ್ಲರೂ ಪ್ರಕಾಶಾಭಿಮಾನಿ ದೇವತೆಯನ್ನು ಪ್ರಾಪಿಸುತ್ತಾರೆ, ಎಂದು ಶಂಕರಾಚಾರ್ಯರು ವಿವರಿಸುತ್ತಾರೆ.

प्राक् प्रस्तुतस्य संसरतो जीवस्य स्व रूपं तदित्यनेन परामृश्यते। तत्प्रत्यगात्मस्व रूपं येइत्थं उक्तप्रकारेण द्युपर्जन्यपृथिवीपु रुषयोषित्सु श्रद्धासोमवृष्ट्यन्नरेतःशरीरकत या देहादिलक्षणप्रकृतिविविक्ततया च ये विदुरित्यर्थः। अत्र ब्रह्मात्मकतया चेत्यपि योजनीयं। ×। अरण्येस्थित्वा श्रद्धां पुरस्कृ त्यतपः शब्दितं ब्रह्मोपासत इत्यर्थः। ×। यद्वा श्रद्धातपः शब्दयोः प्रसिद्धएवार्थः।×। ततश्च ब्रह्मविद्यानिष्ठइत्यर्थः।×। तेऽर्चिर्देव ता मातिवाहिकतया प्राप्नोतीत्यर्थः॥ रं॥

ಈ ಮೊದಲು ಹೇಳಿದ ಪ್ರಸ್ತುತ ಸಂಸಾರಿಗಳಾದ ಜೀವರಲ್ಲಿ ಯಾರು ಪ್ರತ್ಯಗಾತ್ಮ ಸ್ವರೂಪವನ್ನು ಮೇಲೆ (IIನೇ ಪಾದದಲ್ಲಿ) ವಿವರಿಸಿದಂತೆ ದ್ಯುಪರ್ಜನ್ಯ ಪೃಥ್ವಿ ಪುರುಷ ಸ್ತ್ರೀಗಳಲ್ಲಿ (ಕ್ರಮವಾಗಿ) ಶ್ರದ್ಧಾ, ಚಂದ್ರ, ಮಳೆ, ಅನ್ನ, ರೇತಸ್, ಸಂಬಂಧವಾದ ಶರೀರ ಉಳ್ಳವನಾಗಿಯೂ ದೇಹೇಂದ್ರಿಯಾದಿ ಲಕ್ಷಣಉಳ್ಳ ಪ್ರಕೃತಿಯಿಂದ ಭಿನ್ನವಾಗಿಯೂ ಬ್ರಹ್ಮನ ಸ್ವಭಾವ ಉಳ್ಳವನಾಗಿಯೂ ಇರುವನೆಂದು ಕೂಡಾ ತಿಳಿಯುತ್ತಾನೋ ಮತ್ತು—

ಅರಣ್ಯದಲ್ಲಿದ್ದುಕೊಂಡು ಶ್ರದ್ಧಾಪುರಸ್ಸರವಾಗಿ ತಪಸ್ ಎಂದು ಹೆಸರುಳ್ಳ ಬ್ರಹ್ಮನನ್ನು ಯಾರು ಉಪಾಸಿಸುತ್ತಾರೋ; ಅಥವಾ—

ಯಾರು ಶ್ರದ್ಧಾ ತಪಃಪರಾಯಣರಾಗಿ ಬ್ರಹ್ಮವಿದ್ಯಾನಿಷ್ಠರಾಗಿರುತ್ತಾರೋ;

ಇವರೆಲ್ಲ ಪ್ರಕಾಶ (ಅಭಿಮಾನಿ) ದೇವತೆಯನ್ನು ಅತಿವಾಹಿಕ (ಪ್ರೇತಶರೀರ)ಭಾವದಲ್ಲಿ ಪ್ರಾಪಿಸುತ್ತಾರೆಂದು ಅರ್ಥ ಎಂದು ರಾಮಾನುಜಾಚಾರ್ಯರು ವಿವರಿಸುತ್ತಾರೆ.

येऽधिकारिणः इत्थं उक्तप्रकारेण तत् पञ्चाग्निस्वरूपं विदुः। येचामी अरण्ये श्रद्धातपः इतिशब्दः प्रभृत्यर्थः। श्रद्धापूर्वकं तपः प्रभृत्यनुतिष्ठन्ति निवृत्तकर्मानुष्ठानपूर्वं भगवध्यानादिकं कुर्वन्ति ते ज्ञानिनो अर्चिषं अर्चिर्लोकमभिसम्भवन्ति प्राप्नुवन्ति॥ ×॥ रा॥ तत्रविरक्ताः पञ्चाग्निविद्योक्तरीत्या भगवन्तं विदुः। ये चमनोहरप्रदेशे श्रद्धातपः प्रभृति निवृत्तकर्म अनुतिष्ठन्ति ये ज्ञानप्रधानाइतियावत्॥ वे॥

ಯಾರು ವಿರಕ್ತರು ಮತ್ತು ಅಧಿಕಾರಿಗಳಾಗಿದ್ದುಕೊಂಡು ಈ ಮೊದಲು (IIನೇ ಪಾದದಲ್ಲಿ) ವಿವರಿಸಿದಂತೆ, ಪಂಚಾಗ್ನಿಸ್ವರೂಪ ಎಂದರೆ ಪಂಚಾಗ್ನಿವಿದ್ಯದಲ್ಲಿ ಹೇಳಿದ ರೀತಿಯಲ್ಲಿ ಭಗವಂತನನ್ನು ತಿಳದಿರುತ್ತಾರೋ; ಮತ್ತು ಯಾರು ಅರಣ್ಯದಲ್ಲಿ ಮನೋಹರವಾದ ಪ್ರದೇಶದಲ್ಲಿ ಶ್ರದ್ಧೆಯಿಂದ, ಅಥವಾ ಶ್ರದ್ಧಾ, ತಪಸ್ ಮೊದಲಾದ ನಿವೃತ್ತ ಕರ್ಮಾನುಷ್ಠಾನಪೂರ್ವಕವಾಗಿ, ಭಗವಂತನ ಧ್ಯಾನಾದಿಗಳನ್ನು ಮಾಡಿಕೊಂಡು ಜ್ಞಾನ ಬಾಹುಳ್ಯ ಉಳ್ಳವರಾಗಿರುತ್ತಾರೋ; ಇಂಥವರು ಪ್ರಕಾ

ಶಲೋಕವನ್ನು ಪ್ರಾಪಿಸುತ್ತಾರೆ; ಎಂದು ಮಾಧ್ವರ ವ್ಯಾಖ್ಯಾನವಾಗಿರುತ್ತದೆ.

ಅಲ್ಲಿಂದ ಅವರು ಹಗಲು ಮೊದಲಾದ ಸ್ಥಳಗಳಿಗಾಗಿ ಮಿಂಚಿಗೆ ತಲ್ಪುತ್ತಲೇ ಅಲ್ಲಿಂದ ಬ್ರಹ್ಮಲೋಕಕ್ಕೆ ಕಳುಹಿಸಲ್ಪಡುತ್ತಾರೆ. ಈ ಮಾರ್ಗಕ್ಕೆ ದೇವಪಥ ಎಂದು ಸಂಜ್ಞೆ ಇದೆ ಎಂದು (೩—೪ನೇ ಶ್ರುತಿಗಳಲ್ಲಿ) ಹೇಳಲಾಗಿದೆ.

देवपथः देवैरर्चिरादिभिर्गमयितृत्वेनाधिकृतैरुपलक्षितः पन्थाः देवपथ इत्युच्यते । ब्रह्मगन्तव्यं तेन चोपलक्षितइति ब्रह्मपथः । × । तान् पुरुषः कश्चिद्ब्रह्मलोकादागत्य अमानवः मानव्यांसृष्टो भवो मानवः नमानवः अमानवः सपुरुषः एतान् ब्रह्म सत्यलोकस्थं गमयति । × । एषदेवयानः पन्थाः । × । सत्यलोकावसानो नाण्डाद्बहिः ॥ शं ॥

ಶಂಕರಾಚಾರ್ಯರು (ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ) ಕಳುಹಿಸಿಕೊಡುವದಕ್ಕೆ ನೇಮಕಪಟ್ಟ ಪ್ರಕಾಶ ಮೊದಲಾದವುಗಳ ದೇವತೆಗಳಿಂದ ಸೂಚಿಸಲ್ಪಡುವಂಥಾ ದಾರಿಯಾಗಿರುವ ಕಾರಣ, ಪ್ರಸ್ತುತ ಪಥ (ಮಾರ್ಗ)ಕ್ಕೆ ದೇವಪಥ ಎಂದು ಹೇಳುವದಾಗಿರುತ್ತದೆ. ಮತ್ತು ಅದು ಹೋಗಿ ಶೇರತಕ್ಕ ಬ್ರಹ್ಮನನ್ನು ಸಹ ಸೂಚಿಸುವ ಕಾರಣ ಬ್ರಹ್ಮಪಥವಾಗಿರುತ್ತದೆ. ಈ ಮಾರ್ಗದಿಂದ ಹೋದವರನ್ನು ಬ್ರಹ್ಮಲೋಕದಿಂದ (ಈ) ಮನುಷ್ಯಪ್ರಪಂಚದಲ್ಲಿ ಹುಟ್ಟಿದವನಲ್ಲದ ಒಬ್ಬ ಪುರುಷನು ಬಂದು ಸತ್ಯಲೋಕದಲ್ಲಿರುವ ಬ್ರಹ್ಮನ ಬಳಿಗೆ ಕರದುಕೊಂಡು ಹೋಗುತ್ತಾನೆ. ಈ ದೇವಯಾನ ಮಾರ್ಗವು ಸತ್ಯಲೋಕ ಪರಿಯಂತರ ಮಾತ್ರ ಚಾಚಿಕೊಂಡುಂಟಲ್ಲದೆ ಬ್ರಹ್ಮಾಂಡದ ಹೊರಗೆ ಮೀರಿಕೊಂಡಿಲ್ಲ ಎಂದು ವಿವರಿಸುತ್ತಾರೆ.

देवैः आतिवाहिकैर्नीयमानः पन्थाः देवपथः । ब्रह्मप्रापकः पन्थाः ब्रह्मपथः ।×। तत्पुरुषः वैद्युतः पुरुषः अमानवः असंसारी ब्रह्म लोकादागत्य एनान् पूर्वोक्तद्विविधोपासकान् ब्रह्मलोकं प्रापयतीत्यर्थः ॥ रं ॥

ರಾಮಾನುಜಾಚಾರ್ಯರು, ದೇವಪಥ (ಮಾರ್ಗ), ಎಂದರೆ ಆತಿವಾಹಿಕರೆಂಬ ದೇವತೆಗಳು ಕರೆದುಕೊಂಡುಹೋಗುವಂಥಾ ಮಾರ್ಗ, ಬ್ರಹ್ಮನನ್ನು ಪ್ರಾಪಿಸುವ ದಾರಿಯಾದ್ದರಿಂದ (ಅದಕ್ಕೆ) ಬ್ರಹ್ಮಪಥ (ಎಂದು ಸಂಜ್ಞೆ). ಬ್ರಹ್ಮಲೋಕದಿಂದ ಸಂಸಾರಿಯಲ್ಲದ ಒಬ್ಬ ವಿದ್ಯುತ್ ಪುರುಷನು ಬಂದು (ಇಲ್ಲಿಂದ ಹೋದ) ಮೇಲೆ ಹೇಳಿದ ಎರಡು ವಿಧದ ಉಪಾಸಕರನ್ನು ಬ್ರಹ್ಮಲೋಕಕ್ಕೆ ತಲ್ಪಿಸುತ್ತಾನೆಂದು ವಿವರಿಸುತ್ತಾರೆ.

संवत्सराभिमानिलोकं । तस्माच्चादित्य मंडलं तस्माच्चन्द्रमण्डलं तस्माच्चवैद्युतं विद्युन्नामकवायुपत्निलोकं । तत्पुरुषः तस्याविद्युन्नामवाण्याभर्त्ता [भारत्याः पतिः] मानवो वायुः । × । ब्रह्मगमयति । × । अत्रप्रतीकालम्बनान् कार्यब्रह्म चतुर्मुखं नयत्य प्रतीकालम्बनान् परंब्रह्म नयतीति ब्रह्मपदस्य कार्यब्रह्म परब्रह्मो भयपरत्वमधिकारि भेदेनज्ञेयं । × । एषदेवपथो देवैरभिमन्यमानमार्गः । ब्रह्मपथः ब्रह्मप्राप्तिमार्गः ॥ रा ॥

तेज्ञानिनः । + । हृदयाग्रप्रज्वलनप्रकाशितद्वारेण ब्रह्मनाड्या देहादुत्क्रांता अर्चिषं अर्चिर्नामकमूर्ध्वलोकं संभवन्त्येव प्राप्नुवन्त्येव । + । तत्रकञ्चनकालं स्थित्वातेन पूजिताः अर्चिषोर्चिर्लोकादातिवाहिकाख्य वायुलोकं, प्राप्यततोऽहरभिमानिदेवतालोकं प्राप्नुवन्ति । × । संवत्सरात्तटिद्वरुणप्रजापतिप्राप्तिद्वाराऽऽदित्यं आदित्याचन्द्रमसं चन्द्रमसो वैश्वानरेन्द्रध्रुवद्वारा विद्युतं विद्युन्नाम्नीं भारतीं प्राप्नुवन्ति । ततः तस्याः पुरुषो भर्त्ता मानवो मननान्मनुर्भगवान् तस्यायं प्रियभृत्योमुख्यवायुस्तं गच्छति ।+।
॥ वे ॥

ಮಾಧ್ವರಲ್ಲಿ ಒಬ್ಬರು (೩ನೇ ಶ್ರುತಿಯ ೨ನೇ ಭಾಗದಲ್ಲಿ ಹೇಳಿದಂತೆ) ಸಂವತ್ಸರ ಎಂದರೆ ಸಂವತ್ಸರಾಭಿಮಾನಿಲೋಕದಿಂದ ಆದಿತ್ಯಮಂಡಲಕ್ಕೆ, ಆದಿತ್ಯಮಂಡಲದಿಂದ ಚಂದ್ರಮಂಡಲಕ್ಕೆ, ಅಲ್ಲಿಂದ ವಿದ್ಯುತ್ತಿಗ (ಪ್ರಯಾಣಸ್ಥನು) ಹೋಗುತ್ತಾನೆಂದು ವಿವರಿಸುವಾಗ್ಯೆ,

ಇನ್ನೊಬ್ಬರು, ಈ ಮಾರ್ಗದಲ್ಲಿ ಹೋಗುವ ಜ್ಞಾನಿಗಳಿಗೆ (ಅವರ ಮರಣಕಾಲದಲ್ಲಿ) ಹೃದಯದ ಉಪರಿಭಾಗವು ಸುಟ್ಟು ಅದರಿಂದುಂಟಾಗುವ ಜ್ವಾಲೆಯಿಂದ ಪ್ರಕಾಶಿಸಲ್ಪಡುವ ಬ್ರಹ್ಮನಾಡಿಯಿಂದ ಉತ್ಕ್ರಾಂತಿಯಾಗಿ, ಅವರು ಅರ್ಚಿ (ಪ್ರಕಾಶ) ಎಂಬ ಊರ್ಧ್ವ (ಮೇಲ್ಗಡೆ ಇರುವ) ಲೋಕವನ್ನು ಪ್ರಾಪಿಸುತ್ತಾರೆ. ಅಲ್ಲಿ ಕೆಲವು ಕಾಲ ವಾಸಿಸಿಕೊಂಡಿದ್ದು, ಅಲ್ಲಿ (ಆ ದೇವತೆಯಿಂದ) ಪೂಜಿಸಲ್ಪಟ್ಟು ಅಲ್ಲಿಂದ ಆತಿವಾಹಿಕನೆಂಬ ವಾಯುವಿನ ಲೋಕವನ್ನು ಪ್ರಾಪಿಸಿ ಆ ಲೋಕದಿಂದ ಅಹರ್ (ಹಗಲು) ಅಭಿಮಾನಿದೇವತಾ ಲೋಕವನ್ನು ಪ್ರಾಪಿಸುತ್ತಾರೆ. ಸಂವತ್ಸರದಿಂದ, ತಟಿತ್ತು ವರುಣ, ಪ್ರಜಾಪತಿದ್ವಾರಾ ಆದಿತ್ಯನನ್ನೂ, ಅಲ್ಲಿಂದ ಚಂದ್ರಮಂಡಲ, ಚಂದ್ರಮಂಡಲದಿಂದ ವೈಶ್ವಾನರ, ಇಂದ್ರ, ಧ್ರುವನ ದ್ವಾರಾ ವಿದ್ಯುತ್ತಿಗೆ (ಹೋಗುತ್ತಾನೆ) ಎಂಬದಾಗಿ ಕೆಲವು ವಿಶ್ರಾಮ ಸ್ಥಾನಗಳನ್ನು ಹೆಚ್ಚಾಗಿ ಸೇರಿಸಿ ವ್ಯಾಖ್ಯಾನಮಾಡಿರುತ್ತಾರೆ.

ಇವರ ಮತಪ್ರಕಾರ ವಿದ್ಯುತ್ (ಮಿಂಚು) ವಾಯುಪತ್ನಿಯಾದ ಭಾರತಿಯ ಲೋ

ಕವಾಗಿರುತ್ತದೆ. ಅವಳಿಗೆ ವಾಣೀ ಎಂತಲೂ ಹೇಳೋಣಾಗುತ್ತದೆ. ಈ ಪ್ರಯಾಣಸ್ಥನನ್ನು ಬ್ರಹ್ಮನ ಬಳಿಗೆ ಕೊಂಡುಹೋಗಿ ಶೇರಿಸುವವನು ಅವಳ ಗಂಡ ವಾಯುವಾಗಿರುತ್ತಾನೆ. ಅವನು ಮನು ಎಂದರೆ ಜ್ಞಾನಿಯಾದ ಭಗವಂತನ ಪ್ರೀತಿಗೆ ಆಸ್ಪದನಾದ ಅವನ ಮುಖ್ಯ ಸೇವಕನಾಗಿರುವದರಿಂದ ಮಾನವನು (ಎಂದು ಹೇಳುವದಾಗಿರುತ್ತದೆ) ಎಂತಲೂ,

ಇಲ್ಲಿ ಬ್ರಹ್ಮನೆಂದರೆ ಆಯಾ ಅಧಿಕಾರಿಗೆ ತಕ್ಕಹಾಗೆ (ಸಂಗತ್ಯಾನುಸಾರ) ಕಾರ್ಯಬ್ರಹ್ಮ—ಪರಬ್ರಹ್ಮ ಈ ೨ ವಿಧದ ಬ್ರಹ್ಮಪರವಾಗಿಯೂ ತಿಳಿಯಬೇಕು. ಪ್ರಯಾಣಸ್ಥರು ಪ್ರತೀಕಾಲಂಬಿಗಳಾಗಿದ್ದ ಪಕ್ಷದಲ್ಲಿ ಅವರನ್ನು ಚತುರ್ಮುಖ ಬ್ರಹ್ಮನ ಬಳಿಗೂ, ಅಪ್ರತೀಕಾಲಂಬಿಗಳಾಗಿದ್ದ ಪಕ್ಷದಲ್ಲಿ ಪರಬ್ರಹ್ಮನ ಬಳಿಗೂ (ಮೇಲೆ ಕಾಣಿಸಿದ ವಾಯುವು) ಸೇರಿಸುತ್ತಾನೆ. ದೇವಪಥ ಎಂದರೆ ದೇವತೆಗಳಿಂದ ಅಭಿಮಾನಿಸಲ್ಪಟ್ಟ ಮಾರ್ಗ, ಬ್ರಹ್ಮಪಥ ಎಂದರೆ ಬ್ರಹ್ಮಪ್ರಾಪ್ತಿ ಮಾರ್ಗ ಎಂತಲೂ ವಿವರಿಸುತ್ತಾರೆ.

## ೪.—(೩ನೇ) ಇಷ್ಟಾಪೂರ್ತ ಮೊದಲಾದ ಪುಣ್ಯ ಕರ್ಮಗಳನ್ನು ಮಾಡುವ ಗ್ರಾಮನಿವಾಸಿಕರ ಗತಿ.

ग्रामइतिप्रदस्थानां असाधारणं विशेषणं । अरण्यवासिभ्योव्यावृत्यर्थं । × । इष्टं अग्निहोत्रादि वैदिकं कर्म । पूर्तंवापीकूपतटाकारामादिकरणं । दत्तश्चबर्हिर्वेदि । यथाशक्त्यर्हेभ्यो द्रव्यसंविभागः दत्तं । इति एवं विधं परिचरणपरित्राणाद्युपासते । × । तेदर्शनवर्जितत्वाद्धूमाभिमानिनीं देवतामाभिमुख्येन प्रतिपद्यन्ते । तयातिवाहिताः धूमाद्रात्रिदेवतां । × । संघचारिण्योहि षण्मासदेवताइति बहुवचनप्रयोगः । × । देवताइन्द्रादयः । × । अन्नमित्युपकरणमात्रविवक्षितत्वात् । न हितेकबळोत्क्षेपेण देवैर्भक्ष्य

ಶಂಕರಾಚಾರ್ಯರು—ಈ ೩ನೇ ತರಹದವರಿಗೆ (೫ನೇ ಶ್ರುತಿಯಲ್ಲಿ ಹೇಳುವ) ಗ್ರಾಮನಿವಾಸಿಗಳೆಂಬ ವಿಶೇಷಣವನ್ನು ಕೊಟ್ಟದ್ದು ಅರಣ್ಯವಾಸಿಗಳಾದ ಗೃಹಸ್ಥರಿಂದ ಇವರನ್ನು ಪ್ರತ್ಯೇಕಿಸಿ ತಿಳಿಯಿಸುವ ಗೋಸ್ಕರವಾದ್ದರಿಂದ ಅದು ಇವರಿಗೆ ಮಾತ್ರ ಸಂಬಂಧಪಟ್ಟದ್ದು. ಇಷ್ಟ ಎಂದರೆ ಅಗ್ನಿಹೋತ್ರಾದಿ ವೈದಿಕ ಕರ್ಮಗಳು, ಪೂರ್ತ ಎಂದರೆ ವಾಪಿ (ಕೆರೆ) ಕೂಪ (ಬಾವಿ) ತಟಾಕ (ಸರೋವರ) ಆರಾಮ (ತೋಟ) ಇತ್ಯಾದಿಗಳು, ದತ್ತ ಎಂದರೆ ಯಜ್ಞಭೂಮಿಯ ಹೊರಗೆ, ಯೋಗ್ಯರಿಗೆ

न्ते। किन्तर्हि? उपकरणमात्रं देवानां भवन्ति ते। स्त्रीपशुभृत्यादिवत्। ×। न च तेषां स्त्र्यादीनां पुरुषोपभोग्यत्वेप्युपभोगो नास्ति। तस्मात्कर्मिणो देवानां उपभोग्या अपिसन्तः सुखिनो देवैः क्रीडन्ते। शरीरञ्चतेषां सुखोपभोगयोग्यं चन्द्रमण्डले आप्यमारभ्यते। तदुक्तं पुरस्ताच्छ्रद्धाशब्द्या आपोद्युलाकाग्नौ हुताः सोमोराजासंभवतीति। ताआपः कर्मसमवायिन्यइतरैश्च भूतैरनुगताः द्युलोकं प्राप्य चन्द्रत्वमापन्नाः शरीरारंभिका इष्टाद्युपासकानां भवन्ति। अन्यायान्चशरीराहुतावग्नौ हुतायामग्निनादह्यमाने शरीरे तदुत्थाआपो धूमेन सहोर्ध्वं यजमानमावेष्ट्य चन्द्रमण्डलंप्राप्य कुशमृत्तिकास्थानीयाबाह्यशरीरारंभिका भवन्ति॥ ॥ शं॥

ಯಥಾಶಕ್ತಿ ದ್ರವ್ಯ ಹಂಚೋಣ. ಈ ತರಹದ ಗುರು ಮೊದಲಾದವರ ಸೇವೆ ಮತ್ತು ರಕ್ಷಣೆ ಕೆಲಸಗಳನ್ನು ಯಾರು ಮಾಡುತ್ತಾರೋ ಅಂಥಾ ಕುಟುಂಬೀಕರು ದರ್ಶನ (ನಿಜವಾದ ದೃಷ್ಟಿ) ಎಂದರೆ ಉಪಾಸನಾ ವರ್ಜಿತರಾದ ಕಾರಣ ಸೀದಾ ಧೂಮಾಭಿಮಾನಿ ದೇವತೆಯನ್ನು ಶೇರುತ್ತಾರೆ. ಆ ದೇವತೆಯಿಂದ ವೈಯ್ಯಲ್ಪಟ್ಟು ಧೂಮದಿಂದ ರಾತ್ರಿ ದೇವತೆಯನ್ನು ಪ್ರಾಪಿಸುತ್ತಾರೆ. (ಅಲ್ಲಿಂದ ಕೃಷ್ಣಪಕ್ಷ ದೇವತೆ ಇತ್ಯಾದಿ ಶ್ರುತಿಯಲ್ಲಿ ಹೇಳಿದಂತೆ) ಆರು ತಿಂಗಳುಗಳ ದೇವತೆಗಳು ಒಟ್ಟುಮೇಳವಾಗಿ ಸಂಚರಿಸುವವರಾದ್ದರಿಂದ ಅವರ ಕುರಿತು ಬಹುವಚನವನ್ನು ಪ್ರಯೋಗಿಸಿದ್ದಾಗಿರುತ್ತದೆ (೫ನೇ ಶ್ರುತಿಯಲ್ಲಿ ಹೇಳಿದ) ದೇವತೆಗಳೆಂಬವರು ಇಂದ್ರಾದಿಗಳಾಗಿರುತ್ತಾರೆ. ಅನ್ನಶಬ್ದದಿಂದ ಭೋಗಸಾಧನ ಮಾತ್ರ ನಿರೀಕ್ಷಿಸಲ್ಪಟ್ಟದೆ. ದೇವತೆಗಳು ಇವರನ್ನು ಬಾಯೊಳಗೆ ಹಾಕಿಕೊಂಡು ತಿನ್ನುವದಿಲ್ಲ. ಹಾಗಾದರೆ ಏನು? ಎಂದರೆ (ಅರಸಿಗೆ) ಸ್ತ್ರೀ, ಪಶು, ಸೇವಕರು ಹೇಗೋ, ಹಾಗೆ ಇವರು ದೇವತೆಗಳ ಸುಖಕ್ಕೆ ಅನುಕೂಲರಾಗುತ್ತಾರೆ. ಇದು ಹೊರತು ಪುರುಷಸೌಖ್ಯಕ್ಕೆ ಅನುಕೂಲರಾದ ಸ್ತ್ರೀ ಮೊದಲಾದವರಿಗೆ (ಸ್ವಂತ) ಸುಖವಿಲ್ಲ ಎಂತ ಇಲ್ಲ, ಆದಕಾರಣ (ಪುಣ್ಯ) ಕರ್ಮಿಗಳಾದಂಥವರು ದೇವತೆಗಳಿಗೆ ಉಪಭೋಗ್ಯರಾಗಿದ್ದುಕೊಂಡು ಅವರೊಡನೆ (ತಾವು ಕೂಡಾ) ಸುಖದಿಂದ ಆಡಿಕೊಂಡಿರುತ್ತಾರೆ. ಇವರಿಗೆ ಆ ಸುಖಗಳನ್ನು ಅನುಭವಿಸಲಿಕ್ಕೆ ಯೋಗ್ಯವಾದ ಜಲಬಾಹುಳ್ಯ ಉಳ್ಳ ದೇಹವು ಚಂದ್ರಮಂಡಲದಲ್ಲಿ ಆರಂಭವಾಗುತ್ತದೆ. ಈ ಸಂಗತಿ ದ್ಯುಲೋಕ (ಸ್ವರ್ಗ) ರೂಪವಾದ ಅಗ್ನಿಯಲ್ಲಿ ಹೋಮಿಸಲ್ಪಟ್ಟಂಥಾ ಶ್ರದ್ಧಾ ಶಬ್ದವಾಚ್ಯವಾದ ಜಲವು ಸೋಮರಾಜವಾಗುತ್ತದೆಂದು ಈ ಮೊದಲೇ (IIನೇ ಪಾರದಲ್ಲಿ) ಹೇಳೋಣಾಗಿದೆ. ಕರ್ಮಸಂಬಂಧಿಯಾದ

ಆ ಜಲವು ಇತರ ಭೂತ (ಪೃಥಿವ್ಯಾದಿ)ಗಳಿಂದ ವ್ಯಾಪಿಸಲ್ಪಟ್ಟು ದ್ಯುಲೋಕ (ಸ್ವರ್ಗ)ವನ್ನು ಪ್ರಾಪಿಸಿ ಚಂದ್ರಭಾವವನ್ನು ಪಡದು ಇಷ್ಟಾದ್ಯುಪಾಸಕ (ಈ ೩ನೇ ತರಹದವ)ರಿಗೆ ದೇಹೇಂದ್ರಿಯಾದಿಗಳು ಉಂಟಾಗುವದಕ್ಕೆ ಮೂಲಕಗಳಾಗುತ್ತವೆ. ಅಂತ್ಯದಲ್ಲಿ ಅಗ್ನಿಯಲ್ಲಿ ಕೊಟ್ಟ ಶರೀರಾಹುತಿಯುಹುತವಾಗಿ ಅದರಿಂದ ಏಳುವ ಜಲವು ಹೊಗೆಯ ಸಮೇತವಾಗಿ ಯಜಮಾನನ್ನು ಸುತ್ತಿಕೊಂಡು ಮೇಲೆ ಚಂದ್ರಮಂಡಲಕ್ಕೆ ಏರಿ (ಅಲ್ಲಿ) ದರ್ಭೆ, ಮೃತ್ತಿಕೆಗಳಂತೆ ಉಪಕರಣಭೂತವಾದ ಇವರ ಹೊರಶರೀರ ಉತ್ಪನ್ನವಾಗಲಿಕ್ಕೆ ಕಾರಣವಾಗುತ್ತದೆ ಎಂಬದಾಗಿ ವಿವರಿಸುತ್ತಾರೆ.

इतिशब्दस्तज्जातीयोपवासादि कर्मान्तरपरः । × । तस्याहुतेः सोमोराजासंभवतीति न्यायेन स्वर्गभोगयोग्यदिव्यदेहयुक्तो भवतीत्यर्थः । अन्नवत्सदेवानां उपकरणभूतो भवतीत्यर्थः । तं इष्टादिकारिणं देवभावमुपगतं आजानसिद्धादेवाः भक्षयन्ति स्वकैङ्कर्येषु पशूनिवानियुञ्जत इत्यर्थः ॥ रं ॥

ರಾಮಾನುಜಾಚಾರ್ಯರು, (೫ನೇ ಶ್ರುತಿಯಲ್ಲಿರುವ) ಇತಿ (ಈ ತರಹದ) ಎಂಬ ಶಬ್ದವು ಅವುಗಳ (ಇಷ್ಟಾಪೂರ್ತಿಗಳ) ಹಾಗೆ ಉಪವಾಸ ಮೊದಲಾದ ಇತರ ಕರ್ಮ ಪರವಾದದ್ದು (IIನೇಪಾದದಲ್ಲಿ) 'ಆ ಆಹುತಿಯ ದೆಶೆಯಿಂದ ಸೋಮರಾಜನು ಹುಟ್ಟುತ್ತಾನೆ" ಎಂದು ಹೇಳಿದ ಹಾಗೆ (ಚಂದ್ರಮಂಡಲಕ್ಕೆ ಹೋದವನು) ಸ್ವರ್ಗಸುಖಗಳನ್ನನುಭವಿಸಲಿಕ್ಕೆ ಯೋಗ್ಯವಾದ ದಿವ್ಯ (ಪ್ರಕಾಶರೂಪವಾದ) ದೇಹವನ್ನು ಪಡಿಯುತ್ತಾನೆಂದು ಅರ್ಥ. ಇವನು ಅನ್ನದಂತೆ ದೇವತೆಗಳಿಗೆ ಉಪಕರಣಭೂತ (ಸಹಾಯಭೂತ)ನಾಗುತ್ತಾನೆ ಎಂದು ಅರ್ಥ. (ಈ ರೀತಿ) ದೇವಭಾವವನ್ನು ಪಡದಂಥಾ ಇಷ್ಟಾಪೂರ್ತಿ ಮೊದಲಾದದ್ದನ್ನು ಮಾಡಿದವನನ್ನು ಆಜಾನಸಿದ್ಧರಾದ ದೇವತೆಗಳು (ಸೃಷ್ಟಿಕಾಲದಲ್ಲಿಯೇ ದೇವತ್ವವನ್ನು ಪಡದವರು) ಭಕ್ಷಿಸುತ್ತಾರೆ ಎಂದರೆ (ತಮ್ಮ) ಸ್ವಕೈಂಕರ್ಯಗಳಲ್ಲಿ ಪಶುಗಳಂತೆ ಚಾಕರರಾಗಿ ನಿಯೋಜಿಸುತ್ತಾರೆ ಎಂದು ಅರ್ಥವಾಗಿರುತ್ತದೆ ಎಂದು ಅರ್ಥ ಹೇಳುತ್ತಾರೆ.

उपासते । × । प्रवृत्तकर्मतो येतेधूमं धूमाभिमानिलोकं प्राप्नुवन्तीति सर्वत्रयोज्यं । × । मासेभ्यः संवत्सरं संवत्सरात्पितृलोकमितियोज्यं । आकाशं विनायकलोकं । एषसोमोराजा चन्द्रः देवानां तत्प्रसिद्धमन्न

ಮಾಧ್ವರು, (ಇಷ್ಟಾಪೂರ್ತಿ) ಪಿತೃಶ್ರಾದ್ಧ ಮೊದಲಾದ ಪ್ರವೃತ್ತ ಯಾನೆ ಕಾಮ್ಯ ಕರ್ಮವನ್ನು ಯಾರು ಮಾಡುತ್ತಾರೋ ಇವರು ಧೂಮಾಭಿಮಾನಿ (ದೇವತೆ) ಯ ಲೋಕವನ್ನು ಪ್ರಾಪಿಸುತ್ತಾರೆ. ಇದೇ

ताख्यमन्नं तदन्नं देवाः भक्षन्ति ॥ रा ॥

इमेकाम्यकार्मिणः । × । इतिपितृश्राद्धादिकमुपासते आतिष्ठन्ति । + । सोमोराजा सोमलताभिमानीतत् देवानामन्नं अतः तंचन्द्रंदेवाः भक्षयन्ति लताभिमानित्वेनेयुक्तिः ॥ वे ॥

ಪ್ರಕಾರ ರಾತ್ರಿ ಮೊದಲಾದವು (ಠಾಣ್ಯ) ಗಳ ವಿಷಯದಲ್ಲಿಯೂ ಯೋಜಿಸಬೇಕು. (ದಕ್ಷಿಣಾಯನದ ೬) ತಿಂಗಳುಗಳಿಂದ ಸಂವತ್ಸರಕ್ಕೆ, ಸಂವತ್ಸರದಿಂದ ಪಿತೃಲೋಕಕ್ಕೆ ಹೋಗುತ್ತಾರೆಂದು ಯೋಜಿಸಬೇಕು. ಆಕಾಶ ಎಂದರೆ ವಿನಾಯಕಲೋಕ. ಈ ಸೋಮಲತಾಭಿಮಾನಿ ಚಂದ್ರನು ದೇವತೆಗಳಿಗೆ ಪ್ರಸಿದ್ಧವಾದ ಅಮೃತವೆಂಬ ಅನ್ನ (ಆಹಾರ)ವಾಗಿರುತ್ತಾನೆ. ಆ ಚಂದ್ರನೆಂಬ ಅನ್ನವನ್ನು ದೇವತೆಗಳು ತಿನ್ನುತ್ತಾರೆ. (ಅವನು ಸೋಮ) ಲತೆಗೆ ಅಭಿಮಾನಿಯಾದ್ದರಿಂದ ಈ ರೀತಿ ಹೇಳುವದಾಗಿರುತ್ತದೆ ಎಂದು ವಿವರಿಸುತ್ತಾರೆ.

(೫) ಈ ರೀತಿ ಚಂದ್ರಮಂಡಲಕ್ಕೆ ಹೋಗಿ ಅಲ್ಲಿ ದೇವತ್ವವನ್ನು ಪಡದವರು ಅಲ್ಲಿಯೇ ಶಾಶ್ವತವಾಗಿ ಇರುವದಿಲ್ಲ. ಆ ಲೋಕಪ್ರಾಪ್ತಿಗೆ ಹೇತುವಾದ ತಮ್ಮ ಕರ್ಮವಿಶೇಷವು ಮುಗಿಯುತ್ತಲೇ ಹೋದ ಹಾಗೆಯೇ ತಿರಿಗಿಬರುತ್ತಾರೆ.

तदारब्धेन [अद्भिरारब्धस्य शरीरस्य भोगायतनत्वं दर्शयति आ.] च शरीरेणेष्टादिफलमुपभुञ्जाना आसते यावत्तदूपभोगनिमित्तस्य क्षयः कर्मणः सम्पतन्ति येनेतिसम्पातः कर्मणः क्षयः यावत्संपातं यावत्कर्मणः क्षयइत्यर्थः ।×। यथेतं यथागतं निवर्तन्ते ।×। नचात्रयथेतमेवेति नियमः अनेवं विधमपि निवर्तन्ते। पुनर्निवर्तन्तइतितुनियमः । अत उपलक्षणार्थमेतत् यथेतमिति। अतो भौतिकमाकाशं तावत्प्रतिपद्यन्ते।यास्तेषां चन्द्रमण्डले शरीराम्भका आपआसन् तास्तेषां तत्रोपभोगनिमित्तानां कर्मणां क्षयेविलीयन्ते। घृतसंस्थानमिवाग्निसंयोगे।ताविलीना अन्त

ಶಂಕರಾಚಾರ್ಯರು, (ಮೇಲೆ ಹೇಳಿದಂತೆ ಚಂದ್ರಮಂಡಲಕ್ಕೆ ಹೋಗವರು) ಜಲದಿಂದುಂಟಾದ ಶರೀರದಿಂದ ಇಷ್ಟಾ (ಯಜ್ಞ) ಮೊದಲಾದ ಕರ್ಮಫಲವನ್ನು ಅನುಭವಿಸುತ್ತಾ, ಆ ರೂಪದಲ್ಲನುಭವಿಸುವ ಸುಖಕ್ಕೆ ಕಾರಣವಾದ ಕರ್ಮವು ಯಾವ ಕಾಲದಲ್ಲಿ ಕ್ಷಯ (ಖರ್ಚು) ಆಗುತ್ತದೋ ಅಷ್ಟುಕಾಲ ಪರಿಯಂತರ ಆ ಮಂಡಲದಲ್ಲಿ ವಾಸಿಸಿಕೊಂಡಿದ್ದು (ಅನಂತರ), ಹೋದ ಹಾಗೆ ಹಿಂದೆ ತಿರಿಗಿ ಬರುತ್ತಾರೆ. ಹೋದ ದಾರಿಯಿಂದಲೇ ತಿರಿಗಿ ಬರುತ್ತಾರೆಂತ ಅಲ್ಲ. ಬೇರೆ ದಾರಿಯಿಂದಲೂ ಬರುತ್ತಾರೆ. ತಿರಿಗಿ ಬರುತ್ತಾರೆಂಬ

रिक्षस्था आकाशभूताइव सूक्ष्मा भवन्ति । ता अन्तरिक्षाद्वायुर्भवन्ति वायुप्रतिष्ठाः वा युभूताइतश्चामुतश्चोह्यमानाः ताभिः सहक्षीण कर्मा वायुभूतो भवति । वायुर्भूत्वाताभिः स हैवधूमो भवति । धूमो भूत्वाऽभ्रं अब्भरण मात्ररूपो भवति । अभ्रंभूत्वाततः सेचनस मर्थः मेघोभूत्वा उन्नतेषु प्रदेशेष्वथप्रवर्षति वर्षधारारूपेण शेषकर्मापततीत्यर्थः । + । क्षीणकर्मणामनेकत्वाद्बहुवचननिर्देशः । मे घादिषु पूर्वेष्वेकरूपत्वादेकवचन निर्देशः । यस्माद्गिरितटदुर्ग नदीसमुद्रारण्य मरुदेशा दि सन्निवेशसहस्राणिवर्षधाराभिः पतितानां। अतः तस्माद्धेतोर्वैखलुदुर्निष्प्रपतरं दुर्निष्क्र मणं दुर्निःसरणं । × । अथवा अतः अस्मा द्व्रीहियवादि भावाद्दुर्निष्प्रपतरं दुर्निर्गमनत रं । + ।व्रीहियवादि भावोदुर्निष्प्रपततरः । तस्मादपिदुर्निष्प्रपततरोद्रेतः सिग्देहसम्ब न्धो दुर्निष्प्रपततरइत्यर्थः । यस्मादूर्ध्वरेतो भिर्बालैः पुंस्त्वरहितैः स्थविरैर्वाभक्षिता अ न्तरालेशीर्यन्ते अनेकत्वादन्नादानां । कदा चित्काकतालीययावृत्यारेतः सिग्भिर्भक्ष्यन्ते यदातदारेतःसिग्भावं गतानां कर्मणो वृ त्तिलाभः । कथं? योयोह्यन्नमत्यनुशयिभिःसं श्लिष्टं रेतःसिक्यथ्श्चरेतःसिञ्चत्यृतुकाले यो षिति तद्भूय एवतदाकृतिरेव भवति रेतोरू पेण । तदवयवाकृतिभूयस्त्वं भूयइत्युच्यते रेतोरूपेण योषिति रेतसोरेतःसिगाकृति भा

ದೇ ನಿಯಮವಾಗಿರುತ್ತದೆ. ಆದಕಾರಣ "ಹೋದ ಹಾಗೆ" ಎಂದು ಹೇಳಿದ್ದು ಬೇರೆ ಮಾರ್ಗ ಸೂಚನೆಗೋಸ್ಕರ (ಕೂಡಾ) ಆಗಿರುತ್ತದೆ. ಆದ್ದರಿಂದ ಪ್ರಥಮತಃ ಭೌತಿಕ ಆಕಾಶಕ್ಕೆ ತಲ್ಪುತ್ತಾರೆ. (ಮತ್ತು) ಬಿಸಿತಗಲಿತ ತುಪ್ಪದ ಹೇಂಟೆಯಂತೆ ಚಂದ್ರಮಂಡಲದಲ್ಲಿ ಇವರಿಗೆ ಶರೀರ ಉಂಟಾಗಲಿಕ್ಕೆ ಕಾರಣವಾದ ಯಾವ ಜಲವಿತ್ತೋ ಆ ಜಲವು ಅಲ್ಲಿ ಉಪಭೋಗಕ್ಕೆ ಹೇತುವಾದ ಅವರ ಕರ್ಮವು ಕ್ಷಯವಾಗುತ್ತಲೇ ದ್ರವಿಸಿಹೋಗುತ್ತದೆ. ದ್ರವಿಸಿ ಅಂತರಿಕ್ಷದಲ್ಲಿ ಬಿದ್ದು ಆಕಾಶದಂತೆ ಸೂಕ್ಷ್ಮವಾಗುತ್ತದೆ. ಅಂತರಿಕ್ಷದಿಂದ ವಾಯುವಾಗುತ್ತದೆ; ಎಂದರೆ ವಾಯುವಿನಲ್ಲಿ ಶೇರಿ ವಾಯುವಾಗಿ ಅಲ್ಲಿಂದ ಇಲ್ಲಿಗೆ ಇಲ್ಲಿಂದಲ್ಲಿಗೆ ವೈಯ್ಯಲ್ಪಟ್ಟು ಆ ಜಲಸಮೇತವಾಗಿ (ಪ್ರಸ್ತುತ) ಕ್ಷೀಣಕರ್ಮಿಯು ವಾಯುಭೂತವಾಗುತ್ತಾನೆ. ವಾಯುವಾಗಿ ಆ ಜಲಸಮೇತವಾಗಿಯೇ ಹೊಗೆಯಾಗುತ್ತಾನೆ. ಹೊಗೆಯಾಗಿ ಅಭ್ರ (ತುಷಾರ) ಮಾತ್ರವಾಗುತ್ತಾನೆ. ಅನಂತರ ಚಿಮಿಕಿಸಲಿಕ್ಕೆ ಸಮರ್ಥವಾದ ಮೇಘವಾಗಿ ತರುವಾಯ ಎತ್ತರ ಸ್ಥಳಗಳಲ್ಲಿ ಕರ್ಮಶೇಷಯುಕ್ತನಾದ ಜೀವನು ಮಳೆಹನಿಯಾಗಿ ಬೀಳುತಾನೆ. (ಇಲ್ಲಿ) ಕ್ಷೀಣಕರ್ಮಿಗಳು ಅನೇಕರು ಇರುವದರಿಂದ ಬಹುವಚನ, ಮೇಘ ಮೊದಲುಗೊಂಡು

त्वितत्वात् । + । अतोरेतःसिगाकृतिरेव भवतीत्यर्थः ॥ शं ॥

ಅದಕ್ಕೆ ಮೊದಲಿನ ಅವಸ್ಥೆಗಳಲ್ಲಿ ಒಂದೇ ರೂಪದಲ್ಲಿರುವ ಕಾರಣ ಏಕವಚನ ಸಹ ಪ್ರಯೋಗಿಸಿದ್ದಾಗಿರುತ್ತದೆ. ಮಳೆಹನಿರೂಪದಲ್ಲಿ ಬಿದ್ದಂಥವರು ಗುಡ್ಡಿತಲೆ, ದುರ್ಗಮವಾದ ಇತರ ಸ್ಥಳ, ನದಿ, ಸಮುದ್ರ, ಅರಣ್ಯ, ನಿರ್ಜಲಪ್ರದೇಶ ಇತ್ಯಾದಿ ಸಾವಿರ ತರಹದ ಸ್ಥಳಗಳನ್ನು ಆಶ್ರಯಿಸುವ ಕಾರಣ ಅವರು ಆ ಅವಸ್ಥೆಯಿಂದ ತಪ್ಪುವದು ಬಹಳ ಪ್ರಯಾಸವಾಗಿರುತ್ತದೆ. ಅಥವಾ ಭತ್ತ, ಯವ, ಮೊದಲಾದ ಭಾವದಿಂದ ತಪ್ಪುವದು ಅತಿ ಪ್ರಯಾಸವಾದದ್ದು. ಅದಕ್ಕಿಂತಲೂ ರೆತಸ್ಸೇಚನ ಮಾಡುವವನ (ತಂದೆಯು) ದೇಹಸಂಬಂಧ ದೊರಕೋಣವು ಇನ್ನೂ ಹೆಚ್ಚು ಪ್ರಯಾಸವಾದದ್ದು. ಯಾಕಂದರೆ ಅನ್ನ ತಿನ್ನುವವರು ಅನೇಕರಾದ್ದರಿಂದ ಊರ್ಧ್ವ ರೇತಸರಾದ (ಸನ್ಯಾಸಿ ಮೊದಲಾದ)ವರು, ಬಾಲಕರು, ಷಂಢರು, ವೃದ್ಧರು ತಿಂದಂಥಾ ಅನ್ನವು ಮಧ್ಯದಲ್ಲಿ ನಾಶವಾಗುತ್ತದೆ. ಯಾವಾಗಲಾದರೂ ಅಕಸ್ಮಾತ್ತಾಗಿ ಗರ್ಭೋತ್ಪಾದನೆ ಮಾಡಲಿಕ್ಕೆ ಯೋಗ್ಯನಾದವನು ತಿಂದರೆ ಆಗ ಅವನ ಭಾವವನ್ನು ಪಡದಂಥವರ ಕರ್ಮಕ್ಕೆ ವೃತ್ತಿಲಾಭವು ದೊರೆಯುತ್ತದೆ. ಹೇಗಂದರೆ, ರೆತಃಸೇಚಕರಲ್ಲಿ ಯಾರ್‍ಯಾರು ಜೀವ ಸಂಯುಕ್ತವಾದ ಅನ್ನವನ್ನು ತಿನ್ನುತ್ತಾನೋ, ಮತ್ತು ಋತುಕಾಲದಲ್ಲಿ ಯಾರು ಯಾವನಸ್ಥಳಾದ ಸ್ತ್ರೀಯಲ್ಲಿ ರೆತಃಸೇಚನ (ಗರ್ಭೋತ್ಪಾದನೆ) ಮಾಡುತ್ತಾನೋ, (ಈ ಜೀವನು) ರೆತೋರೂಪದಿಂದ ಅವನ ಹಾಗೆಯೇ ಆಗುತ್ತಾನೆ. ರೆತಸಿಗೆ ಅದನ್ನು ಹೊಯ್ಯುವವನ ಅವಯವಗಳ ಆಕಾರವೇ ಹೆಚ್ಚಾಗಿ ಬರುವದರಿಂದ ರೆತೋರೂಪದಲ್ಲಿ ಸ್ತ್ರೀಯ ಗರ್ಭದಲ್ಲಿ ಪ್ರವೇಶಮಾಡಿದ ಜೀವನು ಹೆಚ್ಚಾಗಿ ತಂದೆಯ ಆಕಾರವನ್ನೇ ಪಡಿಯುತ್ತಾನೆಂದು ಹೇಳಿದ್ದಾಗಿರುತ್ತದೆ. ಆದಕಾರಣ ಇವನು ರೆತಸ್ಸೇಚಕನ (ತಂದೆಯ) ಆಕಾರದಲ್ಲಿಯೇ ಹುಟ್ಟುತ್ತಾನೆಂದು ಅರ್ಥವಾಗಿರುತ್ತದೆ ಎಂದು ಹೇಳುತ್ತಾರೆ.

यावच्छन्दः साकल्यार्थः । साकल्यञ्च फलप्रदानप्रवृत्तकर्मविशेषविषयं । नतुसर्वकर्मविषयं द्रष्टव्यं ॥ अथअनन्तरमेतमेवाध्वानं धूमादिमार्गं यथेतं यथागतं पुनर्निवर्तन्तइत्यर्थः ॥ × ॥ आकाशाद्वायुं । अभि

ರಾಮಾನುಜಾಚಾರ್ಯರು, (ಚಂದ್ರಮಂಡಲಕ್ಕೆ ಹೋದವರು) ಅಲ್ಲಿ ಹೋಗಿ ಸೇರಲಿಕ್ಕೆ ಕಾರಣವಾದ ಪ್ರವೃತ್ತ ಕರ್ಮವಿಶೇಷವು ಮುಗಿಯುವ ತನಕ (ಮಾತ್ರ) ಅಲ್ಲಿ ವಾಸಿಸಿಕೊಂಡಿರುತ್ತಾರೆ. ಅವರು

संभवन्तीतिशेष: ॥ × ॥ वायुर्भवन्तीत्येवार्थ: । अवरोहताञ्चाकाशादिभवनं न तच्छरीरकत्वं सर्गाद्यकालमारभ्या प्रळयमाकाशाद्यभिमानिदेवतानां अन्यासांक्लसानां सत्वेन प्रतिक्षणमवरोहतामाकाशाद्यभिमानि देवतात्वानुपपत्ते: । अतस्तत्सादृश्यमेवार्थ: । या आपश्चंद्रमण्डलेदिव्यशरीरमारब्धवत्य: तासां कर्मक्षयेद्रवीभूतानां भेदकाकारप्रहाणेनाकाशसादृश्ये तदुपश्लिष्टाजीवा अप्याकाशसमाउच्यन्ते । ताश्चापइतश्चामुतश्च वायुनानीयमाना वायुसमानाभवन्ति । ततश्च तत्संश्लिष्टो जीवोपि वायुर्भवतीत्युच्यते । एवं उत्तरत्रापिद्रष्टव्यं ॥ × ॥ तेवर्षसंश्लिष्टभूतसूक्ष्मपरिष्वक्ताजीवा: इहभूमौपातित्वा व्रीहियवादिरूपेण जायन्तइत्यर्थ: । अत्रतेन रूपेणजननं नामनस्थावरभावप्रतिपत्ति: । स्थावरत्वप्राप्तिहेतुभूतकर्मणामिहाकीर्तनात् । किन्तुजीवान्तराधिष्ठितेषु व्रीह्यादिषु संश्लेषमात्रं ॥ × ॥ अत: स्थावरादिभावात् अतिचिरेणनिर्गमनं भवतीत्यर्थ: ॥ × ॥ भक्ष्येष्वपिस्थावरेषु जातानां रेत:सिग्देहसम्बन्धो दुर्लभएव बहुत्वात्स्थावराणामित्यतो दुर्निष्क्रमत्वं ॥ × ॥ अत्रसइत्यध्याहार: । योव्रीह्यादि संश्लिष्टोऽवरोहतिजीव: स: योयोऽन्नमत्ति योरेत: सिञ्चति भूय: पश्चात्तद्भवति रेत: सिग्भावं प्राप्नोति । आकाशादि भाववत् ।

ಮಾಡಿದ ಸಕಲ ಕರ್ಮಗಳು (ಮುಗಿಯುವತನಕ) ಅಲ್ಲ. ಅನಂತರ ಈ ಧೂಮಾದಿ ಮಾರ್ಗದಲ್ಲಿಯೇ ಹೋದ ಹಾಗೆ ತಿರುಗಿ ಇಳಿದುಬರುತ್ತಾರೆ. ಆಕಾಶದಿಂದ ವಾಯುವಿಗೆ ತಲ್ಪುತ್ತಾರೆಂದು ಅರ್ಥ. ಎಂದರೆ ವಾಯುವಾಗುತ್ತಾರೆ ಎಂತಲೇ ಅರ್ಥವಾಗಿರುತ್ತದೆ. ಕೆಳಗೆ ಇಳಿದುಬರುವಂಥವರು ಆಕಾಶಾದಿಗಳಾಗೋಣ ಎಂದರೆ ಆಕಾಶಾದಿಗಳ ಶರೀರಗಳನ್ನೇ ಹೊಂದುವದಲ್ಲ, ಯಾಕಂದರೆ ಆದಿಯಲ್ಲಿ ಸೃಷ್ಟಿಯಾದಂದಿನಿಂದ (ಮುಂದೆ) ಪ್ರಳಯ ಆಗುವ ಪರಿಯಂತರ ಆಕಾಶಾದಿಗಳಿಗೆ ಬೇರೆ ಅಭಿಮಾನಿ ದೇವತೆಗಳು ನೇಮಿಸಲ್ಪಟ್ಟಿರುವದರಿಂದ ಪ್ರತಿ ಕ್ಷಣವೂ ಇಳಿಯುತ್ತಾ (ಕೆಳಗೆ ಜಾರುತ್ತಾ) ಇರುವವರಿಗೆ ಆಕಾಶಾದಿಗಳ ಅಭಿಮಾನಿದೇವತಾತ್ವ ಬರಲಿಕ್ಕೆ ಕಾರಣವಿಲ್ಲ. ಆದ್ದರಿಂದ (ಇವರು) ಆಕಾಶಾದಿಗಳ ಹಾಗೆ ಆಗುತ್ತಾರೆಂದು ಅರ್ಥವಾಗಿರುತ್ತದೆ. ಚಂದ್ರಮಂಡಲದಲ್ಲಿ (ಇವರಿಗೆ) ದಿವ್ಯಶರೀರ ಬರಲಿಕ್ಕೆ ಕಾರಣವಾದ ಜಲವು (ಅವರ) ಕರ್ಮ ಕ್ಷಯವಾಗುತ್ತಲೇ ದ್ರವಿಸಿ ವಿಶೇಷಾಕಾರವನ್ನು ಬಿಟ್ಟು ಆಕಾಶದ ಹಾಗೆ ಆಗುತ್ತಿರಲಾಗಿ ಅದನ್ನು ಆಶ್ರಯಿಸಿಕೊಂಡಿದ್ದ ಜೀವಗಳು ಕೂಡಾ ಆಕಾಶಕ್ಕೆ ಸಮವೆಂದು ಹೇಳಲ್ಪಡುತ್ತವೆ. ಆ ಜಲವು ವಾಯುವಿನಿಂದ

रेतःसिग्भावोप्यौपचारिकः रेतःसिग्योगी भवतीत्यर्थः ॥ ६ ॥

ಈಕಡೆ ಆಕಡೆ ಹಾರಿಸಲ್ಪಟ್ಟು ವಾಯುವಿನ ಹಾಗೆ ಆಗುತ್ತದೆ. ಈ ದೆಸೆಯಿಂದ ಅದಕ್ಕಂಟಿಕೊಂಡ ಜೀವ ಕೂಡಾ ವಾಯುವಾಗುತ್ತದೆ ಎಂದು ಹೇಳೋಣಾಗುತ್ತದೆ. ಧೂಮಾದಿಭಾವಗಳ ವಿಷಯಗಳಲ್ಲಿಯೂ ಇದೇ ರೀತಿ ತಿಳಿಯಬೇಕಾಗಿರುತ್ತದೆ. ಮಳೆಯನ್ನಾಶ್ರಯಿಸಿಕೊಂಡು ಭೂತಸೂಕ್ಷ್ಮಗಳಿಂದ ಮುಚ್ಚಿಕೊಂಡಿರುವಂಥಾ ಜೀವಗಳು ಈ ಭೂಮಿಯಲ್ಲಿ ಬಿದ್ದು ಭತ್ತ, ಯವಾದಿ ರೂಪದಲ್ಲಿ ಹುಟ್ಟುತ್ತಾವೆ ಎಂದು ಅರ್ಥ. ಇಲ್ಲಿ ಆ (ಭತ್ತ ಯವಾದಿ) ರೂಪದಲ್ಲಿ ಜನಿಸುವದೆಂದರೆ ಆ ಸ್ಥಾವರಗಳಾಗೋಣವಲ್ಲ. ಯಾಕೆಂದರೆ ಸ್ಥಾವರತ್ವ ಪ್ರಾಪ್ತಿಗೆ ಕಾರಣವಾದ ಕರ್ಮದ ಪ್ರಸ್ತಾಪ ಇಲ್ಲಿ ಇಲ್ಲ. ಪರಂತು (ಇಲ್ಲಿ ಪ್ರಸ್ತಾಪಿಸಿದ್ದು) ಇತರ ಜೀವಗಳಿಂದ ಅಧಿಷ್ಟಿತವಾದ ಭತ್ತ ಮೊದಲಾದವುಗಳಿಗೆ ಅಂಟಿಕೊಂಡಿರೋಣ ಮಾತ್ರವಾಗಿರುತ್ತದೆ. ಆ ಸ್ಥಾವರಾದಿ ಭಾವದಿಂದ ಹೊರಗೆ ಬರೋಣವು ಬಹು ತಾಮಸವೆಂದು ಅರ್ಥ. ತಿನ್ನುವಂಥವುಗಳಾಗಿ ಹುಟ್ಟಿದ ಸ್ಥಾವರಗಳಿಗೆ ಕೂಡಾ ಗರ್ಭೋತ್ಪಾದನೆ ಮಾಡುವವನ ದೇಹ ಸಮ್ಮಂಧ ಆಗೋಣವು ದುರ್ಲಭವೇ ಆಗಿರುತ್ತದೆ. ಯಾಕೆಂದರೆ ಸ್ಥಾವರಗಳು ಅನೇಕ ಇದ್ದಾವೆ. ಆದಕಾರಣ ಹೊರಗೆ ಹೊರಡೋಣವು ಪ್ರಯಾಸವೆಂದೆನ್ನುವದು. ಭತ್ತ ಮೊದಲಾದವುಗಳನ್ನಾಶ್ರಯಿಸಿಕೊಂಡಂಥಾ ಕೆಳಗೆ ಇಳಿದು ಬಂದಂಥಾ ಜೀವನು ಅನಂತರ ಯಾರು ಯಾರು ಅನ್ನ ತಿನ್ನುತ್ತಾನೋ ಮತ್ತು ಯಾರು ಗರ್ಭೋತ್ಪಾದನೆ ಮಾಡುತ್ತಾನೋ, (ತತ್ ಪೂರ್ವದಲ್ಲಿ ಹೊಂದಿದ) ಆಕಾಶಾದಿ ಭಾವಗಳಂತೆಯೋ, ತಂದೆಯ ಭಾವವನ್ನು ಪಡಿಯುತ್ತಾನೆ. ಈ ಭಾವ ಕೂಡಾ ಬರೀ ಔಪಚಾರಿಕವಾದದ್ದು. (ಅಲಂಕಾರಕರ್ತ್ಯೋಸ್ಕರ ಹೇಳಿದ್ದು) ಗರ್ಭೋತ್ಪಾದನೆ ಮಾಡುವವನಲ್ಲಿ ಶೇರಿಕೊಳ್ಳುತ್ತಾನೆಂದು ಅರ್ಥವಾಗಿರುತ್ತದೆ ಎಂದು ವಿವರಿಸುತ್ತಾರೆ.

चन्द्रं प्राप्तास्तेकाम्यकर्मिणः। तस्मिन् चन्द्रे यावत्संपातं यावत्पतनं उषित्वा।×। यथायेनमार्गेण द्युलोकं प्रति इतं गतं एतमेवाध्वानमित्यर्थः।×। चन्द्रादाकाशपर्यन्तं यथेतं तदनन्तरमन्यथेत्याह।×। आकाशात्पितृलोकादिकं पूर्वप्राप्तंहित्वा वाय्वादिदे

ಮಾಧ್ವರು, ಚಂದ್ರಮಂಡಲವನ್ನು ಪ್ರಾಪಿಸಿದಂಥಾ ಆ ಕಾಮ್ಯಕರ್ಮಿಗಳು ಅಲ್ಲಿಂದ ಚ್ಯುತಿಯಾಗುವ ತನಕ ಅಲ್ಲಿ ವಾಸಿಸಿಕೊಂಡಿದ್ದು ಯಾವ ಮಾರ್ಗದಿಂದ ದ್ಯುಲೋಕಕ್ಕೆ (ಸ್ವರ್ಗಲೋಕಕ್ಕೆ) ಹೋಗೋಣಾಗಿತ್ತೋ ಅದೇ ಮಾರ್ಗದಿಂದ

वं प्राप्नुवन्तीत्यर्थः । × । वायुर्भूत्वा वायुदेवतासायुज्यादिमान् भूत्वा धूमो भवति धूमदेवता सायुज्यादिमान् भवति । एवमग्रेपि । × । प्रवर्षति वृष्ट्यन्तर्गता भवन्ति । × । व्रीहियवाः जीवान्तराभिमन्यमान व्रीहियवादिषु परगृहेपान्थइव प्रविष्टास्तिष्ठन्तीति तेषुजातेषु जायन्तइवोच्यन्ते । × । ततो व्रीहियवादि प्रवेशानन्तरं दुर्निष्प्रपतनं भवति । × । दुष्पतनमेव व्यनक्ति योयोहीति । योयोजनः अन्नं व्रीह्यादिरूपमद्यमानमत्ति अत्तृषुमध्ये यः पुमान् रेतोयोषिति सिञ्चति तद्भूयएव अद्यमान वस्तुद्वारारेतः रेतःसेचकपुरुषं प्रविश्यतद्भुक्तान्नपरिणति सारभूत रेतोगतः सनतन्मयो भवतीत्यर्थः ॥ रा ॥

तेनैव मार्गेणगमनेऽनतिक्लेशेन न स्वर्गेऽति वैराग्यं स्यादित्यतो मार्गान्तरं निरूपयति आकाशमिति । × । वायुस्थः । × । धूमस्थः । × । अभ्रस्थं । × । मेघस्थः ।+। वर्षान्तर्गतो भवति । तेकर्मिणः इहलोके केचिद्व्रीहियवाः केचिदोषधिवनस्पतयः केचित्तिलामाषाः इति अन्यानपिरीत्याजायन्ते । अन्याधिष्ठिते व्रीह्यादि शरीरे प्रविशन्ति । नतुतदभिमानिनः । + । दुर्निष्प्रपतरं नितरां दुष्पतनं भवतिवै । तदेवविशदयति यइति । × । तत्भूय एव भवति तमेवानुप्रविशति ॥ वे ॥

ಎಂದರೆ ಚಂದ್ರಮಂಡಲದಿಂದ ಆಕಾಶ ಪರಿಯಂತರ ಹೋದ ಹಾಗೆ, ಅನಂತರ ಬೇರೆ ದಾರಿಯಿಂದ, ಮೊದಲು ಹೋದ ಪಿತೃಲೋಕಾದಿಗಳನ್ನು ಬಿಟ್ಟು, ವಾಯು ಮೊದಲಾದ ದೇವತೆಯನ್ನು ಪ್ರಾಪಿಸುತ್ತಾರೆ ಎಂದು ಅರ್ಥ. ಅದೇ (ಮೊದಲು ಹೋದ) ಮಾರ್ಗದಿಂದಲೇ ಪ್ರಯಾಣ ಮಾಡಿದ ಪಕ್ಷದಲ್ಲಿ ಹೆಚ್ಚು ಪ್ರಯಾಸ ಉಂಟಾಗದೆ ಸ್ವರ್ಗಲೋಕ ವಿಷಯದಲ್ಲಿ ಅತ್ಯಂತ ವೈರಾಗ್ಯ ಉಂಟಾಗಲಾರದ ಕಾರಣ "ಆಕಾಶ" ಎಂತ ಬೇರೆ ಮಾರ್ಗ ಹೇಳಿದ್ದಾಗಿರುತ್ತದೆ. ವಾಯುವಾಗಿ ಎಂದರೆ ವಾಯುದೇವತಾ ಸಾಯುಜ್ಯ ಮೊದಲಾದವುಗಳುಳ್ಳವನಾಗಿ ಧೂಮವಾಗುತ್ತಾನೆ—ಎಂದರೆ ಧೂಮ ದೇವತಾಸಾಯುಜ್ಯ ಮೊದಲಾದವುಗಳುಳ್ಳವನಾಗುತ್ತಾನೆ. ಇದೇ ರೀತಿ ಮುಂದೆಯೂ ತಿಳಿಯ ಬೇಕು.' ಮಳೆಯಲ್ಲಿ ಶೇರಿಕೊಂಡು ಆ ಕರ್ಮಿಗಳು ಈ (ಭೂ) ಲೋಕದಲ್ಲಿ ಕೆಲವರು ಭತ್ತ ಯವಗಳು, ಕೆಲವರು ಗಿಡಮರಗಳು, ಕೆಲವರು ಎಳ್ಳು ಉದ್ದು, ಇತರ ವಿಧವಾಗಿ ಕೂಡಾ ಹುಟ್ಟುತ್ತಾರೆ—ಎಂದರೆ ಬೇರೆ ಜೀವಗಳು ವಾಸವಾಗಿರುವ ಭತ್ತ ಯವ ಮೊದಲಾದ ಶರೀರಗಳಲ್ಲಿ, ಪ್ರಯಾಣಸ್ಥನು ಪರರಲ್ಲಿ ವಾಸಮಾಡುವಂತೆ, ಪ್ರವೇಶಿಸಿಕೊಂಡಿರುತ್ತಾರಾದಕಾರಣ ಆ ಧಾನ್ಯಾದಿಗಳು ಹುಟ್ಟುವದರಿಂದ ಇವರು ಹುಟ್ಟುತ್ತಾರೆ ಎಂದು ಹೋಲಿಕೆಯಿಂದ ಹೇಳೋಣಾ

ಗುತ್ತದೆ. ಭತ್ತ ಯವಾದಿಗಳನ್ನು ಪ್ರವೇಶಿಸಿದ ನಂತರ ಇವರಿಗೆ ಕೆಟ್ಟ ಸ್ಥಿತಿಯು ಪ್ರಾಪ್ತವಾಗುತ್ತದೆ. ಅದು ಯಾವದೆಂದರೆ—ಯಾರ್‍ಯಾರು ಭತ್ತ ಯವಾದಿ ರೂಪದಲ್ಲಿರುವ ತಿನ್ನಲಿಕ್ಕೆ ಯೋಗ್ಯವಾದ ವಸ್ತುವನ್ನು ತಿನ್ನುತ್ತಾನೋ, ಆ ತಿನ್ನುವವರಲ್ಲಿ ಯಾವ ಪುರುಷ ಯೌವನಸ್ಥಳಲ್ಲಿ ಗರ್ಭೋತ್ಪಾದನೆ ಮಾಡುತ್ತಾನೋ, ಆ ತಿನ್ನುವ ವಸ್ತುದ್ವಾರಾ ಗರ್ಭೋತ್ಪಾದನೆ ಮಾಡುವ ಪುರುಷನಲ್ಲಿ ಪ್ರವೇಶಿಸಿ ಆತ ತಿಂದ ಅನ್ನವಿಕಾರದ ಸಾರಭೂತವಾದ ರೇತಸ್ಸಿನಲ್ಲಿ ಸೇರಿಕೊಂಡು ಅವನ ಹಾಗೆಯೇ ಆಗುತ್ತಾನೆ ಎಂದು ಅರ್ಥ ಎಂದು ವಿವರಿಸುತ್ತಾರೆ.

(೬) ಹೀಗೆ ಚಂದ್ರಮಂಡಲದಿಂದ ಇಳಿದುಬರುವವರಲ್ಲಿ ಶುಭಕರ್ಮಿಗಳು ಒಳ್ಳೇ ಜನ್ಮಗಳನ್ನೂ ಅಶುಭಕರ್ಮಿಗಳು ನಿಂದಿತವಾದ ಜನ್ಮಗಳನ್ನೂ ಪಡಿಯುತ್ತಾರೆಂದು ೭ನೇ ಶ್ರುತಿಯು ಹೇಳುತ್ತದೆ. ಎಷ್ಟುಕಾಲದಲ್ಲಿ ಎಂದರೆ—

अभ्याशोह क्षिप्रमेव ॥ शं ॥ ಶಂಕರಾಚಾರ್ಯರು ಕ್ಷಿಪ್ರವಾಗಿ ಎಂತಲೂ,

अभ्याशः अभ्यागन्तारः परलोकादिह लोकं प्रत्यवतरन्तइत्यर्थः ॥ रं ॥ (ರಾಮಾನುಜಾಚಾರ್ಯರು, ಪರಲೋಕದಿಂದ ಈ ಲೋಕಕ್ಕೆ ಇಳಿದು ಬರುವಂಥವರು ಎಂದು ಮಾತ್ರ ಹೇಳುತ್ತಾರಲ್ಲದೆ ಕಾಲಪರವಾಗಿ ಅರ್ಥ ಮಾಡುವದಿಲ್ಲ.)

अभ्याशः शीघ्रमेव एकसंवत्सरकाल एव ॥ रा ॥ कालसामीप्येन ॥ वे ॥ ಮಾಧ್ವರು, ಸಮೀಪಕಾಲದಲ್ಲಿಯೇ, ಬೇಗನೆ (ಎಂದರೆ) ಒಂದು ವರುಷದೊಳಗೆ ಎಂತಲೂ ಹೇಳುತ್ತಾರೆ.

## ೪ನೇ ಪಾಪಿಷ್ಟರ ಗತಿ.

(೭) ಈ ಪಾಪಿಷ್ಟರೆಂಬವರು ಪಂಚಮಹಾ ಪಾತಕಿಗಳಾಗಿರುತ್ತಾರೆ. ಇವರ ವಿಷಯದಲ್ಲಿ ಪ್ರಯೋಗಿಸಿರುವ "ಹುಟ್ಟು, ಸಾಯಿ" ಎಂಬ ವಾಕ್ಯಗಳು.

"जायस्व म्रियस्वेति" ईश्वरनिमित्त चेष्टोच्यते । जननमरणेनैव कालयापनं भवति नतुक्रियासु शोभनेषु भोगेषुवा कालोस्तीत्यर्थः ॥ शं ॥ ಈಶ್ವರನಿಮಿತ್ತವಾದ ಚೇಷ್ಟೆಯನ್ನು ಹೇಳುತ್ತದೆ. ಎಂದರೆ (ಈ ತರಹದ ಪಾಪಿಗಳಿಗೆ) ಜನನ ಮರಣದಿಂದಲೇ ಕಾಲ ಸೆಲ್ಲುತ್ತದಲ್ಲದೆ ಶುಭಕರ್ಮಗಳಲ್ಲಿ ಆಗಲೀ, ಸುಖಭೋಗದಲ್ಲಿ ಆಗಲೀ, ಕಾಲ ಕಳೆಯುವದಿಲ್ಲ ಎಂದು ಅರ್ಥವೆಂದು ಶಂಕರಾಚಾರ್ಯರು ಹೇಳುತ್ತಾರೆ.

पुनः पुनर्जायन्ते म्रियन्त इत्यर्थः ॥रं॥ ॥ रा ॥ पुनर्जायन्ते पुनर्म्रियन्ते ॥ वे ॥

ರಂಗರಾಮಾನುಜಾಚಾರ್ಯರು, ಮತ್ತು ಮಾಧ್ವರು ಸಹ (ಆ ವಾಕ್ಯಗಳಿಗೆ) ಪುನಃ ಪುನಃ ಹುಟ್ಟುತ್ತಾರೆ ಸಾಯುತ್ತಾರೆ ಎಂದರೆ ಪುನಹ ಹುಟ್ಟುತ್ತಾರೆ, ಪುನಹ ಸಾಯುತ್ತಾರೆಂದು ಅರ್ಥ ಎಂದು ಹೇಳುತ್ತಾರೆ.

———o———

## XIನೇ ಪಾಠ.

# ಪ್ರತ್ಯಗಾತ್ಮ ವಿದ್ಯ.

(१) य आत्माऽपहतपाप्मा विजरो विमृत्युर्विशोकोऽविजिघत्सोऽपिपासः सत्यकामः सत्यसङ्कल्पः सोऽन्वेष्टव्यः स विजिज्ञासितव्यः ससर्वांश्च लोकानाप्नोति सार्वांश्च कामान्यस्तमात्मानमनुविद्य विजानातीति ह प्रजापतिरुवाच ॥ (८–७–१)

(೧) ಪಾಪಲೇಪವಿಲ್ಲದ, ವೃದ್ಧಾಪ್ಯವಿಲ್ಲದ, ಮರಣವಿಲ್ಲದ, ದುಃಖವಿಲ್ಲದ, ಹಸಿವೆ ಇಲ್ಲದ, ತೃಷೆ ಇಲ್ಲದ, ಸತ್ಯಕಾಮ (ಮತ್ತು) ಸತ್ಯಸಂಕಲ್ಪನಾದ ಆತ್ಮನು ಯಾರೋ, ಅವನನ್ನು ಹುಡುಕಬೇಕು. ಅವನನ್ನು ಕಂಡುಕೊಳ್ಳಲಿಕ್ಕೆ ಇಚ್ಛಿಸಬೇಕು. ಯಾರು ಆ ಆತ್ಮನನ್ನು ತಿಳಿದು ಕಂಡುಕೊಳ್ಳುತ್ತಾನೋ ಅವನು ಎಲ್ಲಾ ಲೋಕಗಳನ್ನು ಎಲ್ಲಾ ವಿಷಯಗಳನ್ನು ಪಡೆಯುತ್ತಾನೆ ಎಂದು ಪ್ರಜಾಪತಿಯು ಪ್ರಸ್ತಾಪಿಸಿದನು.

(२) तद्धोभये देवासुरा अनुबुबुधिरे। ते होचुर्हन्त तमात्मानमन्विच्छामो यमात्मानमन्विष्य सर्वांश्च लोकानाप्नोति सर्वांश्च कामानितीन्द्रो हैव देवानामभिप्रवव्राज। विरोचनोऽसुराणां। तौ हासंविदानावेव समित्पाणी प्रजापतिसकाशमाजग्मतुः ॥ (८–७–२)

(೨) ಆ ಸಂಗತಿ ದೇವತೆಗಳು ಅಸುರರು ಇವರುಭಯತರಿಗೂ ಗೊತ್ತಾಯಿತು. (ಆಗ) ಅವರು "ಒಳ್ಳೇದು ಯಾವ ಆತ್ಮನನ್ನು ಹುಡುಕಿದರೆ ಸಕಲ ಲೋಕಗಳೂ ಸಕಲ ವಿಷಯಗಳೂ ದೊರೆಯುತ್ತವೋ, ಆ ಆತ್ಮನನ್ನು ನಾವು ಹುಡುಕುವ" ಎಂದು ಅಂದುಕೊಂಡರು. (ಮತ್ತು) ದೇವತೆಗಳ ಕಡೆಯಿಂದ ಇಂದ್ರ, ಅಸುರರ ಕಡೆಯಿಂದ ವಿರೋಚನ (ಸಹ) ಒಬ್ಬನು ಇನ್ನೊಬ್ಬನಿಗೆ ತಿಳಿಸದೆ, ಸಮಿತ್ಪಾಣಿಗಳಾಗಿ ಪ್ರಜಾಪತಿಯ ಬಳಿಗೆ ಹೋದರು.

# ಪ್ರತ್ಯಗಾತ್ಮ.

ಅವ್ಯಕ್ತ. ಬ್ರಹ್ಮ.



ವೃದ್ಧಾಪ್ಯವಿಲ್ಲದವ. ಶೋಕವಿಲ್ಲದವ.

ಹಸಿವೆಯಿಲ್ಲದವ. ತೃಷೆಯಿಲ್ಲದವ.

ಸತ್ಯಕಾಮ. ಸತ್ಯಸಂಕಲ್ಪ.




ಭಯವಿಲ್ಲದವ. ಪಾಪವಿಲ್ಲದವ.

Printed for H. Krishna Rao, Vakil. Basel Mission Press, Mangalore.

(३) तौहद्वात्रिꣳशतं वर्षाणि ब्रह्मचर्य्यमूषतुस्तौहप्रजापतिरुवाच किमिच्छन्तावबास्तमिति तौहो चतुर्थ आत्माऽपहतपाप्मा विजरोविमृत्युर्विशोकोऽविजिघत्सोऽपिपासः सत्यकामः सत्यसङ्कल्पः सोऽन्वेष्टव्यः स विजिज्ञासितव्यः स सर्व्वाꣳश्च लोकानाप्नोति सर्व्वाꣳश्च कामान् यस्तमात्मानमनुविद्य विजानातीति भगवतो वचोवेदयन्ते । तमेच्छन्तावबास्तमिति ॥ (८—७—३)

(೩) ಅವರಿಬ್ಬರೂ (ಅವನಲ್ಲಿ) ೩೨ ವರುಷ ಬ್ರಹ್ಮಚರ್ಯವನ್ನಾಚರಿಸಿಕೊಂಡಿದ್ದರು. (ಆಗ) ಪ್ರಜಾಪತಿಯು "ನೀವು ಏನು ಇಚ್ಛಿಸಿಕೊಂಡು (ಇಲ್ಲಿ) ವಾಸಿಸಿಕೊಂಡಿದ್ದೀರಿ" ಎಂದು ಅವರಕೂಡೆ ಪ್ರಶ್ನೆ ಮಾಡಿದನು. (ಅದಕ್ಕೆ) ಅವರು "ಪಾಪಲೇಪವಿಲ್ಲದ, ವೃದ್ಧಾಪ್ಯವಿಲ್ಲದ, ಮರಣವಿಲ್ಲದ, ದುಃಖವಿಲ್ಲದ, ಹಸಿವೆ ಇಲ್ಲದ, ತೃಷೆಯಿಲ್ಲದ, ಸತ್ಯಕಾಮನಾದ, ಸತ್ಯಸಂಕಲ್ಪನಾದ ಆತ್ಮನು ಯಾರೋ ಅವನನ್ನು ಹುಡುಕಬೇಕು, ಅವನನ್ನು ತಿಳದುಕೊಳ್ಳಲಿಕ್ಕೆ ಇಚ್ಛಿಸಬೇಕು, ಯಾರು ಆತ್ಮನನ್ನು ತಿಳಿದು ಕಂಡುಕೊಳ್ಳುತ್ತಾನೋ, ಅವನು ಎಲ್ಲಾ ಲೋಕಗಳನ್ನೂ, ಎಲ್ಲಾ ವಿಷಯಗಳನ್ನೂ ಪಡಿಯುತ್ತಾನೆಂಬದಾಗಿ ತಮ್ಮ ಅಪ್ಪಣೆಯಾಗಿದೆ ಎಂದು ಹೇಳುತ್ತಾರೆ. ಅವನನ್ನು ಇಚ್ಛಿಸಿಕೊಂಡು ನಾವಿಬ್ಬರೂ ವಾಸಿಸಿಕೊಂಡಿರುತ್ತೇವೆ" ಎಂದು ಉತ್ತರ ಕೊಟ್ಟರು.

(४) तौहप्रजापतिरुवाच यएषोऽक्षिणि पुरुषोदृश्यत एषआत्मेति होवाचैतदमृत मभयमेतद्ब्रह्मेत्यथयोऽयं भगवोऽप्सु परिख्यायते यश्चायमादर्शेकतमएष इत्येष उएवैषु सर्व्वेष्वन्तेषु परिख्यायतइति होवाच (८—७—४)

(೪) ಆಗ ಪ್ರಜಾಪತಿಯು ಅವರುಭಯತರಿಗೂ ಹೇಳಿಕೊಟ್ಟದ್ದೇನಂದರೆ, "ಕಣ್ಣಿನಲ್ಲಿ ಯಾರು ತೋರುತ್ತಾನೋ ಆ ಪುರುಷನೇ ಆತ್ಮನು" ಎಂದು "ಅವನು ಸಾವಿಲ್ಲದವನು, ಭಯವಿಲ್ಲದವನು, ಅವನು ಬ್ರಹ್ಮ" ಎಂದು ಹೇಳಿದನು. ಹಾಗಾದರೆ ಸ್ವಾಮಿ! ಯಾರು ನೀರಿನಲ್ಲಿ ಮತ್ತು ಕನ್ನಡಿಯಲ್ಲಿ ತೋರುತ್ತಾನೋ ಅವನು ಯಾರು? (ಎಂದು ಅವರಿಬ್ಬರೂ ಪ್ರಶ್ನೆಮಾಡಲು) "ಅವನೇ ಇವೆಲ್ಲದರಲ್ಲಿಯೂ ಕಂಡುಬರುವವನು" ಎಂದು (ಪ್ರಜಾಪತಿಯು ಉತ್ತರಕೊಟ್ಟನು).

(५) उदशराव आत्मानमवेक्ष्य यदात्मनो न विजानीथस्तन्मे प्रब्रूतमिति तौहोदशरावेऽवेक्षाञ्चक्राते ॥ तौह प्रजापतिरु

(೫) (ಮತ್ತು) "ನೀವು ಒಂದು ನೀರಿನ ಪಾತ್ರದಲ್ಲಿ ನಿಮ್ಮನ್ನು ನೋಡಿಕೊಂಡು, ಆತ್ಮನ ವಿಷಯವಾಗಿ ನಿಮಗೆ ಏನು ತಿಳಿ

वाच किंपश्यथ? इति तौहोचतुः सर्वमेवेद मावां भगव आत्मानं पश्याव आलोमभ्य आनखेभ्यः प्रतिरूपमिति ॥ (८-८-१)

ಯುವದಿಲ್ಲವೋ ಅದನ್ನು ನನ್ನ ಕೂಡೆ ಕೇಳಿಕೊಳ್ಳಿರಿ ಎಂದು ಅಪ್ಪಣೆಕೊಟ್ಟನು ಅವರು ನೀರಿನ ಪಾತ್ರದಲ್ಲಿ ನೋಡಿಕೊಂಡರು. "ನಿಮಗೆ ಏನು ಕಾಣುತ್ತದೆ" ಎಂದು ಪ್ರಜಾಪತಿಯು ಅವರಿಗೆ ಪ್ರಶ್ನೆಮಾಡಿದನು. ಅವರು "ಸ್ವಾಮಿ! ಈ ಇಡೀ ಆತ್ಮನು ನಮಗೆ ಕಂಡುಬರುತ್ತಾನೆ; ರೋಮ ಮೊದಲುಗೊಂಡು ಉಗುರು ಪರ್ಯಂತರದ ಪ್ರತಿರೂಪ" ಎಂದು ಹೇಳಿದರು.

(२) तौहप्रजापतिरुवाच साध्वलंकृतौ सुवसनौ परिष्कृतौ भूत्वोदशरावेऽवेक्षेथामिति ।। तौहसाध्वलंकृतौ सुवसनौ परिष्कृतौ भूत्वोदशरावेऽवेक्षाञ्चक्राते । तौह प्रजापतिरुवाच किंपश्यथ? इति ॥ (८—८—२)

(೨) (ಆಗ) ಪ್ರಜಾಪತಿಯು (ಇಂದ್ರವಿರೋಚನರಿಗೆ) "ನೀವು ಚನ್ನಾಗಿ ಅಲಂಕರಿಸಿಕೊಂಡು, ಒಳ್ಳೇವಸ್ತ್ರಗಳನ್ನು ಧರಿಸಿಕೊಂಡು, ಪರಿಷ್ಕಾರ ಮಾಡಿಕೊಂಡು, ನೀರಿನ ಪಾತ್ರದಲ್ಲಿ ನೋಡಿಕೊಳ್ಳಿರಿ" ಎಂದು ಅಪ್ಪಣೆಕೊಟ್ಟನು. ಅವರು ಚನ್ನಾಗಿ ಅಲಂಕರಿಸಿಕೊಂಡು ಒಳ್ಳೇ ವಸ್ತ್ರಗಳನ್ನು ಧರಿಸಿಕೊಂಡು ಪರಿಷ್ಕಾರ ಮಾಡಿಕೊಂಡು ನೀರಿನ ಪಾತ್ರದಲ್ಲಿ ನೋಡಿಕೊಂಡರು. "ನಿಮಗೆ ಏನು ಕಾಣುತ್ತದೆ?" ಎಂದು ಪ್ರಜಾಪತಿಯು ಅವರ ಕೂಡೆ ಪ್ರಶ್ನೆಮಾಡಿದನು.

(३) तौहो चतुर्यथैवेदमावां भगवः साध्वलंकृतौ सुवसनौ परिष्कृतौस्व एवमेवेमौ भगवः साध्वलंकृतौ सुवसनौ परिष्कृताविलेष आत्मेति होवाचैतदमृतमभयमेतद्ब्रह्मेति ॥ तौहशान्तहृदयौ प्रवव्रजतुः ॥ (८—८—३)

(೩) ಅದಕ್ಕವರು "ಸ್ವಾಮಿ! ನಾವು ಹೇಗೆ ಚನ್ನಾಗಿ ಅಲಂಕರಿಸಿಕೊಂಡು ಒಳ್ಳೇ ವಸ್ತ್ರಗಳನ್ನು ಧರಿಸಿಕೊಂಡು, ಪರಿಷ್ಕಾರ ಮಾಡಿಕೊಂಡು ಇರುತ್ತೇವೋ ಹಾಗೆಯೇ ಇವರಿಬ್ಬರೂ (ಛಾಯಾತ್ಮರು) ಚನ್ನಾಗಿ ಅಲಂಕರಿಸಿಕೊಂಡು ಒಳ್ಳೇ ವಸ್ತ್ರಗಳನ್ನು ಧರಿಸಿಕೊಂಡು, ಪರಿಷ್ಕಾರಮಾಡಿಕೊಂಡು ಇರುತ್ತಾರೆ—ಸ್ವಾಮಿ!" ಎಂದು ಉತ್ತರ ಕೊಟ್ಟರು. (ಆಗ ಪ್ರಜಾಪತಿಯು) ಇವನೇ ಆತ್ಮನು, ಇವನು ಸಾವಿಲ್ಲದವನು, ಭಯವಿಲ್ಲದವನು, ಇವನು ಬ್ರಹ್ಮ ಎಂದು ಅಪ್ಪಣೆಕೊಟ್ಟನು. (ಆದಕ್ಕವರು) ಉಭಯುತರೂ ಶಾಂತಚಿತ್ತರಾಗಿ ಹೊರಟು ಹೋದರು.

(८) तौहान्वीक्ष्यप्रजापतिरुवाचानुपलभ्यात्मानमननुविद्यव्रजतो यतरएतदुपनिषदो भविष्यन्ति, देवावाऽसुरावा ते पराभविष्यन्तीति ॥ सहशान्तहृदयएव विरोचनोऽसुराञ्जगामतेभ्योहै तामुपनिषदं प्रोवाचात्मैवेहमहय्य आत्मापरिचर्य्य आत्मानमेवेहमहयन्नात्मानं परिचरन्नुभौ लोकाववाप्नोतीमंचामुंचेति ॥ (८-८-४)

(೮) ಪ್ರಜಾಪತಿಯು ಅವರಿಬ್ಬರೂ ಹೊರಟು ಹೋದದ್ದನ್ನು ಕಂಡು (ಇವರು ಭಯಂತರೂ) "ಆತ್ಮನನ್ನು ಕಂಡುಕೊಳ್ಳದೆ (ಮತ್ತು) ತಿಳಕೊಳ್ಳದೆ ಹೋಗುತ್ತಾರೆ. ಇವರಲ್ಲಿ ದೇವತೆಗಳಾಗಲೀ, ಅಸುರರಾಗಲೀ, ಯಾರು ಈ ತತ್ವವನ್ನನುಸರಿಸುತ್ತಾರೋ ಅವರು ನಾಶವಾಗುತ್ತಾರೆ" ಎಂದು ಹೇಳಿದನು. ವಿರೋಚನನು ಶಾಂತಚಿತ್ತ ಉಳ್ಳವನಾಗಿಯೇ ಅಸುರರ ಬಳಿಗೆ ಹೋದನು. (ಮತ್ತು) ಅವರಿಗೆ ಈ (ವಕ್ಷ್ಯಮಾಣ) ತತ್ವವನ್ನು ಉಪದೇಶಿಸಿದನು. "ಆತ್ಮ(ದೇಹ)ವನ್ನೇ ಇಲ್ಲಿ ಪೂಜಿಸಬೇಕು. ಆತ್ಮವನ್ನೇ ಸೇವಿಸಬೇಕು. ಇಲ್ಲಿ ಆತ್ಮವನ್ನೇ ಪೂಜಿಸಿದರೆ, (ಮತ್ತು) ಆತ್ಮವನ್ನೇ ಸೇವಿಸಿದರೆ, ಇಹಲೋಕ ಮತ್ತು ಪರಲೋಕ ಈ ಉಭಯ ಲೋಕಗಳನ್ನೂ ಪಡೆಯುವನು" ಎಂದು,

(९) तस्मादप्यद्येहाददानमश्रद्दधानमयजमानमाहुरासुरोबतेत्यसुराणाꣳह्येषोपनिषत्प्रेतस्य शरीरं भिक्षयावसनेनालंकारेणेति सꣳस्कुर्वन्त्येतेनह्यमुंलोकं जेष्यन्तोमन्यन्ते ॥ (८-८-५)

(೯) ಆದಕಾರಣ ಇಲ್ಲಿ ದಾನಶೀಲನಲ್ಲದ, ಶ್ರದ್ಧಾಳುವಲ್ಲದ, ಯಜ್ಞಾದಿಗಳನ್ನು ಮಾಡದವನ ಕುರಿತು "ಅಯ್ಯೋ (ಇವನು) ಅಸುರನು" ಎಂದು ಅದ್ಯಾಪಿ ಜನಗಳು ಹೇಳುವರು. ಪ್ರೇತನ (ಗತಿಸಿದವನ) ಶರೀರಕ್ಕೆ (ಶವಕ್ಕೆ) ಅನ್ನಪಾನದಿಂದಲೂ ಉಡಿಗೆತೊಡಿಗೆಯಿಂದಲೂ ಅಲಂಕಾರದಿಂದಲೂ (ಕೆಲವರು) ಸಂಸ್ಕಾರ ಮಾಡುತ್ತಾರೆ. (ಮತ್ತು) ಇದರಿಂದ ಪರಲೋಕವನ್ನು ಜಯಿಸಿದೆವೆಂದು ತಿಳಿಯುತ್ತಾರೆ. ಇದು ಅಸುರರ ಪದ್ಧತಿಯಾಗಿರುತ್ತದೆ.

(१०) अथहेन्द्रोऽप्राप्यैवदेवानेतद्भयं ददर्श यथैव खल्वयमस्मिञ्छरीरे साध्वलंकृते साध्वलंकृतो भवति सुवसने सुवसनः परिष्कृते परिष्कृत एवमेवायास्मिन्नन्धेऽन्धो भवति स्रामेस्रामः परिवृक्णे परिवृक्णोऽस्यै

(೧೦) ಆದರೆ ಇಂದ್ರನು ದೇವತೆಗಳ ಬಳಿಗೆ ತಲ್ಪುವ ಮೊದಲೇ "ಪ್ರಸಿದ್ಧನಾದ ಇವನು (ಈ ಛಾಯಾತ್ಮನು) ಈ ಶರೀರವು ಚನ್ನಾಗಿ ಅಲಂಕರಿಸಲ್ಪಟ್ಟಿದ್ದರೆ ಚನ್ನಾಗಿ ಅಲಂಕರಿಸಲ್ಪಟ್ಟಿರುತ್ತಾನೆ. ಒಳ್ಳೇ

वशरीरस्य नाशमन्वेषनश्यति । नाहमत्रभो ग्यं पश्यामीति ॥ (८–९–१)

ವಸ್ತ್ರವನ್ನು ಧರಿಸಿಕೊಂಡಿದ್ದರೆ, ಒಳ್ಳೇ ವಸ್ತ್ರವನ್ನು ಧರಿಸಿಕೊಂಡಿರುತ್ತಾನೆ. ಪರಿಷ್ಕರಿಸಲ್ಪಟ್ಟಿದ್ದರೆ ಪರಿಷ್ಕರಿಸಲ್ಪಟ್ಟಿರುತ್ತಾನೆ, ಹೇಗೋ ಹಾಗೆಯೇ ಇವನು ಈ ಶರೀರವು ಕುರುಡಾಗಿದ್ದರೆ ಕುರುಡ, ರೋಗಿಷ್ಟವಾಗಿದ್ದರೆ ರೋಗಿಷ್ಟ, ಮೋಟು ಆಗಿದ್ದರೆ ಮೋಟನಾಗಿರುವನು. ಈ ಶರೀರವೇ ನಾಶಪಟ್ಟರೆ ಇವನು ನಾಶಪಡುವನು. ಇದರಲ್ಲಿ ನನಗೆ ಪ್ರಯೋಜನ ತೋರಲಿಲ್ಲ" ಎಂದು ಭಯವನ್ನು ಕಂಡುಕೊಂಡು;

(११) स समित्पाणिः पुनरेयाय ॥ तꣳ ह प्रजापतिरुवाच मघवन्यच्छान्तहृदयः प्राव्राजीः सार्द्धं विरोचनेन किमिच्छन् पुनरागमः? इति । सहोवा च यथैव खल्वयं भगवोऽस्मिञ्छरीरे साध्वलंकृते साध्वलंकृतो भवति सुवसनेसुवसनः परिष्कृते परिष्कृत एवमेवायमस्मिन्नन्धेऽन्धो भवति स्रामेस्राम: परिवृक्णे परिवृक्णोऽस्यैव शरीरस्य नाशमन्वेषनश्यति।नाहमत्रभोग्यं पश्यामीति॥ (८–९–२)

(೧೧) ಅವನು ಸಮಿತ್‌ಪಾಣಿಯಾಗಿ ಪುನಹ (ಪ್ರಜಾಪತಿಯ) ಬಳಿಗೆ ಬಂದನು. ಪ್ರಜಾಪತಿಯು "ಇಂದ್ರ! ಶಾಂತಚಿತ್ತನಾಗಿ ವಿರೋಚನನೊಟ್ಟಿಗೆ ಹೋದನೀನು ಪುನಃ ಏನು ಇಚ್ಛಿಸಿಕೊಂಡು ಬಂದಿ?" ಎಂದು ಅವನಕೂಡೆ ಪ್ರಶ್ನೆಮಾಡಿದನು. ಅವನು "ಸ್ವಾಮಿ! ಪ್ರಸಿದ್ಧನಾದ ಇವನು (ಛಾಯಾತ್ಮನು) ಈ ಶರೀರವು ಚನ್ನಾಗಿ ಅಲಂಕರಿಸಲ್ಪಟ್ಟಿದ್ದರೆ, ಚನ್ನಾಗಿ ಅಲಂಕರಿಸಲ್ಪಟ್ಟಿರುತ್ತಾನೆ. ಒಳ್ಳೇ ವಸ್ತ್ರ ಧರಿಸಲ್ಪಟ್ಟಿದ್ದರೆ, ಒಳ್ಳೇ ವಸ್ತ್ರ ಧರಿಸಲ್ಪಟ್ಟಿರುತ್ತಾನೆ; ಪರಿಷ್ಕಾರ ಮಾಡಲ್ಪಟ್ಟಿದ್ದರೆ, ಪರಿಷ್ಕಾರ ಮಾಡಲ್ಪಟ್ಟಿರುತ್ತಾನೆ ಹೇಗೋ ಹಾಗೆಯೇ ಇದು ಕುರುಡಾಗಿದ್ದರೆ, ಇವನು ಕುರುಡ; ರೋಗಿಷ್ಟವಾಗಿದ್ದರೆ ರೋಗಿಷ್ಟ; ಮೋಟು ಆಗಿದ್ದರೆ ಮೋಟನಾಗಿರುವನು; ಈ ಶರೀರವೇ ನಾಶಪಟ್ಟರೆ ಇವನು ನಾಶಪಡುವನು. ಇದರಲ್ಲಿ ನನಗೆ ಪ್ರಯೋಜನ ತೋರಲಿಲ್ಲ" ಎಂದು ಉತ್ತರಕೊಟ್ಟನು.

(१२) एवमेवैष मघवन्निति होवाचै तन्त्वेवते भूयोऽनुव्याख्यास्यामि वसापराणि द्वात्रिꣳ शतं वर्षाणीति ॥ सहापराणि द्वात्रिꣳ शतं वर्षाण्युवास तस्मैहोवाच ॥ (८–९–३)

(೧೨) ಅತ ಹಾಗೆಯೇ ಸರಿ ಇಂದ್ರ! ಇವನನ್ನೇ ಪುನಹ ನಿನಗೆ ವಿವರಿಸಿ ಹೇಳುತ್ತೇನೆ. ಇನ್ನೂ ೩೨ ವರುಷ (ಇಲ್ಲಿ) ವಾಸಮಾಡು ಎಂದು (ಪ್ರಜಾಪತಿಯು) ಅಪ್ಪಣೆಕೊಟ್ಟನು. ಇಂದ್ರನು (ಆ ಮೇರೆಗೆ) ಮತ್ತೂ ೩೨ವರುಷ ವಾಸಮಾಡಿದನು. ಅವನಿಗೆ (ಪ್ರಜಾಪತಿಯು) ಹೇಳಿದ್ದೇನೆಂದರೆ:–

(१३) यएषस्वप्ने महीयमानश्चरत्येष आत्मेति होवाचैतदमृतमभयमेतद्ब्रह्मेति ॥ सहशान्तहृदयः प्रवव्राज । सहाप्राप्यैव देवा नेतद्भयं ददर्शतद्यद्यपीदं शरीरमन्धं भवत्य नन्धः स भवति यदिस्राममस्रामो नैवैषोऽ स्यदोषेण दुष्यति ॥

न वधेनास्यहन्यते नास्यस्राम्येण स्रा मोघ्नन्तित्वेवैनं विच्छादयन्तीवा प्रियवेत्तेव भवत्यपिरोदितीव । नाहमत्र भोग्यं पश्या मीति ॥ ८—१०— (१/२)

(೧೩) "ಯಾರು ಸ್ವಪ್ನದಲ್ಲಿ ಮಹೀಯಮಾನನಾಗಿ (ಸ್ವತಂತ್ರನಾಗಿ) ಸಂಚರಿಸುತ್ತಾನೋ ಇವನು ಆತ್ಮನು, ಇವನು ಸಾವಿಲ್ಲದವನು, ಭಯವಿಲ್ಲದವನು, ಇವನು ಬ್ರಹ್ಮ" ಎಂದು. ಇಂದ್ರನು ಶಾಂತಚಿತ್ತ ಉಳ್ಳವನಾಗಿ ಹೊರಟುಹೋದನು. ಅವನು ದೇವತೆಗಳ ಬಳಿಗೆ ತಲ್ಪುವ ಮೊದಲೇ ಈ (ಈಗ ಹೇಳುವ) ಭಯವನ್ನು ಕಂಡುಕೊಂಡನು. (ಅದು ಯಾವದಂದರೆ) ಈ ಶರೀರವು ಕುರುಡು ಆದರೆ, ಇವನು ಕುರುಡನಾಗುವದಿಲ್ಲ. ರೋಗಿಷ್ಟನಾಗಿದ್ದರೆ, ರೋಗಿಷ್ಟನಾಗುವದಿಲ್ಲ. ಇದರ ಕೊರತೆಯಿಂದ ಇವಗೆ ಕೊರತೆ ಬರುವದೇ ಇಲ್ಲ.

ಇದನ್ನು ಕೊಂದರೆ, ಇವನು ಸಾಯುವದಿಲ್ಲ. ಇದರ ರೋಗದಿಂದ ಇವನು ರೋಗಿಯಾಗುವದಿಲ್ಲ; ಆದಾಗ್ಯೂ "ಪೆಟ್ಟು ತಿಂದಂತೆ, ಅಟ್ಟಲ್ಪಟ್ಟಂತೆ, ವ್ಯಸನಪಟ್ಟಂತೆ, ಅಳುವಂತೆ, ಕೂಡಾ ತೋರುತ್ತಾನೆ. ಇದರಲ್ಲಿ ನನಗೆ ಪ್ರಯೋಜನ ಕಾಣುವದಿಲ್ಲ" ಎಂದು,

(१४) स समित्पाणिः पुनरेयाय ॥ तं ह प्रजापतिरुवाच मघवन्यच्छान्तहृदयः प्राव्राजीः किमिच्छन् पुनरागमः? इति ॥ स होवाच तद्यद्यपीदं भगवः शरीरमन्धं भवत्य नन्धः स भवति यदिस्राममस्रामो नैवैषोऽस्य दोषेण दुष्यति ॥

नवधेनास्यहन्यते नास्यस्राम्येण स्रामो घ्नन्तित्वेवैनं विच्छादयन्तीवा प्रियवेत्तेव भ वत्यपिरोदितीव । नाहमत्रभोग्यं पश्यामीत्ये व मेवैषमघवन्निति होवाचैतन्त्वेवते भूयोनु

(೧೪) ಅವನು ಸಮಿತ್ಪಾಣಿಯಾಗಿ ಪುನಹ (ಪ್ರಜಾಪತಿಯ ಬಳಿಗೆ) ಬಂದನು. ಪ್ರಜಾಪತಿಯು "ಇಂದ್ರ! ಶಾಂತಚಿತ್ತನಾಗಿ ಹೋದ ನೀನು ಪುನಹ ಏನು ಇಚ್ಛಿಸಿಕೊಂಡು ಬಂದಿ?" ಎಂದು ಅವನಕೂಡೆ ಪ್ರಶ್ನೆಮಾಡಿದನು. ಅವನು "ಸ್ವಾಮಿ! ಈ ಶರೀರವು ಕುರುಡು ಆದರೆ ಇವನು ಕುರುಡನಾಗುವದಿಲ್ಲ, ರೋಗಿಷ್ಟವಾದರೆ ರೋಗಿಷ್ಟನಾಗುವದಿಲ್ಲ, ಇದರ ಕೊರತೆಯಿಂದ ಇವನಿಗೆ ಕೊರತೆ ಬರುವದಿಲ್ಲ,

व्याख्यास्यामित्वसापराणि द्वात्रिंशतं वर्षाणीति ॥ सहापराणि द्वात्रिंशतं वर्षाण्युवास ॥ तस्मैहोवाच ॥ ८—१०— (३/४)

ಇದನ್ನು ಕೊಂದರೆ ಇವನು ಸಾಯುವದಿಲ್ಲ, ಇದರ ರೋಗದಿಂದ ಇವನು ರೋಗಿಯಾಗುವದಿಲ್ಲ. ಆದರೂ ಪೆಟ್ಟು ತಿಂದಂತೆ, ಅಟ್ಟಿಸಲ್ಪಟ್ಟಂತೆ, ವ್ಯಸನಪಟ್ಟಂತೆ, ಅಳುವಂತೆ ಕೂಡಾ ತೋರುತ್ತಾನೆ. ಇದರಲ್ಲಿ ನನಗೆ ಪ್ರಯೋಜನ ಕಾಣಲಿಲ್ಲ" ಎಂದು ಹೇಳಿದನು. (ಅದಕ್ಕೆ ಪ್ರಜಾಪತಿಯು) "ಇಂದ್ರ! ಇವನು ಹಾಗೆಯೇ ಸರಿ. ಇವನನ್ನೇ ಪುನಹ ನಿನಗೆ ವಿವರಿಸಿ ಹೇಳುತ್ತೇನೆ. ಇನ್ನೂ ೩೨ ವರುಷ (ಇಲ್ಲಿ) ವಾಸಮಾಡು," ಎಂದು ಅಪ್ಪಣೆಕೊಟ್ಟನು. ಅವನು ಮತ್ತೂ ೩೨ ವರುಷ ವಾಸಮಾಡಿದನು. ಅವಗೆ ಪ್ರಜಾಪತಿಯು ಹೇಳಿದ್ದೇನಂದರೆ:—

(१५) तद्यत्रैतत् सुप्तः समस्तः सम्प्रसन्नः स्वप्नं न विजानात्येष आत्मेति होवाचैतदमृतमभयमेतद्ब्रह्मेति ॥ सहशान्तहृदयः प्रवव्राज । सहाप्राप्यैव देवानेतद्भयं ददर्श नाहखल्वयमेवं सम्प्रत्यात्मानं जानात्ययमहमस्मीति । नोएवेमानि भूतानि । विनाशमेवापीतो भवति । नाहमत्रभोग्यं पश्यामीति ॥ (८—११—१)

(೧೫) "ಯಾರು ಗಾಢನಿದ್ರಾವಸ್ಥೆಯಲ್ಲಿ ವಿಶ್ರಾಂತಿಯನ್ನು ಹೊಂದಿ ಪೂರ್ಣಸಂತುಷ್ಟನಾಗಿ ಸ್ವಪ್ನವನ್ನನುಭವಿಸುವದಿಲ್ಲವೋ, ಇವನು ಆತ್ಮನು, ಇವನು ಸಾವಿಲ್ಲದವನು, ಭಯವಿಲ್ಲದವನು, ಇವನು ಬ್ರಹ್ಮ" ಎಂದು (ಪ್ರಜಾಪತಿಯು) ಹೇಳಿದನು. ಅವನು (ಇಂದ್ರನು) ಶಾಂತಚಿತ್ತನಾಗಿ ಹೊರಟುಹೋದನು. (ಆದರೆ) ಅವನು ದೇವತೆಗಳ ಬಳಿಗೆ ತಲ್ಪುವ ಮೊದಲೇ ಈ (ಈಗ ಹೇಳುವ) ಭಯವನ್ನು ಕಂಡುಕೊಂಡನು. (ಯಾವದಂದರೆ:)—"ಹಾಗಾದರೆ ನಿಜವಾಗಿ ಈಗ (ಒಬ್ಬನು) ಈ "ಆತ್ಮನು ನಾನು" ಎಂತಾಗಲೀ, "ಈ ಪ್ರಾಣಿಗಳು" ಎಂತಾಗಲೀ, ತಿಳಿಯುವದೇ ಇಲ್ಲ. "ತೀರಾ ನಾಶಪಟ್ಟೇ ಹೋಗುತ್ತಾನೆ. ಇದರಲ್ಲಿ ನನಗೆ ಪ್ರಯೋಜನ ಕಾಣುವದಿಲ್ಲ" ಎಂದು.

(१६) स समित्पाणिः पुनरेयाय ॥ तंह प्रजापतिरुवाच मघवन्यच्छान्तहृदयः प्राव्राजीः किमेवेच्छन्पुनरागमः इति सहोवाच नाहखल्वयं भगवएवं सम्प्रत्यात्मानं

(೧೬) ಅವನು ಸಮಿತ್ಪಾಣಿಯಾಗಿ, ಪುನಹ (ಪ್ರಜಾಪತಿಯ ಬಳಿಗೆ) ಬಂದನು. ಪ್ರಜಾಪತಿಯು "ಇಂದ್ರ! ಶಾಂತಚಿತ್ತನಾಗಿ ಹೊರಟುಹೋದ ನೀನು ಪುನಹ ಯಾವ

ज्ञानात्ययमहमस्मीति । नोएवेमानि भूतानि । विनाशमेवापीतो भवति ॥ नाहमत्र भोग्यं पश्यामीति ॥ (८–११–२)

ವಿಶೇಷ ಪದಾರ್ಥವನ್ನು ಇಚ್ಛಿಸಿಕೊಂಡು ಬಂದಿ?" ಎಂದು ಅವನಕೂಡೆ ಕೇಳಿದನು. ಅದಕ್ಕವನು—"ಸ್ವಾಮಿ ಹಾಗಾದರೆ ನಿಜವಾಗಿ ಈಗ ಒಬ್ಬನು ಈ "ಆತ್ಮನು ನಾನು" ಎಂತಾಗಲೀ, "ಈ ಪ್ರಾಣಿಗಳು" ಎಂತಾಗಲೀ ತಿಳಿಯುವದೇ ಇಲ್ಲ. ತೀರಾ ನಾಶಪಟ್ಟೇ ಹೋಗುತ್ತಾನೆ. ಇದರಲ್ಲಿ ನನಗೆ ಪ್ರಯೋಜನ ಕಾಣುವದಿಲ್ಲ" ಎಂದು ಉತ್ತರಕೊಟ್ಟನು.

(१७) एवमेवैषमघवन्निति होवाचै तन्त्वेवते भूयोनुव्याख्यास्यामिनो एवान्यत्रैतस्माद्वसाऽपराणि पञ्चवर्षाणीति सहापराणि पञ्चवर्षाण्युवास । तान्येकशतं स म्पेदुरेतत्तद्यदाहुरेकशतं हवैवर्षाणि मघवान्प्रजापतौ ब्रह्मचर्य्यमुवास ॥ तस्मैहोवाच॥ (८–११–३)

(೧೭) "ಇವನು ಹಾಗೆಯೇ ಸರಿ ಇಂದ್ರ! ಇವನನ್ನೇ ಪುನಹ ನಿನಗೆ ವಿವರಿಸಿ ಹೇಳುತ್ತೇನೆ. ಇವನ ಹೊರತು ಇನ್ನ್ಯಾರನ್ನೂ ಅಲ್ಲ. ಇನ್ನೂ ೫ ವರುಷ (ಇಲ್ಲಿ) ವಾಸಮಾಡು" ಎಂದು (ಪ್ರಜಾಪತಿಯು ಅಪ್ಪಣೆಕೊಟ್ಟನು. ಇಂದ್ರನು ಮತ್ತೂ ೫ ವರುಷ (ಅವನಲ್ಲಿ) ವಾಸ ಮಾಡಿದನು. (ಹೀಗೆ) ಆ ವರುಷಗಳು ಒಟ್ಟು ೧೦೧ ಆದವು. ಇಂದ್ರನು ಪ್ರಜಾಪತಿಯ (ಗೃಹದ)ಲ್ಲಿ ೧೦೧ ವರುಷ ಬ್ರಹ್ಮಚರ್ಯ ವ್ರತವನ್ನಾಚರಿಸಿಕೊಂಡಿದ್ದನೆಂದು (ಜನರು) ಹೇಳುವದು ಈ ಕಾರಣದಿಂದಾಗಿರುತ್ತದೆ. (ಆಗ ಪ್ರಜಾಪತಿಯು) ಇಂದ್ರಗೆ ಹೇಳಿದ್ದೇನೆಂದರೆ:—

(१८) मघवन्मर्त्यं वाइदं शरीरमात्तं मृत्युनातदस्यामृतस्या शरीरस्यात्मनोऽधिष्ठानमात्तोवै सशरीरः प्रियाप्रियाभ्यां । नहवै सशरीरस्यसतः प्रियाप्रिययोरपहतिरस्त्यशरीरं वावसन्तं न प्रियाप्रियेस्पृशतः ॥ (८–१२–१)

(೧೮) ಇಂದ್ರ! ಈ ಶರೀರವು ಸಾವು ಉಳ್ಳದ್ದು. ಮೃತ್ಯುಗ್ರಸ್ತವಾಗಿ ಇದೆ. ಅದು ಸಾವಿಲ್ಲದಂಥಾ ಶರೀರರಹಿತನಾದ ಆತ್ಮನು ವಾಸಿಸಿಕೊಂಡಿರುವ ಸ್ಥಳವಾಗಿರುತ್ತದೆ. ಶರೀರಸಹಿತನಾಗಿದ್ದಾಗ (ಅವನು) ಸುಖದುಃಖಗಳಿಂದ ಗ್ರಸ್ತನಾಗಿರುತ್ತಾನೆ. ಯಾಕಂದರೆ ಶರೀರಸಹಿತನಾದವನಿಗೆ ಸುಖದುಃಖಗಳಿಂದ ಬಿಡುಗಡೆ ಇಲ್ಲ. ಶರೀರರಹಿತನಾದವನನ್ನು ಸುಖದುಃಖಗಳು ಮುಟ್ಟುವದಿಲ್ಲ.

(१९) अशरीरो वायुरभ्रं विद्युत्स्त

(೧೯) ವಾಯುವು ಶರೀರವಿಲ್ಲದ್ದು.

नयित्नुरशरीराण्येतानि । तद्यथैतान्यमुष्मा दाकाशात्समुत्थायपरंज्योतिरुपसम्पद्यस्वेन रूपेणाभिनिष्पद्यन्ते ॥ (८—१२—२)

ಮೇಘ, ಮಿಂಚು, ಗುಡುಗು, ಇವುಗಳು ಶರೀರವಿಲ್ಲದವುಗಳು. ಇವುಗಳು ಆ ಆಕಾಶದಿಂದ ವಿರಳವಾಗಿ ಎದ್ದು ಪರಂ ಜ್ಯೋತಿಯನ್ನು ಪ್ರಾಪಿಸಿ ತಮ್ಮ ಸ್ವರೂಪನಿಷ್ಪತ್ತಿಯನ್ನು ಹೇಗೆ ಪಡಿಯುತ್ತವೋ;

(२०) एवमेवैषसंप्रसादोऽस्माच्छरीरात्समुत्थाय परंज्योतिरुपसम्पद्यस्वेन रूपेणाभिनिष्पद्यते । स उत्तमः पुरुषः। स तत्र पर्य्येति जक्षन् क्रीडन्नममाणः स्त्रीभिर्वा या नैर्वाज्ञातिभिर्वानोपजनꣳस्मरन्निदꣳ शरीरꣳ स यथाप्रयोग्य आचरणेयुक्तः एवमेवायमस्मिञ्छरीरे प्राणेयुक्तः ॥ (८—१२—३)

(೨೦) ಹಾಗೆಯೇ ನಿಶ್ಚಿಂತನಾದ (ಈ ಜೀ)ವನು ಈ ಶರೀರದಿಂದ ಹೊರಟು ಪರಂಜ್ಯೋತಿಯನ್ನು ಪ್ರಾಪಿಸಿ(ದಪಕ್ಷದ ಲ್ಲಿ) ತನ್ನ ಸ್ವಂತ ರೂಪನಿಷ್ಪತ್ತಿಯನ್ನು ಪಡಿಯುತ್ತಾನೆ. ಅವನು ಉತ್ತಮ ಪುರುಷನು(ನಾನು ಎನ್ನುವವನು). ಅವನು ಅಲ್ಲಿ ಈ ಶರೀರದ ಗೊಡವೆ ಇಲ್ಲದೆ, ಹೆಂಗಸರ ಸಂಗಡ ಆಗಲೀ, ವಾಹನಾರೂಢನಾಗಿ ಆಗಲೀ, ಜ್ಞಾತಿಗಳ ಸಂಗಡ ಆಗಲೀ, ನಗುತ್ತಾ, ಆಡುತ್ತಾ, ಸಂಚಾರಮಾಡುತ್ತಾ ಇರುತ್ತಾನೆ. ಕುದುರೆಯನ್ನು ಹೇಗೆ ಗಾಡಿಗೆ ಕಟ್ಟುತ್ತಾರೋ, ಅದೇ ರೀತಿ ಈ ಶರೀರದಲ್ಲಿ ಪ್ರಾಣನು ಜೋಡಿಸಲ್ಪಟ್ಟಿರುತ್ತಾನೆ.

(२१) अथयत्रैतदाकाशमनुविषण्णं चक्षुः स चाक्षुषः पुरुषो दर्शनाय चक्षुरथयो वेदेदं जिघ्राणीति स आत्मा । गन्धायघ्राणमथयोवेदेदमभिव्याहराणीति स आत्माऽभिव्याहाराय वागथयो वेदेदꣳशृण्वानीति स आत्मा । श्रवणाय श्रोत्रं ॥ (८—१२—४)

(೨೧) ಮತ್ತು ಈ ಚಕ್ಷುರಿಂದ್ರಿಯವು ಯಾವ ಆಕಾಶದಲ್ಲಿ (ಕಣ್ಣಿನ ಕೃಷ್ಣ ತಾರೆಯಲ್ಲಿ) ಆಶ್ರಯಿಸಿಕೊಂಡುಂಟೋ ಅಲ್ಲಿರುವವನು ಚಾಕ್ಷುಷ (ಕಣ್ಣಿನಲ್ಲಿರುವ) ಪುರುಷನು. ಅವನು ನೋಡುವದಕ್ಕೆ ಚಕ್ಷುರಿಂದ್ರಿಯು (ಕರಣ)ವಾಗಿರುತ್ತದೆ. ಮತ್ತು ಇದನ್ನು (ಫಲಾಣೆ ವಸ್ತುವನ್ನು) ಮೂಸುತ್ತೇನೆಂದು ಯಾರು ತಿಳಿಯುತ್ತಾನೋ, ಅವನು ಆತ್ಮ, ಮೂಸುವದಕ್ಕೆ ಘ್ರಾಣೇಂದ್ರಿಯು, ಮತ್ತು ಇದನ್ನು ಹೇಳುತ್ತೇನೆಂದು ಯಾರು ತಿಳಿಯುತ್ತಾನೋ, ಅವನು ಆತ್ಮಾ, ಹೇಳುವದಕ್ಕೆ ವಾಗಿಂದ್ರಿಯ, ಮತ್ತು ಇದನ್ನು ಕೇಳುತ್ತೇನೆಂದು ಯಾರು ತಿಳಿಯುತ್ತಾನೋ, ಅವನು ಆತ್ಮಾ, ಕೇಳುವದಕ್ಕೆ ಶ್ರೋತ್ರೇಂದ್ರಿಯು.

(२२) अथयोवेदेदं मन्वानीति स

(೨೨) ಮತ್ತು ಇದನ್ನು ಯೋಚಿಸು

आत्मा । मनोऽस्यदैवं चक्षुः सवाएषएते न दैवेन चक्षुषाबनसैतान् कामान् पश्यन् रम ते ॥ यएते ब्रह्मलोके ॥ (८–१२–५)

ತ್ತ್ರೀನೆಂದು ಯಾರು ತಿಳಿಯುತ್ತಾನ್ಹೋ ಅವನು ಆತ್ಮನು, ಮನಸ್ಸು ಅವನ ದಿವ್ಯ ದೃಷ್ಟಿಯಾಗಿರುತ್ತದೆ. ಇವನೇ ಮನೋ ರೂಪವಾದ ದಿವ್ಯ ದೃಷ್ಟಿಯಿಂದ ಬ್ರಹ್ಮಲೋಕದಲ್ಲಿರುವ ಈ ವಿಷಯುಗಳನ್ನು ನೋಡುತ್ತಾ, ಸಂತೋಷಪಡುತ್ತಾನೆ.

(२३) तंवाएतं देवा आत्मानमुपासते तस्मात्तेषांᳬ सर्वेचलोका आत्ताः सर्वे चकामाः स सर्वांᳬश्च लोकानाप्नोति सर्वांᳬश्च कामान्यस्तमात्मानमनुविद्यविजानातीतिह प्रजापतिरुवाच प्रजापतिरुवाच (८–१२–६)

(೨೩) ಈ ಆತ್ಮನನ್ನೇ ದೇವತೆಗಳು ಉಪಾಸಿಸುವದಾಗಿರುತ್ತದೆ. ಆದಕಾರಣ ಅವರಿಗೆ ಸಕಲ ಲೋಕಗಳು, ಸಕಲ ವಿಷಯುಗಳು, ದೊರಕಿವೆ. ಯಾರು ಈ ಆತ್ಮನನ್ನು ತಿಳಿದು, ಕಂಡುಕೊಳ್ಳುತ್ತಾನೋ ಅವನು ಸಕಲ ಲೋಕಗಳನ್ನೂ ಸಕಲ ವಿಷಯುಗಳನ್ನೂ ಪಡೆಯುತ್ತಾನೆ ಎಂದು ಪ್ರಜಾಪತಿಯು (ಇಂದ್ರಗೆ) ಉಪದೇಶಿಸಿದನು. ಪ್ರಜಾಪತಿಯು ಉಪದೇಶಿಸಿದನು.

XIನೇ ಪಾಠದ

# ವ್ಯಾಖ್ಯಾನಸಂಗ್ರಹ.



(೧) ಈ ಪಾಠದಲ್ಲಿ ಪ್ರತ್ಯಗಾತ್ಮವಿದ್ಯವು ಹೇಳಲ್ಪಡುತ್ತದೆಂದು ಇದರ ಉಪೋದ್ಘಾತದಲ್ಲಿ ಈ ಮೊದಲೇ ಹೇಳೋಣಾಗಿರುತ್ತದೆ. ಪ್ರತ್ಯಗಾತ್ಮನೆಂದು ಯಾರಿಗೆ ಹೇಳೋಣಾಗುತ್ತದೆಂಬದನ್ನು ತಿಳಿದರೆ, ಈ ವಿದ್ಯದ ಮುಖ್ಯ ಉದ್ದಿಶ್ಯವು ಸ್ಪಷ್ಟವಾಗುತ್ತದೆ. ಈಗ ಈ ಪಾಠವು VI, VIIನೇ ಪಾಠಗಳಿಗೆ ಸಮ್ಮಂಧಪಟ್ಟುಕೊಂಡುಂಟೆಂಬದು ವಾಚಕರಿಗೆ ತೋರದೇ ಇರಲಾರದು. ಈ ಪುರುಷನು ನಿತ್ಯಾ ತನ್ನ ಗಾಢನಿದ್ರಾವಸ್ಥೆಯಲ್ಲಿ, ಸತ್ (ಪರಬ್ರಹ್ಮ)ದಲ್ಲಿ ಶೇರಿಕೊಂಡು, ನಿರುಪದ್ರವನಾಗಿರುತ್ತಾನೆಂದು VIನೇ ಪಾಠದಲ್ಲಿ, ಆ ಕಾಲದಲ್ಲಿ ಅನೃತದಿಂದ ಆಚ್ಛಾದಿಸಲ್ಪಟ್ಟಿರುತ್ತಾನಾದ ಪ್ರಯುಕ್ತ, ಅದು ಹೇಗೆ ಉಂಟೆಂಬದು ಇವನಿಗೆ ಗೊತ್ತಾಗುವದಿಲ್ಲ. ಅದೇ ಅಪಹತ ಪಾಪ್ಮ

ತ್ವಾದಿ ಗುಣಗಳುಳ್ಳ ಅತ್ಮನು ಎಂಬದಾಗಿ VIIನೇ ಪಾಠದಲ್ಲಿ ಸಹ ಹೇಳೋಣಾಯಿತು. ಈ ಪಾಠದಲ್ಲಿ ಅವನು ಉತ್ತಮಪುರುಷನು (ನಾನು ಎನ್ನುವವನು) (೨೦) ನಮ್ಮ ಚಕ್ಷುರಾದಿ ಇಂದ್ರಿಯಗಳು ಅವಗೆ ಕರಣಗಳಾಗಿರುತ್ತವೆ (೨೧–೨೨) ಎಂದು ಹೇಳುವದರಿಂದ, ಹಿಂದೆ Iನೇ ಪಾಠದಲ್ಲಿ ಹೇಳಿದಂತೆ, ಪ್ರತಿ ಶರೀರದಲ್ಲಿ ಜೀವರೂಪದಿಂದ ಪ್ರವೇಶಿಸಿರುವವನು ಯಾರೋ ಅವನೇ ಪ್ರತ್ಯಗಾತ್ಮನು, ಅಪಹತಪಾಪ್ಮತ್ವಾದಿ ಗುಣಗಳುಳ್ಳ ಆತ್ಮನೂ ಅವನೇ ಎಂದು ತಿಳದುಬರುತ್ತದೆ.

अथयएष सम्प्रसादोऽस्माच्छरीरात्समुत्थाय परञ्ज्योतिरुपसम्पद्यस्वेन रूपेणाभिनिष्पद्यते एषआत्मेति होवाचैतदमृतमभयमेतद्ब्रह्मेत्युक्तं । तत्रकोसौसम्प्रसादः कथं वातस्याधिगमः यथासोऽस्माच्छरीरात्समुत्थाय परंज्योतिरुपसम्पद्यस्वेन रूपेणाभि निष्पद्यते येनलक्षणेनाभिनिष्पद्यते स किं लक्षण आत्मा सम्प्रसादस्य च देहसंबन्धीनिरूपाणि ततोयदन्यत्कथं स्वरूपं इत्येतेऽर्थावक्तव्या इत्युत्तरोग्रन्थ आरभ्यते ॥शं॥

ಶಂಕರಾಚಾರ್ಯರು, "ಸಂಪ್ರಸಾದನಾಗಿ ಈ ಶರೀರದಿಂದ ಹೊರಟು ಪರಂಜ್ಯೋತಿಯನ್ನು ಪ್ರಾಪಿಸಿ ತನ್ನ ಸ್ವರೂಪ ನಿಷ್ಪತ್ತಿಯನ್ನು ಯಾರು ಪಡಿಯುತ್ತಾನೋ ಇವನೇ ಆತ್ಮನು, ಇವನೇ ಸಾವಿಲ್ಲದವನು, ಭಯವಿಲ್ಲದವನು, ಇದೇ ಬ್ರಹ್ಮ,. ಎಂದು (ಪ್ರಜಾಪತಿಯು) ಹೇಳಿದ"ನೆಂದು ಹೇಳೋಣಾಯಿತು. ಈಗ ಈ ಸಂಪ್ರಸಾದನೆಂಬವನ್ಯಾರು, ಅವನನ್ನು ತಿಳಿಯುವದು ಹೇಗೆ, ಅವನು ಹೇಗೆ ಈ ಶರೀರದಿಂದ ಹೊರಟು, ಪರಂಜ್ಯೋತಿಯನ್ನು ಪ್ರಾಪಿಸಿ, ತನ್ನ ಸ್ವರೂಪನಿಷ್ಪತ್ತಿಯನ್ನು ಪಡಿಯುತ್ತಾನೆ. ಅವನು ಪಡಿಯುವ ಸ್ವರೂಪವು ಯಾವ ಲಕ್ಷಣ ಉಳ್ಳದ್ದು, ಆ ಆತ್ಮನು ಯಾವ ಲಕ್ಷಣಗಳುಳ್ಳವನು. ಸಂಪ್ರಸಾದನ ರೂಪಗಳು ದೇಹಸಮ್ಬಂಧ ಉಳ್ಳವುಗಳು. ಅದಕ್ಕೆ ಬದಲಾಗಿ ಬೇರೆ ಸ್ವರೂಪ ಇರುವದು ಹೇಗೆ ಎಂಬ ಈ ಸಂಗತಿಗಳನ್ನು ಹೇಳುವಗೋಸ್ಕರ ಮುಂದಿನ ಗ್ರಂಥವನ್ನು ಆರಂಭಿಸೋಣಾಗುತ್ತದೆಂದು ಹೇಳುತ್ತಾರೆ.

एवं दहरविद्यां समाप्यतदंगभूतां प्रत्यगात्मविद्यां प्रस्तौति ॥ रं ॥

ರಂಗರಾಮಾನುಜಾಚಾರ್ಯರು, ಈ ರೀತಿ ದಹರ (VII) ವಿದ್ಯವನ್ನು ಮುಗಿಸಿ, ಅದರ ಅವಯವಭೂತವಾದ ಪ್ರತ್ಯಗಾತ್ಮ ವಿದ್ಯವನ್ನು ಸ್ತುತಿಸೋಣಾಗುತ್ತದೆ ಎಂದು ಹೇಳುತ್ತಾರೆ.

ब्रह्मचर्यादिज्ञानसाधनमुपतिष्ठतां सर्वे षां अस्तिज्ञानोदयः इत्यतो योग्यस्यैवना यो ग्यस्येत्येतदाख्यायिकयाह य आत्मेति ॥२॥ ಮಾಧ್ವರು, ಬ್ರಹ್ಮಚರ್ಯ ಮೊದಲಾದ ಸಾಧನೆಗಳನ್ನು ಮಾಡುವವರೆಲ್ಲರಿಗೂ ಜ್ಞಾನ ಉಂಟಾಗುತ್ತದೋ ಎಂದರೆ ಯೋಗ್ಯಗಲ್ಲದೆ ಅಯೋಗ್ಯಗಲ್ಲ, ಎಂಬದನ್ನು ಆಖ್ಯಾನ (ಕಥೆ)ರೂಪವಾಗಿ ಹೇಳೋಣಾಗುತ್ತದೆಂದು ಹೇಳುತ್ತಾರೆ.

ಈ ಕಾರಣಗಳಿಂದ ಈ ಜೀವಾತ್ಮನನ್ನು ದೇಹೇಂದ್ರಿಯಾದಿಗಳಿಂದ ವಿವಿಕ್ತಪಡಿಸಿ ಅವನೇ ನೋಲೆ ಸೂಚಿಸಿದ ಅಪಹತಪಾಪ್ಮತ್ವಾದಿ ಗುಣಗಳುಳ್ಳವನೆಂದು ತಿಳಿಸಿಕೊಡುವದೇ ಈ ಪಾಠದ ಮುಖ್ಯ ಉದ್ದಿಶ್ಯವಾಗಿರುವದಾಗಿ ಕಂಡುಬರುತ್ತದೆ. ಈ ಸಂಗತಿ ಮುಂದೆ ಸ್ಪಷ್ಟವಾದೀತು.

(2) ಈಗ ಈ ಜೀವನು ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಅವಸ್ಥಾತ್ರಯಕ್ಕೆ ಒಳಪಟ್ಟವನಾಗಿರುತ್ತಾನೆ. ಅಮೃತತ್ವ, ಅಭಯತ್ವಗಳು ಆ ಅವಸ್ಥೆಗಳಿಗೆ ಮಿಕ್ಕವುಗಳು, ಆದಕಾರಣ ಅವುಗಳನ್ನು ಜೀವನಲ್ಲಿ ಕಂಡುಕೊಳ್ಳುವಗೋಸ್ಕರ ಇವನನ್ನು ಜಾಗ್ರದಾದ್ಯವಸ್ಥೆಗಳಿಂದ ವಿರಹಿತಪಡಿಸಿ ತೋರಿಸುವದು ಅಗತ್ಯವಿರುವದರಿಂದ ಆ ಉದ್ದಿಶ್ಯವನ್ನು ಈ ಕೆಳಗೆ ವಿವರಿಸುವ ರೀತಿಯಿಂದ ನೆರವೇರಿಸುವಣಾಗುತ್ತದೆ.

## ೧ನೇ ಜಾಗ್ರದವಸ್ಥೆ.

(೩) ಈ ಅವಸ್ಥೆಗೆ ಸಂಬಂಧಿಸಿ ನಮ್ಮ ದೃಷ್ಟಿಯಲ್ಲಿ ಕಂಡುಬರುವ ಪುರುಷನು ಸಾಯದೆ ಇರುವವನು, ಮತ್ತು ಭಯವಿಲ್ಲದವನು, ಇವನೇ ಆತ್ಮನೆಂದು ಉಪದೇಶಿಸೋಣಾಗುತ್ತದೆ. ದೃಷ್ಟಿಯಲ್ಲಿ ನಮ್ಮ ಪ್ರತಿರೂಪವೂ ತೋರುತ್ತದೆ. ಹಾಗೆಯೇ ನೀರಿನಲ್ಲಿ ಮತ್ತು ಕನ್ನಡಿಯಲ್ಲಿ ಸಹ ಅದು ತೋರುತ್ತದೆ. ಆದಕಾರಣ ಅವುಗಳಲ್ಲೆಲ್ಲ ತೋರುವವನ್ಯಾರು? ಎಂದು ಶಿಷ್ಯರು ಮಾಡಿದ ಪ್ರಶ್ನೆಗೆ ಪ್ರಜಾಪತಿಯು ಎಲ್ಲದರಲ್ಲಿ ಕಂಡುಬರುವವನೂ ಅವನೇ ಎಂದು ಉತ್ತರಕೊಟ್ಟನೆಂದು ೪ನೇ ಶ್ರುತಿಯಲ್ಲಿ ಹೇಳೋಣಾಗಿ ಇದೆ. ಇಲ್ಲಿ ದೃಷ್ಟಿಯಲ್ಲಿ ಕಂಡುಬರುವ ಪುರುಷನೆಂಬವನು, ಅದರಲ್ಲಿ ಮತ್ತು ಜಲಾದಿಗಳಲ್ಲಿ ತೋರುವ ನಮ್ಮ ಪ್ರತಿರೂಪವೋ? ಪ್ರತಿರೂಪವಲ್ಲವಾದರೆ ಬೇರೆ ಯಾವ ವಸ್ತು? ಎಂದು ತಿಳಿಯುವದು ಮುಖ್ಯವಾದದ್ದು.

यएषोऽक्षिणि पुरुषो निवृत्तच ಶಂಕರಾಚಾರ್ಯರು, ಕಣ್ಣಿನಲ್ಲಿ ತೋ

क्षुर्भिर्मृदितकषायैर्दृश्यते योगिभिर्द्रष्टा एष आत्मा × × एतदमृतं भूमाख्यं अतएवा भयं अतएवब्रह्मबृद्धतमामिति ॥ शं ॥ पुरुषः द्रष्टेति संमन्धः ॥ आ ॥

ರುವವನು ವಿಷಯ ವಿಮುಖರಾದಂಥಾ ನಿಷ್ಕಲ್ಮಷರಾದ ಯೋಗಿಗಳಿಗೆ ಕಂಡು ಬರುವ ನೋಡುವ ಪುರುಷನು. ಇವನು ಆತ್ಮ, ಇವನು ಅಮೃತ (ಸಾಯದವನು) ಯಾನೆ ಭೂಮಾ (ಪರಿಪೂರ್ಣ)ನೆಂದು ಹೇಳಲ್ಪಡುವವನು. ಆದಕಾರಣ ಭಯವಿಲ್ಲದವನು. ಆದಕಾರಣ ಬ್ರಹ್ಮ ಎಂದರೆ ಅತ್ಯಂತ ವೃದ್ಧ (ಮುದಿ ಮತ್ತು ದೊಡ್ಡದು) ಆದದ್ದು ಎಂದು ವಿವರಿಸುತ್ತಾರೆ.

अत्रयएषोऽक्षिणि पुरुषोदृश्यतइति नेहाक्षि पुरुषः परमात्मा । × । अतो प्रजापतिना प्रत्यगात्मैवोपदिश्यते । न चेहजीवस्याक्षिणिस्थितिरुपदिश्यते । अपित्वक्षि प्रसादविकाराभ्यां जीवस्यस्थितिगतीनिश्चीयते अतो अक्ष्णो जीवास्थितिगतिसूचकत्वा दक्षिणिदृश्यत इत्युक्तं ॥ रं ॥

ರಾಮಾನುಜಾಚಾರ್ಯರು, — ಇಲ್ಲಿ "ಕಣ್ಣಿನಲ್ಲಿ ತೋರುವ ಈ ಪುರುಷನು" ಎಂಬ ಅಕ್ಷಿಪುರುಷನು ಪರಮಾತ್ಮನಲ್ಲ. ಆದ್ದರಿಂದ (ಆ ಶಬ್ದಗಳಿಂದ) ಪ್ರತ್ಯಗಾತ್ಮನೇ ಉಪದೇಶಿಸಲ್ಪಡುತ್ತಾನೆ. ಮತ್ತು ಇಲ್ಲಿ ಜೀವನು ಕಣ್ಣಿನಲ್ಲಿರುತ್ತಾನೆಂದು ಪ್ರಜಾಪತಿಯು ಉಪದೇಶಿಸುವದಲ್ಲ. ಪರಂತು ಕಣ್ಣಿನ ಪ್ರಸನ್ನತೆ ಮತ್ತು ವಿಕಾರಗಳಿಂದ ಜೀವನ ಇರೋಣ ಅಥವಾ ಇಲ್ಲದೇ ಇರೋಣವು ನಿಶ್ಚೈಸಲ್ಪಡುವದರಿಂದ, ಕಣ್ಣಿಗೆ ಜೀವನು ಇದ್ದಾನೋ, ಹೊರಟುಹೋದನೋ ಎಂಬದನ್ನು ಸೂಚಿಸುವ ಸ್ವಭಾವ ಇರುವಕಾರಣ (ಪುರುಷನು) ಕಣ್ಣಿನಲ್ಲಿ ತೋರುತ್ತಾನೆಂದು ಹೇಳೋಣಾದದ್ದು ಎಂದು ವಿವರಿಸುತ್ತಾರೆ.

यएषइति । दृश्यते दिव्यदृष्टया ॥ रा ॥ यएषो जाग्रदवस्था प्रेरकोऽक्षिणि अन्तःपुरुषः पूर्णषड्गुणो विश्वनामादृश्यते दिव्यदृष्टया स एषआत्मा सर्वलोकादि साधनज्ञान विषयत्वेन मयोक्तो ऽपहतपाप्मत्वादिगुणक आत्माइति होवाचेति पूर्वेणान्वयः ॥ वे ॥

ಮಾಧ್ವರು, ಕಣ್ಣಿನಲ್ಲಿ ತೋರುವ ಪುರುಷನು ದಿವ್ಯ ದೃಷ್ಟಿಗೆ ಕಂಡುಬರುವಂಥಾ, ಜಾಗ್ರದವಸ್ಥಾಪ್ರೇರಕನಾದ ವಿಶ್ವನೆಂದು ಹೆಸರುಳ್ಳ, ಪೂರ್ಣ ಷಡ್ಗುಣಯುಕ್ತನಾದ ಒಳಗಿರುವ ಪುರುಷನಾಗಿರುತ್ತಾನೆ. ಈತನೇ ಸಕಲ ಲೋಕ ಮೊದಲಾದವುಗಳನ್ನು ಸಂಪಾದಿಸುವ ಜ್ಞಾನಕ್ಕೆ ವಿಷಯನೆಂದು ನಾನು ಹೇಳಿದ ಅಪಹತ ಪಾಪ್ಮತ್ವಾದಿ ಗುಣಗಳುಳ್ಳ ಆತ್ಮನಾಗಿರುತ್ತಾನೆ ಎಂದು ಹೇಳಿದನೆಂದು ಅನ್ವಯವೆಂದು ಹೇಳುತ್ತಾರೆ.

(೪) ಆ ಪುರುಷಗೆ ಬದಲಾಗಿ ಶಿಷ್ಯರು ಭ್ರಮಿಸಿದಂಥಾ ಕಣ್ಣಿನಲ್ಲಿಯೂ ಜಲಾದಿಗಳಲ್ಲಿಯೂ ತೋರುವ ಮೇಲೆ ಹೇಳಿದ ಅವರ ಪ್ರತಿರೂಪದ ಕುರಿತು "ಅವನೇ ಎಲ್ಲಾ ಸ್ಥಳದಲ್ಲಿಯೂ ಕಂಡು ಬರುವವ"ನೆಂದು ಪ್ರಜಾಪತಿಯು ಕೊಟ್ಟ ಉತ್ತರದ ವಿಷಯವಾಗಿ:—

एषः अबादिस्थित प्रतिबिम्बरूपः कतम इति प्रश्नस्योत्तरं एष अक्षिगतएव सर्वेषु स्थलेषु परिख्यायतइति । अन्तेषु स्थलेषु ॥२॥ संमुग्धमेवोत्तरमाह एषइति । एषः जाग्रदवस्था प्रेरकतया प्रकृतोऽक्षिस्थः उएव उत्कृष्टोहरिरेवैषु पूर्वोक्तेष्वबादिष्वन्तेषु स्थानेषु प्रतिबिम्बादि प्रेरकतया परिख्यायते समन्तात् ज्ञायते दिव्यदृष्ट्येत्यभिप्रायेणोवाच प्रजापतिः ॥ वे ॥

ಮಾಧ್ವರು, ಜಾಗ್ರದವಸ್ಥಾ ಪ್ರೇರಕ ಸ್ವಭಾವ ಉಳ್ಳವನಾಗಿ ಪ್ರಕೃತನಾದ ಕಣ್ಣಿನಲ್ಲಿರುವ ಶ್ರೇಷ್ಠನಾದ ಹರಿಯೇ ಮೊದಲು ಹೇಳಿದ ಈ ಜಲಾದಿ ಸ್ಥಳಗಳಲ್ಲಿ ಪ್ರತಿಬಿಂಬ ಮೊದಲಾದವುಗಳನ್ನು ಹುಟ್ಟಿಸುವ ಸ್ವಭಾವದಿಂದ ದಿವ್ಯದೃಷ್ಟಿಗೆ ಸ್ಪಷ್ಟವಾಗಿ ತೋರುತ್ತಾನೆ ಎಂಬ ಅಭಿಪ್ರಾಯದಿಂದ ಕಣ್ಣಿನಲ್ಲಿರುವವನು (ಪುರುಷನು) ಸಕಲ ಸ್ಥಳಗಳಲ್ಲಿಯೂ ತೋರುತ್ತಾನೆಂದು ಪ್ರಜಾಪತಿಯು ವಂಚಕವಾದ ಉತ್ತರಕೊಟ್ಟನೆಂದು ಹೇಳುತ್ತಾರೆ.

शिष्यभ्रान्तिं अनिराकृत्य तद्भ्रान्ति दृढीकरणायेत्थमुत्तरं ददत आचार्यस्यायमभिप्रायः । सुरासुरेन्द्राविन्द्रविरोचनौ स्वात्मन्यध्यारोपितपांडित्यमहत्वातिशयौ । तथैव जगतिप्रसिद्धौ च तद्यदियूवां भ्रान्ताविति ब्रूयां तदाचिन्तावसादात्पुनः प्रश्नग्रहण धारणेषु भंगोत्साहौस्यातां । अतोयथाश्रुत प्रश्नमात्रस्योत्तरमिदानीं वक्तव्यमिति । अनेन चोत्तरेण पूर्वोत्पन्नप्रतिबिम्बात्मभ्रमो दृढीभवतीतिचेत् दृढीभूतोपि स भ्रमः उदशरावनिरीक्षणनियोजनोपायेनापनेष्यत इति च ॥ रं ॥

ರಾಮಾನುಜಾಚಾರ್ಯರು, ಶಿಷ್ಯರ (ಇಂದ್ರವಿರೋಚನರ) ತಪ್ಪುಗ್ರಹಿಕೆಯನ್ನು ನಿರಾಕರಿಸದೆ, ಅದನ್ನು ದೃಢಪಡಿಸುವ ಗೋಸ್ಕರ ಈ ರೀತಿ (ಮೇಲೆ ಹೇಳಿದಂತೆ) ಉತ್ತರಕೊಟ್ಟ ಆಚಾರ್ಯರ (ಪ್ರಜಾಪತಿಯ) ಅಭಿಪ್ರಾಯವು ಇದು (ಈಗ ಹೇಳುವದು) ಆಗಿರುತ್ತದೆ. ಇಂದ್ರ ವಿರೋಚನರು ದೇವದೈತ್ಯರ ಅರಸುಗಳು, (ಮತ್ತು) ತಾವು ಬುದ್ಧಿವಂತಿಕೆಯಲ್ಲಿಯೂ, ದೊಡ್ಡಸ್ತಿಕೆಯಲ್ಲಿಯೂ ಶ್ರೇಷ್ಠರೆಂಬ ಗ್ರಹಿಕೆ ಉಳ್ಳವರು; ಮತ್ತು ಆ ರೀತಿ ಲೋಕದಲ್ಲಿ ಪ್ರಸಿದ್ಧರಾದವರು. ಆದಕಾರಣ

"ನೀವು ಭ್ರಾಂತರು" ಎಂತ ಹೇಳಿದಪಕ್ಷದಲ್ಲಿ ಚಿಂತಾಗ್ರಸ್ತರಾಗಿ ಪುನಹ ಪ್ರಶ್ನೆಮಾಡುವದಕ್ಕೂ, ಗ್ರಹಿಸಿಕೊಳ್ಳುವದಕ್ಕೂ, ನೆನಪಿನಲ್ಲಿಟ್ಟುಕೊಳ್ಳುವದಕ್ಕೂ, ಉತ್ಸಾಹ ಹೀನರಾದಾರು. ಆದಕಾರಣ ಈಗ (ಅವರ) ಪ್ರಶ್ನೆಗೆ ತಕ್ಕವಾಗಿಯೇ ಉತ್ತರ ಕೊಡಬೇಕು. ಈ ಉತ್ತರದಿಂದ ಈ ಮೊದಲು ಅವರಿಗುಂಟಾಗಿರುವಂಥಾ ಪ್ರತಿಬಿಂಬವೇ ಆತ್ಮನೆಂಬ ಭ್ರಮೆಯು ದೃಢಪಡುತ್ತದಷ್ಟೆ? ಎಂದರೆ ದೃಢವಾದರೂ ಆ ಭ್ರಮೆಯು ನೀರಿನ ಪಾತ್ರದಲ್ಲಿ ನೋಡಿಕೊಳ್ಳಲಿಕ್ಕೆ ಅಪ್ಪಣೆ ಕೊಡುವ ಉಪಾಯ ಮಾಡಿದರೆ ಹೊರಟು ಹೋಗುತ್ತದೆ ಎಂದು ಆಗಿರುತ್ತದೆ ಎಂದು ಹೇಳುತ್ತಾರೆ.

ननुकथं युक्तं शिष्ययोर्विपरीतग्रहणमनुज्ञातुं प्रजापतेर्विगतदोषस्याचार्यस्यसतः? सत्यमेवं नानुज्ञातुं । तथाप्यात्मन्यध्यारोपितपांडित्यमहत्वबोद्धृत्वौहीन्द्रविरोचनौ । तथैवच प्रतिथौलोके । तौयदि प्रजापतिना मूढौ युवांविपरीतग्राहिणावित्युक्तौ स्यातां ततस्तयोश्चित्तदुःखंस्यात् । तज्जनिताच्च चित्तावसादात् पुनः प्रश्न, श्रवण, ग्रहणावधारणं प्रत्युत्साहविघातः स्यात् । अतोरक्षणीयौ शिष्याविति मन्यते प्रजापतिः, गृण्हीतां तावत् तदुदशरावदृष्टान्तेनापनेष्यामीति च। ननुनयुक्तं एषउएवेत्यनृतंवक्तुं नचानृतमुक्तं कथं? आत्मनोक्तोऽक्षि पुरुषो मनसि सन्निहिततरः शिष्यगृहीता च्छायात्मनः सर्वेषां चाभ्यन्तरः । × । तमेवावोचत् एषउएवेति । अतो नानृतमुक्तं प्रजापतिना ॥ शं ॥

ಶಂಕರಾಚಾರ್ಯರು, ಪ್ರಜಾಪತಿಯು ನಿರ್ದೋಷಿಯಾಗಿಯೂ, ಆಚಾರ್ಯನಾಗಿಯೂ ಇರುತ್ತಾ ಶಿಷ್ಯರ ವಿಪರೀತ ಗ್ರಹಿಕೆಗೆ ಸಮ್ಮತಿಸಿದ್ದು ಹೇಗೆ ನ್ಯಾಯವಾದದ್ದು? ಎಂದರೆ ಹಾಗೆ ಉತ್ತರ ಕೊಡಬಾರದಿತ್ತು ಎಂಬದು ಖರೆ. ಪರಂತು, ಇಂದ್ರವಿರೋಚನರು ತಾವು ಪಂಡಿತರು, ಮತ್ತು ದೊಡ್ಡವರು ಎಂಬ ಗ್ರಹಿಕೆ ಉಳ್ಳವರು. ಹಾಗೆ ಲೋಕದಲ್ಲಿ ಪ್ರಸಿದ್ಧರೂ ಆಗಿರುತ್ತಾರೆ. ಪ್ರಜಾಪತಿಯು ಅವರಿಗೆ "ನೀವು ಮೂಢರು, ವಿಪರೀತ ಗ್ರಹಿಸುವವರು" ಎಂದು ಹೇಳಿದ ಪಕ್ಷದಲ್ಲಿ ಅದರಿಂದ ಅವರ ಮನಸ್ಸು ನೊಂದೀತು; ಮತ್ತು ಅದರಿಂದುಂಟಾಗುವ ಚಿತ್ತಗ್ಲಾನಿಯಿಂದ, ತಿರಿಗಿ ಪ್ರಶ್ನೆ ಮಾಡೋಣ, ಕೇಳೋಣ, ತಿಳಕೊಳ್ಳೋಣ, ನೆನಪಿಟ್ಟುಕೊಳ್ಳೋಣ, ಇವುಗಳ ವಿಷಯದಲ್ಲಿ ಉತ್ಸಾಹ ವಿಘಾತವಾದೀತು. ಆದಕಾರಣ ಅವರನ್ನು ಸುದರಿಸಬೇಕೆಂತಲೂ, ಮತ್ತು (ಹಾಗೆ) ತಿಳಕೊಳ್ಳಲಿ, ನೀರಿನ ಪಾತ್ರೆಯ ದೃಷ್ಟಾಂತದಿಂದ ಅವರ ತಪ್ಪುಗ್ರಹಿಕೆಯನ್ನು ಹೊರಪಡಿಸುತ್ತೇನೆ ಎಂದು ಸಹ ಪ್ರಜಾ

ಪತಿಯು ಅಭಿಪ್ರಾಯಪಡುತ್ತಾನೆ. (ನೀರು ಮತ್ತು ಕನ್ನಡಿಯಲ್ಲಿ ತೋರುವವನ್ಯಾರು ಎಂದು ಕೇಳಿದ್ದಕ್ಕೆ) "ಇವನೇ" ಎಂದು ಸುಳ್ಳು ಹೇಳುವದು ಯುಕ್ತವೋ? ಅಲ್ಲವೇ. ಅಲ್ಲ. ಸುಳ್ಳು ಹೇಳಲೂ ಇಲ್ಲ; ಅದು ಹೇಗೆ? ಅವನು ಹೇಳಿದ ಅಕ್ಷಿಪುರುಷನು ಶಿಷ್ಯರು ಗ್ರಹಿಸಿಕೊಂಡ ಛಾಯಾತ್ಮನಕಿಂತಲೂ (ಅವನ) ಮನಸ್ಸಿನಲ್ಲಿ ಹೆಚ್ಚು ಸಮೀಪವಾಗಿರುವವನು, ಮತ್ತು ಸಕಲದರಲ್ಲಿಯೂ ಅಡಗಿರುವವನು; "ಇವನೇ" ಎಂದು ಹೇಳಿದ್ದು ಅವನನ್ನೇ ಆಗಿರುತ್ತದೆ. ಆದಕಾರಣ ಪ್ರಜಾಪತಿಯು ಸುಳ್ಳು ಹೇಳಲಿಲ್ಲ ಎಂದು ಹೇಳುತ್ತಾರೆ.

(೫) ಅನಂತರ ಮೇಲೆ ಸೂಚಿಸಿದಂತೆ, ಪ್ರಜಾಪತಿಯು ಕೊಟ್ಟ ಅಪ್ಪಣೆ ಪ್ರಕಾರ ನೀರಿನ ಪಾತ್ರದಲ್ಲಿ ನೋಡಿಕೊಂಡು, ಅದರಲ್ಲಿ ಕಂಡ ತನ್ನ ನೆರಳೇ ಆತ್ಮನೆಂಬದರ ಕುರಿತು ಸಂಶಯಪಟ್ಟ ಇಂದ್ರನು, ಆ ಆತ್ಮನು ಈ ಶರೀರಕ್ಕೆ ಕಣ್ಣಿಲ್ಲದಿದ್ದರೆ ಕುರುಡನಾಗಿರುವನು; ರೋಗಿಷ್ಠವಾಗಿದ್ದರೆ ರೋಗಿಷ್ಠನಾಗಿರುವನು; ಕುಂಟು ಆಗಿದ್ದರೆ ಕುಂಟನಾಗಿರುವನು. ಈ ಶರೀರವೇ ನಾಶವಾದರೆ, ಅವನೂ ಇಲ್ಲದೇ ಹೋಗುವನು. ಆದ್ದರಿಂದ ಅವನಿಂದ ಪ್ರಯೋಜನ ತೋರುವದಿಲ್ಲೆಂದು ಹೇಳಿದ್ದಕ್ಕೆ ಪ್ರಜಾಪತಿಯು "ಅವನು ಹಾಗೆಯೇ ಸರಿ" ಎಂದು ವಗ್ಯೆರೆ ಉತ್ತರಕೊಟ್ಟನೆಂದು ೧೦—೧೨ನೇ ಶ್ರುತಿಗಳು ಹೇಳುತ್ತವೆ. ಈ ಕುರಿತು—

सम्यक्त्वयावगतं स छायात्मेत्युवाच प्रजापतिः । योमयोक्त आत्माप्रकृतः एतमेवात्मानंतुते भूयः पूर्वव्याख्यातमपि अनुव्यास्यामि । × । इतिहोवाच ॥ शं ॥

ಶಂಕರಾಚಾರ್ಯರು "ನೀನು ಛಾಯಾತ್ಮನನ್ನು ಚೆನ್ನಾಗಿ ತಿಳಿದುಕೊಂಡಿ". ಪ್ರಕೃತನಾದ ನಾನು ಹೇಳಿದ ಆತ್ಮನು ಯಾರೋ ಇವನನ್ನೇ ಈ ಮೊದಲು ನಾನು ಹೇಳಿರುವದಾದರೂ ಪುನಹ ನಿನಗೆ ವಿವರಿಸಿ ಹೇಳುತ್ತೇನೆ ಎಂದು ಪ್ರಜಾಪತಿಯು ಹೇಳಿದನೆಂದು ಹೇಳುತ್ತಾರೆ.

हे मघवन्त्वदुक्तं सत्यमेव । उक्तामिममेवात्मानं पुनरपित्वदुक्तदोषशून्यतया प्रतिपादयिष्यामि । + + । इत्यर्थः ॥ रं ॥

ರಾಮಾನುಜಾಚಾರ್ಯರು, ಇಂದ್ರ! ನೀನು ಹೇಳಿದ್ದು ಸತ್ಯವೇ. (ನಾನು) ಹೇಳಿದ ಈ ಆತ್ಮನನ್ನೇ ಇನ್ನೊಮ್ಮೆ ನೀನು ಹೇಳಿದ ದೋಷದಿಂದ ವಿರಹಿತಪಡಿಸಿ ಹೇಳುತ್ತೇನೆ (ಎಂದು ಪ್ರಜಾಪತಿಯು ಹೇಳಿದನು) ಎಂದು ಅರ್ಥ ಎಂಬದಾಗಿ ಹೇಳುತ್ತಾರೆ.

हेमघवन् यशस्विन् इन्द्र! एषप्रातिबिम्बः एवमेवत्वदुक्तप्रकारेण दोषवानेव । अतो नायं मदभिप्रेतः किन्तुयस्त्वयावबुद्धः स एव । एवं जाग्रदवस्था प्रेरकत्वादिनोक्तं आत्मानमेव तु विशेषेण स्वप्नाद्यवस्था प्रेरकत्वादिरूपेणानुत्वद्योग्यतानुसारेण ॥ वे ॥

ಮಾಧ್ವರು, ಹೇ ಯಶಸ್ವಿಯಾದ ಇಂದ್ರನೇ! ಈ ಪ್ರತಿಬಿಂಬನು ನೀನು ಹೇಳಿದಂತೆ ದೋಷ ಉಳ್ಳವನೇ. ಆದಕಾರಣ ನಾನು ಅಭಿಪ್ರಾಯಪಟ್ಟವನು ಇವನಲ್ಲ. ಪರಂತು ನೀನು ಯಾರೆಂದು *ತಿಳಿದಿದ್ದೀಯೋ ಅವನೇ ಆಗಿರುತ್ತಾನೆ. ಈ ರೀತಿ ಜಾಗ್ರತ್ ಮೊದಲಾದ ಅವಸ್ಥೆಗಳನ್ನು ಪ್ರೇರಿಸುವ ಸ್ವಭಾವ ಉಳ್ಳವನಾಗಿ ಹೇಳಲ್ಪಟ್ಟ ಆತ್ಮನನ್ನೇ ವಿಶೇಷವಾಗಿ ಸ್ವಪ್ನಾದ್ಯವಸ್ಥಾ ಪ್ರೇರಕಸ್ವಭಾವವುಳ್ಳ ರೂಪದಲ್ಲಿ ನಿನ್ನ ಯೋಗ್ಯತೆಗೆ ಮೀರದೆ ವಿವರಿಸೋಣಾಗುತ್ತದೆ ಎಂದು ಪ್ರಜಾಪತಿಯು ಹೇಳಿದನೆಂದು ಅಭಿಪ್ರಾಯಪಡುತ್ತಾರೆ.

## ೨ನೇ ಸ್ವಪ್ನಾವಸ್ಥೆ.

(೬) ಈ ಅವಸ್ಥೆಯಲ್ಲಿ ಶರೀರದೊಳಗೆ ಸ್ವತಂತ್ರನಾಗಿ ವಿಹಾರ ಮಾಡುವವನು ಯಾರೋ ಅವನು ಆತ್ಮನೆಂದು ೧೩ನೇ ಶ್ರುತಿಯಲ್ಲಿ ಹೇಳೋಣಾಗಿ ಇದೆ. ಇದಕ್ಕೆ ಇಂದ್ರನು ಅವನು ಪೆಟ್ಟುತಿಂದಂತೆ, ಭಯಪಟ್ಟು ಓಡಿದಂತೆ, ದುಃಖ ಅನುಭವಿಸಿದಂತೆ ಕಾಣುವದಲ್ಲದೆ, (ಕೆಲವು ಸಲ) ಅಳುವಂತೆ ಕೂಡಾ ತೋರುತ್ತಾನೆ. ಅಂಥವನಿಂದ ಪ್ರಯೋಜನವಿಲ್ಲೆಂದು ಹೇಳಿದ್ದಕ್ಕೆ ಪ್ರಜಾಪತಿಯು "ಅವನು ಹಾಗೆಯೇ, ಅವನನ್ನೇ ಪುನಃ ನಿನಗೆ ವಿವರಿಸಿ ಹೇಳುತ್ತೇನೆ" ಎಂದು ಪ್ರತ್ಯುತ್ತರ ಕೊಟ್ಟನೆಂದು ೧೩–೧೪ನೇ ಶ್ರುತಿಗಳು ಹೇಳುತ್ತವೆ. ಈ ಕುರಿತು—

स्त्र्यादिभिः पूज्यमानः चराति । अनेकविधान् स्वप्नभोगाननुभवतीत्यर्थः ॥ तवाभिप्रायेणेति वाक्यशेषः [त्वदभिप्रायेणा प्रियवेत्तेव स्वप्नद्रष्टा नतुमदभिप्रायेणेति विशिनष्टि । आ.] आत्मनोऽमृता भयगुणवत्व

ಶಂಕರಾಚಾರ್ಯರು, ಸ್ವಪ್ನದಲ್ಲಿ ಮಹೀಯಮಾನನೆಂದರೆ ಸ್ತ್ರೀ ಮೊದಲಾದವರಿಂದ ಪೂಜ್ಯಮಾನ (ಎಂದರೆ) ಅನೇಕ ವಿಧವಾದ ಸ್ವಪ್ನಸುಖಗಳನ್ನು ಅನುಭವಿಸುವವನೆಂತಲೂ, ಸ್ವಪ್ನಕಾಣುವವನು

* ಶ್ರುತಿಯಲ್ಲಿ ಹಾಗೆ ತೋರದಿದ್ದರೂ, ಇಂದ್ರನು ಆತ್ಮಜ್ಞಾನಿಯಾಗಿದ್ದನೆಂತಲೇ ಈ ಮತದವರ ಸಾಧನೆಯಾಗಿರುತ್ತದೆ. ಆದ್ದರಿಂದ ಈ ರೀತಿ ಇವರು ಅರ್ಥ ಹೇಳುವದು.

स्याभि प्रेतत्वात् ॥ शं ॥

ನಿನ್ನ (ಇಂದ್ರನ) ಅಭಿಪ್ರಾಯ ಪ್ರಕಾರ ದುಃಖ ಅನುಭವಿಸಿದಂತೆ ಕಂಡುಬರುತ್ತಾನಲ್ಲದೆ ನನ್ನ (ಪ್ರಜಾಪತಿಯ) ಅಭಿಪ್ರಾಯ ಪ್ರಕಾರ ಅಲ್ಲ; ಯಾಕಂದರೆ ನಾನು ಅಭಿಪ್ರಾಯಪಟ್ಟ ಆತ್ಮನು ಅಮೃತ (ಸಾವಿಲ್ಲದ) ಮತ್ತು ಅಭಯ (ಭಯವಿಲ್ಲದ) ಗುಣಗಳುಳ್ಳಂಥವನಾಗಿರುತ್ತಾನೆ ಎಂದು (ಪ್ರಜಾಪತಿಯ ಉತ್ತರದ ತಾತ್ಪರ್ಯವೆಂದು) ಹೇಳುತ್ತಾರೆ.

यः स्वप्नेस्त्र्यादिभिः महीयमानः पूज्यमानः चरति एषस्वप्नद्रष्टा । निरतिशयसुखत्वादिलक्षणामृतत्वादियुक्त आत्मेत्युक्तवानित्यर्थः । एवमेवैषः उक्तोऽर्थः ॥ रं ॥

ರಾಮಾನುಜಾಚಾರ್ಯರು, ಮಹೀಯಮಾನ ಎಂದರೆ ಯಾರು ಸ್ತ್ರೀ ಮೊದಲಾದವರಿಂದ ಪೂಜಿಸಲ್ಪಡುವವನಾಗಿ ವಿಹಾರ ಮಾಡುವ ಸ್ವಪ್ನದ್ರಷ್ಟ(ಕಾಣುವವ)ನೋ ಇವನು ನಿರತಿಶಯವಾದ ಸುಖ ಮೊದಲಾದ ಲಕ್ಷಣಗಳುಳ್ಳಂಥಾ, ಅಮೃತತ್ವ ಮೊದಲಾದ ಸ್ವಭಾವವುಳ್ಳ ಆತ್ಮಾ ಎಂದು ಅರ್ಥ. ಇವನು ಹಾಗೆಯೇ ಎಂಬ ವಾಕ್ಯಕ್ಕೆ ಈ ಮೊದಲು ಹೇಳಿದಂತೆ ಅರ್ಥ ಎಂದು ಸಹ ಹೇಳುತ್ತಾರೆ.

यएष भगवान् स्वप्नेकंठदेशे स्वप्नावस्थायां स्वप्नपदार्थप्रदर्शकः सन्महीयमानः पूज्यमानश्चरति एष आत्मेत्युवाच ॥ रा ॥ स्वप्नेजीवस्य स्वप्नावस्थायां महीयमानः इन्द्रियदेवैः प्राणादिभिः पूज्यमान एव चरति चारयत्यवगमयति स्वसृष्टान् गजतुरगादीन् जीवेन स्वयञ्चावगच्छति एषः एवं विध माहात्म्यः आत्मामदुक्तः । अतोनस्वप्ने प्रतीयमानवासनामय देहावच्छिन्नस्या पहतपाप्मत्वादि गुणकात्मत्वं ब्रह्माभिप्रेतं किन्तु स्वाप्नानेक पदार्थनिर्मातुः प्राणादि पूज्यस्य तैजसश्चैवेति निश्चित्येममर्थं ब्रह्मणे निवेद्यतन्मुखेनाप्यापात प्रतीतार्थो न मदभिप्रेतइति दृढीकर्तुं सुप्त्यवस्था प्रेरकत्वरूपमाहात्म्या

ಮಾಧ್ವರು, ನಾನು (ಪ್ರಜಾಪತಿಯು) ಹೇಳಿದ ಆತ್ಮನು ಜೀವನ ಸ್ವಪ್ನಾವಸ್ಥೆಯಲ್ಲಿ ಕಂಠದಲ್ಲಿ (ಗಂಟಲಿನೊಳಗೆ) ಇದ್ದುಕೊಂಡು, ತನ್ನಿಂದ (ಆ ಕಾಲದಲ್ಲಿ) ಸೃಷ್ಟಿಸಲ್ಪಡುವ ಆನೆ ಕುದುರೆ ಇತ್ಯಾದಿ ಸ್ವಪ್ನಪದಾರ್ಥಗಳನ್ನು ಜೀವಗೆ ತೋರಿಸುತ್ತಾ ಆತ ಮತ್ತು ತಾನು ಸಹ ಅವುಗಳನ್ನು ತಿಳಕೊಳ್ಳುತ್ತಾ, ಇಂದ್ರಿಯಾಭಿಮಾನಿಗಳಾದ ಮುಖ್ಯಪ್ರಾಣ ಮೊದಲಾದ ದೇವತೆಗಳಿಂದ ಪೂಜಿಸಲ್ಪಡುವವನಾಗಿ ಸಂಚರಿಸುತ್ತಾ, ತಿಳಿಸಿಕೊಡುತ್ತಾ ಇರುವ ಭಗವಂತನಾಗಿರುತ್ತಾನೆ. ಆದಕಾರಣ ಸ್ವಪ್ನದಲ್ಲಿ ಕಂಡುಬರುಸಂಥಾ ವಾಸನಾಮಯ ಶರೀರದಲ್ಲಡಗಿರುವವನು ಅಪಹತಪಾ

न्तरं श्रोतुं चेन्द्रः पुनरागतइत्याह ॥ शं ॥ ಪ್ರಮತ್ವಾದಿ ಗುಣಗಳುಳ್ಳ ಆತ್ಮನೆಂದು ಬ್ರಹ್ಮನ ಅಭಿಪ್ರಾಯವಲ್ಲ. ಪರಂತು, ಸ್ವಪ್ನಕ್ಕೆ ಸಂಮ್ಮಧಪಟ್ಟ ಅನೇಕ ಪದಾರ್ಥಗಳನ್ನು ಕಲ್ಪನೆ ಮಾಡುವಂಥಾ ಪ್ರಾಣಾದಿ ದೇವತೆಗಳಿಂದ ಪೂಜ್ಯನಾದ ತೈಜಸನೇ (ಆತ್ಮನು) ಎಂದು ನಿಶ್ಚಯಿಸಿಕೊಂಡು ಈ ಅರ್ಥವನ್ನು ಬ್ರಹ್ಮನಿಗೆ (ಪ್ರಜಾಪತಿಗೆ) ತಿಳಿಸಿ ಅವನ ಮುಖದಿಂದಲೂ (ಅವನ ಹೇಳಿಕೆಗೆ) ಮೇಲಿಂದ ಮೇಲೆ ತೋರುವ ಅರ್ಥವು ಅವನು ಅಭಿಪ್ರಾಯಪಟ್ಟದ್ದಲ್ಲೆಂದು ದೃಢಪಡಿಸಿಕೊಳ್ಳುವಗೋಸ್ಕರ ಸುಷುಪ್ತಿ ಅವಸ್ಥೆ ಹುಟ್ಟಿಸುವ ರೂಪವಾದ (ಅವನ) ಇನ್ನೊಂದು ಮಹಾತ್ಮೆಯನ್ನು ಶ್ರವಣ ಮಾಡುವಗೋಸ್ಕರ ಇಂದ್ರನು ಪುನಹ ಅವನ ಬಳಿಗೆ ಹೋದನೆಂದು (ಶ್ರುತಿಯು) ಹೇಳುತ್ತದೆಂದು ವಿವರಿಸುತ್ತಾರೆ.

## ೩ನೇ ಸುಷುಪ್ತಿ ಅವಸ್ಥೆ.

(೭) ಈ ಅವಸ್ಥೆಯನ್ನು VIನೇ ಸಾರದಲ್ಲಿ ವಿವರಿಸೋಣಾಗಿ ಇದೆ. ಇದರಲ್ಲಿ ಯಾರು ಸ್ವಪ್ನವನ್ನು ಕಾಣುವದಿಲ್ಲವೋ, ಅವನು ಆತ್ಮನೆಂದು ಪ್ರಜಾಪತಿಯು ಹೇಳಿದ್ದಕ್ಕೆ ಇಂದ್ರನು—

ಹಾಗಾದರೆ ಆ ಆತ್ಮನು ತನ್ನನ್ನೇ ಆಗಲೀ, ಈ ಪ್ರಾಣಿಗಳನ್ನಾಗಲೀ, ತಿಳಿಯುವದಿಲ್ಲ. ತೀರಾ ಇಲ್ಲದೆ ಹೋದ ಹಾಗಾಗುತ್ತಾನಾದಕಾರಣ ಅಂಥವನಿಂದ ತನಗೆ ಪ್ರಯೋಜನವಿಲ್ಲೆಂದು ಹೇಳಿದ್ದಕ್ಕೆ ಪ್ರಜಾಪತಿಯು—

"ಅವನು ಹಾಗೆಯೇ ಸರಿ. ಅವನನ್ನೇ ಪುನಹ ನಿನಗೆ ವಿವರಿಸಿ ಹೇಳುತ್ತೇನೆ, ಬೇರೆ ಯಾರನ್ನೂ ಅಲ್ಲ" ಎಂದು ಉತ್ತರ ಕೊಟ್ಟನೆಂಬದಾಗಿ ೧೬–೧೭ನೇ ಶ್ರುತಿಗಳು ಹೇಳುತ್ತವೆ. ಈ ಕುರಿತು—

पूर्ववदेवमेवेत्युक्त्वाह । योमयोक्तास्त्रिभिः पर्यायैः तमेवैतं नोएवान्यत्रै तस्मादात्मनः अन्यं कंचन । किंतर्हि एतमेव व्याख्यास्यामि । + । इति ॥ शं ॥ ಶಂಕರಾಚಾರ್ಯರು, (ಪ್ರಜಾಪತಿಯು) ಮೊದಲಿನಂತೆ "ಅವನು ಹಾಗೆಯೇ" ಎಂದು ಹೇಳಿ ಅವನನ್ನೇ ಎಂದರೆ "ನಾನು ಮೂರಾವರ್ತಿ ಯಾರನ್ನು ಹೇಳಿದೆನೋ ಆ ಆತ್ಮನ ಹೊರತು ಇನ್ಯಾರನ್ನೂ ಅಲ್ಲ" ಹಾಗಾದರೆ ಯಾರನ್ನು? ಎಂದರೆ ಅವನನ್ನೇ ವಿವರಿಸಿ ಹೇಳುತ್ತೇನೆ ಎಂದು ಉತ್ತರಕೊಟ್ಟನೆಂದು ಅರ್ಥವೆಂದು ಹೇಳುತ್ತಾರೆ.

एतस्मात्पूर्वोक्तादन्यत्र इतरस्मो व्याख्यास्यामि किन्तुएतमेव पूर्वोक्तमेव निर्दोषतया व्याख्यास्यामीत्यर्थः ॥ ३ ॥

ರಂಗರಾಮಾನುಜಾಚಾರ್ಯರು, ಮೊದಲು ಹೇಳಿದವನನ್ನಲ್ಲದೆ, ಇನ್ನ್ಯಾರನ್ನೂ ನಾನು ಹೇಳುವದಿಲ್ಲ. ಪರಂತು ಮೊದಲು ಹೇಳಿದವನನ್ನೇ ದೋಷದಿಂದ ವಿರಹಿತಪಡಿಸಿ ಹೇಳುತ್ತೇನೆ ಎಂದು ಪ್ರಜಾಪತಿಯ ಉತ್ತರದ ಅರ್ಥವೆಂದು ಹೇಳುತ್ತಾರೆ.

ಮಾಧ್ವರು ೧೬ನೇ ಶ್ರುತಿಯಲ್ಲಿರುವ "ನಾಹ" ಎಂಬದಕ್ಕೆ ಒಂದು "ಮ"ಕಾರವನ್ನು ಸೇರಿಸಿಕೊಂಡು ಮೇಲೆ ಹೇಳಿದ ಇಂದ್ರನ ಆಕ್ಷೇಪಕ್ಕೂ, ಆ ಆಕ್ಷೇಪಕ್ಕೆ ಪ್ರಜಾಪತಿ ಕೊಟ್ಟ ಉತ್ತರಕ್ಕೂ ಕೆಳಗೆ ವಿವರಿಸಿದಂತೆ ಅರ್ಥಗಳನ್ನು ಹೇಳುತ್ತಾರೆ.

## ೧ನೇ ಇಂದ್ರನ ಆಕ್ಷೇಪದ ಕುರಿತು.

नाहमिति । अहं खलुसुप्तः अयमहमस्मीति नजानाति नजानामि [व्यत्ययात्] एवं ब्रह्मणोक्तप्रकारेणाधिकरणभूतं आत्मानं नजानामि । इमानि भूतानि च नोएव जानन्यतो नास्त्येवाधारभूत आत्मेति । तर्हि अस्तुजीवः परमात्मनिसुप्तावेकीभूतइति? यद्यपीतो एकीभूतो भवति तर्हिशंसुखं विनैवस्यात् सुप्तौ सुखानुभवहीन एवस्यादिति यावत् । न च वाच्यं सुखानुभयहीनः स्यादिति । एतावन्तं कालं सुखमहं अस्वाप्समिति सुप्त्युत्थितस्य परामर्शो न स्यात् । अत्रब्रह्मोक्तेर्थे भोग्यमुपादेयं ॥ २ ॥

संप्रतिसुप्त्यवस्थायां अहं खलुतावत् आत्मानं परमात्मानं "अयं परमात्मा एवं सुप्तस्य ममाश्रयः अहंत्वेतदाश्रितः" इतिमत्तोऽन्यं नजानाति नजानामि । ननुसुषुप्तौ जीवस्य स्वाश्रयपरमात्मज्ञानाभावेपि परमा

[ಇಲ್ಲಿ ಅವನು ತಿಳಿಯುವದಿಲ್ಲ ಎಂತ ಇರುವ ವಾಕ್ಯಕ್ಕೆ ಪುರುಷವ್ಯತ್ಯಾಸ ಮಾಡಿಕೊಂಡು ನಾನು ತಿಳಿಯುವದಿಲ್ಲ ಎಂತ ಅರ್ಥ ಮಾಡಬೇಕು.] ಈಗ ಸುಪ್ತಿ ಅವಸ್ಥೆಯಲ್ಲಿ ಬ್ರಹ್ಮನು ಹೇಳಿದಂತೆ (ಆದಪಕ್ಷದಲ್ಲಿ) "ಇವನು ಪರಮಾತ್ಮನು ಈ ರೀತಿ ನಿದ್ರೆ ಮಾಡಿರುವ ನನಗೆ ಆಶ್ರಯಭೂತನಾದಂಥವನು, ನಾನು ಇವನನ್ನು ಆಶ್ರಯಿಸಿಕೊಂಡಿರುವವನು" ಎಂದು ಈ ರೀತಿ ನನ್ನ ಹೊರತು ಎರಡನೆಯವನಾದ (ನನಗೆ) ಆಶ್ರಯಭೂತನಾದಂಥಾ ಪರಮಾತ್ಮನನ್ನು ನಾನು ತಿಳಿಯುವದೇ ಇಲ್ಲ. ಈ ಪ್ರಾಣಿಗಳು ಕೂಡಾ (ಅವನನ್ನು) ತಿಳಿಯುವದಿಲ್ಲ.

(ಹಾಗೆ ಏಕೆ ತಿಳಕೊಳ್ಳಬೇಕು?) ಸುಷುಪ್ತಿಯಲ್ಲಿ ಜೀವನಿಗೆ, ತನಗೆ ಆಶ್ರಯಭೂತನಾದ ಪರಮಾತ್ಮನ ಜ್ಞಾನವಿಲ್ಲದಿ

त्मास्वात्मानं तदाश्रयत्वेन प्रदर्शयतीति किंनस्यादित्यतआह अयमहमस्मीति । अयं जीवाश्रयोऽहमस्मीत्ययमन्यो भगवानपि आत्मानं स्वात्मानं नजानाति नज्ञापयतीति । ननुएकेन जीवेन स्वाश्रयस्य भगवतः सुप्तावदृष्टत्वेपि नतदभावः इतरेषां तज्ज्ञानसंभवादित्याशंकायामाह नोएवेमानीति । इमानिभूतान्यपि सुप्त्यवस्थायां स्वाश्रयं नोएव जानन्ति । अतोनुपलंभात् स नास्तीतिभावः । ननुतदाजीवः ईश्वरे ईश्वरोजीवे प्रविष्टइति नाश्रयाश्रयिभावोपलब्धिरित्यतआह विनाशमेवेति । यदिजीवः ईश्वरेऽपीतः प्रविष्टः तर्हिशं विनैवभवति भवेत् स्वरूपसुखानुसंधातानस्यात् । नहिपरगृहं गतस्य सुखभोगोऽस्ति । तथाच तस्य सुखमहमस्वाप्समित्युत्तरकालीनपरामर्शायोगः । यदिवा ईश्वरो जीवेप्रविष्टः तर्हिशं विनैव भवेत् तथा चतस्य सदासुखभोक्तृत्वप्रतिपादक श्रुत्यादिविरोधइत्यर्थः । तथाचजीवेश्वरौ नान्योन्यस्मिन्नप्ययवन्तौ भेदेन च नोपलभ्येते । सुखमहमस्वाप्समित्युत्तरका लीनपरापर्शबलेन च जीवएवोपलभ्यते । अतोजीवातिरिक्तेश्वरोऽनुपलंभान्नास्तीतिभयं भयहेतुं पूर्वपक्षं ददर्श ॥ वे ॥

ದ್ದರೂ ಪರಮಾತ್ಮನು ತಾನಾಗಿಯೇ ತಾನು ಅವನಿಗೆ ಆಶ್ರಯಸ್ವಭಾವ ಉಳ್ಳವನೆಂದು ತೋರಿಸಿಕೊಳ್ಳುತ್ತಾನೆಂದು ಏಕೆ ತಿಳಿಯಬಾರದು? ಎಂದರೆ— ಹಾಗೆ ತಿಳಕೊಳ್ಳಕೂಡದು; ಯಾಕೆಂದರೆ ಜೀವನಿಗೆ ಆಶ್ರಯ (ಆಸ್ಪದ)ನಾದವನು ನಾನು, ಅವನು ಪ್ರತ್ಯೇಕ, (ಮನುಷ್ಯನು) ಎಂದು ಪರಮಾತ್ಮ ಕೂಡಾ ತನ್ನನ್ನು ಜ್ಞಾಪಕ ಮಾಡಿಕೊಡುವದಿಲ್ಲ. (ಪುನಹ ಆಕ್ಷೇಪಿಸುತ್ತಾನೆ). ಯಾವಾದರೂ ಒಬ್ಬ ಜೀವನಿಗೆ ಸುಪ್ತಿಯಲ್ಲಿ ಆಶ್ರಯಭೂತನಾದ ಭಗವಂತನು ಕಾಣದಿದ್ದರೂ, ಇತರರಿಗೆ ಕಾಣುವದಿಲ್ಲ ಎಂತ ಇಲ್ಲ. (ಅವರಿಗೆ) ಅವನ ಜ್ಞಾನ ಇರಬಹುದು? ಎಂದರೆ— ಈ ಪ್ರಾಣಿಗಳು ಕೂಡಾ ಸುಪ್ತಿಅವಸ್ಥೆಯಲ್ಲಿ ತಮಗೆ ಆಶ್ರಯಭೂತವಾಗಿರುವದನ್ನು ತಿಳಿಯುವದೇ ಇಲ್ಲ. ಆದಕಾರಣ ಆಧಾರಭೂತನಾದ ಆತ್ಮನು ತಿಳಿದು ಬಾರದೆ ಇರುವ ಪ್ರಯುಕ್ತ, ಇಲ್ಲದೇ ಹೋಗುತ್ತಾನೆ. (ಪುನಹ ತರ್ಕಿಸಿಕೊಳ್ಳುತ್ತಾನೆ. ಹಾಗಾದರೆ) ಆ ಕಾಲದಲ್ಲಿ ಈಶ್ವರನಲ್ಲಿ ಜೀವ (ಅಥವಾ) ಜೀವನಲ್ಲಿ ಈಶ್ವರ ಪ್ರವೇಶಿಸುವದರಿಂದ (ಅಂರೊಳಗಿನ) ಆಶ್ರಯ—ಆಶ್ರಯಿಭಾವ ತಿಗೊತ್ತಾಗುವದಿಲ್ಲ, ಎಂದರೆ ಸುಪ್ತಿ ಅವಸ್ಥೆಯಲ್ಲಿ ಜೀವನು ಪರಮಾತ್ಮನಲ್ಲಿ ಏಕಿಭೂತನಾಗುತ್ತಾನೆ (ಐಕ್ಯ ಪಡಿಯುತ್ತಾನೆ) ಎಂದು ತಿಳಿಯುವ. ಆ ಪಕ್ಷದಲ್ಲಿ? ಆ ಪಕ್ಷದಲ್ಲಿ ಸುಖವೇ ಇಲ್ಲದೆ ಹೋದೀತು; ಎಂದರೆ ಸುಪ್ತಿಯಲ್ಲಿ ಸುಖಾನುಭವಹೀನನಾ

ಹೋದಾನು ಎಂದು ಇಷ್ಟೇ ತಾತ್ಪರ್ಯ. ಪರಂತು ಸುಖಹೀನನಾಗುತ್ತಾನೆಂದು ಹೇಳಕೂಡದು. (ಅದು ಹೇಗೆ? ಹೇಗಂದರೆ):—

(ಈಗ ಜೀವನು ಈಶ್ವರನಲ್ಲಿ ಪ್ರವೇಶಿಸುತ್ತಾನೆಂದು ನೀವು ಅಪ್ಪಣೆ ಕೊಡುವದೋ? ಅಥವಾ ಈಶ್ವರನು ಜೀವನಲ್ಲಿ ಪ್ರವೇಶಿಸುತ್ತಾನೆಂದು ಅಪ್ಪಣೆ ಕೊಡುವದೋ?)

(೧) ಜೀವನು ಈಶ್ವರನಲ್ಲಿ ಪ್ರವೇಶಿಸುವದಾದ ಪಕ್ಷದಲ್ಲಿ, ಅವನು ಸ್ವರೂಪ ಸುಖಾನುಭವವನ್ನು ಪಡಿಯಲಿಕ್ಕಿಲ್ಲ. ಯಾಕಂದರೆ, ಪರಕೀಯನ ಮನೆಗೆ ಹೋದವಗೆ ಸುಖಭೋಗವಿಲ್ಲ. ಆದಕಾರಣ ಇಷ್ಟು ಹೊತ್ತು "ನಾನು ಸುಖವಾಗಿ ನಿದ್ರೆ ಮಾಡಿದೆ" ಎಂದು ಸುಪ್ತಿಯಿಂದ ಎದ್ದ ತರುವಾಯ ಆಗುವ ಪರಾಮರ್ಶವು ಅವನಿಗೆ ಆಗಲಾರದು. ಹಾಗಲ್ಲದೆ:—

(೨) ಈಶ್ವರನು ಜೀವನಲ್ಲಿ ಪ್ರವೇಶಿಸುವದಾದ ಪಕ್ಷದಲ್ಲಿ, (ಆಗಲೂ) ಸುಖವಿರದು. ಹೀಗೆ ಅವನು ಯಾವಾಗಲೂ ಸುಖಭೋಗವನ್ನು ಪಡುವ ಸ್ವಭಾವ ಉಳ್ಳವನೆಂದು ಪ್ರತಿಪಾದನೆ ಮಾಡುವ ಶ್ರುತಿ ಮೊದಲಾದ ಪ್ರಮಾಣಗಳಿಗೆ ವಿರೋಧ ಸಂಭವಿಸೀತು ಎಂದು ಅರ್ಥ.

ಈ ರೀತಿ ಜೀವೇಶ್ವರರು ಒಬ್ಬನು ಇನ್ನೊಬ್ಬನಲ್ಲಿ ಐಕ್ಯವಾಗುವದಿಲ್ಲ, ಮತ್ತು ಪ್ರತ್ಯಪ್ರತ್ಯೇಕವಾಗಿ ತಿಳದುಬಾರದೆಯೂ ಹೋಗುತ್ತಾರೆ. ಆದರೆ "ನಾನು ಸುಖವಾಗಿ ನಿದ್ರೆಮಾಡಿದೆ" ಎಂದು ತರುವಾಯ ಉಂಟಾಗುವ ಪರಾಮರ್ಶಬಲದಿಂದ ಜೀವ ಒಬ್ಬನೇ ತಿಳದುಬರುವದಾಗುತ್ತದೆ. ಆದಕಾರಣ ಜೀವನ ಹೊರತಾಗಿ ಇರುವ ಈಶ್ವರನು ತಿಳದುಬಾರದೇ ಹೋಗುವ ಪ್ರಯುಕ್ತ, ಅವನು ಇಲ್ಲ ಎಂಬ ಆಕ್ಷೇಪವನ್ನು (ಇಂದ್ರನು) ಕಂಡುಕೊಂಡನು ಎಂತಲೂ;

೨ನೇ ಪ್ರಜಾಪತಿಯು ಕೊಟ್ಟಿದಾಗಿ ಮೇಲೆ ಪ್ರಸ್ತಾಪಿಸಿದ ಉತ್ತರದ ಕುರಿತು—

एषः परमात्मा एवमेव सुप्त्यादौ जीव विलक्षणतया प्रत्यक्षेण नोपलभ्यतएव। किन्तुजीववैलक्षण्यं जीवव्यावृत्तधर्मैरनुमेयमेव । अतस्ते एतं जीवव्यावृत्तधर्मवन्तं व्याख्यास्यामि ॥ वे ॥

ಈ ಪರಮಾತ್ಮ ಹಾಗೆಯೇ ಎಂದರೆ ಸುಪ್ತ್ಯಾದಿ ಅವಸ್ಥೆಗಳಲ್ಲಿ ಜೀವ ಭಿನ್ನಸ್ವಭಾವ ಉಳ್ಳವನಾಗಿ ಪ್ರತ್ಯಕ್ಷ ಕಂಡುಬರುವದಿಲ್ಲ. ಪರಂತು ಜೀವ ವ್ಯತಿರಿಕ್ತವಾದ ಸ್ವಭಾವವುಳ್ಳ (ಅ)ವನನ್ನು (ಅ) ಜೀವ

एतस्मादात्मनोऽन्यत्र अन्यत् नोएत्र नैवास्त्युपदेष्टव्यं एतंत्वेवते भूयः पुनरनुव्या ख्यास्यामीति योज्यं ॥ रा ॥

ಭಿನ್ನವಾದ ಸ್ವಭಾವಗಳಿಂದ ಊಹಿಸಬೇಕಾಗಿರುತ್ತದೆ. ಆದಕಾರಣ ನಿನಗೆ ಜೀವ ವ್ಯತಿರಿಕ್ತವಾದ ಸ್ವಭಾವ ಉಳ್ಳ ಇವ (ಈ ಆತ್ಮ)ನನ್ನು ವಿವರಿಸಿ ಹೇಳುತ್ತೇನೆ. ಈ ಆತ್ಮನಲ್ಲದೆ ಇನ್ನಾವುದೂ ತಿಳಿಸಿಕೊಡ ತಕ್ಕದ್ದಿರುವದಿಲ್ಲ. ಇವನನ್ನೇ ಪುನಹ ವಿವರಿಸಿ ಹೇಳುತ್ತೇನೆ ಎಂದು ಅರ್ಥವಾಗಿರು ತ್ತದೆ ಎಂದು ಹೇಳುತಾರೆ.

(೮) ಇನ್ನು ಮುಂದಿನ ವಿಚಾರದಲ್ಲಿ ನಾವು ಪ್ರವೇಶಿಸುವ ಮೊದಲು ಈ ವರೇಗೆ ನಾವು ಮಾಡಿದ ವಿಚಾರದಲ್ಲಿ ಫಲಿತವಾದ ಅರ್ಥವೇನೆಂಬದನ್ನು ಸ್ವಲ್ಪ ನಿತ್ತು ಯೋಚಿಸಿ ನೋಡಬೇಕು. ಪ್ರಜಾಪತಿಯು ಈ ವರೇಗೆ ಹೇಳಿದ ಮತ್ತು ಇನ್ನು ಮುಂದೆಯೂ ವಿವರಿಸುವ ಅಪಹತ ಪಾಪ್ಮತ್ವ ಅವ್ಯತತ್ವಾದಿ ಗುಣಗಳುಳ್ಳ ಆತ್ಮನು,

(೧)ನೇ. ನಮ್ಮ ಕಣ್ಣಿನಲ್ಲಿ, ನೀರು ಮತ್ತು ಕನ್ನಡಿ ಮೊದಲಾದವುಗಳಲ್ಲಿ ತೋರುವ ನಮ್ಮ ಪ್ರತಿರೂಪ (ದೇಹ)ವಲ್ಲ.

(೨)ನೇ. ಅವನು ಸ್ವಪ್ನದಲ್ಲಿ ಸಂಭವಿಸುವ ಸುಖದುಃಖಗಳಿಂದ ವಿಕಾರವಾಗುವವನಲ್ಲ.

(೩)ನೇ. ಶೂನ್ಯನೂ ಅಲ್ಲ.

ಎಂದು ಎಷ್ಟುಮಾತ್ರ ನಮಗೆ ತಿಳದುಬಂದ ಹಾಗಾಗಿದೆ. ಇನ್ನು ನಮಗೆ ತಿಳಿಯಬೇಕಾಗಿರುವ ಮುಖ್ಯ ಸಂಗತಿಗಳು (೧)ನೇ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೇಲೆ ವಿವರಿಸಿದ ಅವಸ್ಥಾತ್ರಯದಿಂದ ಆತ್ಮನನ್ನು ವಿರಹಿತಪಡಿಸಿ ತಿಳಿಯುವದು ಹೇಗೆ? ಮತ್ತು (೨)ನೇ ಆ ರೂಪದಲ್ಲಿ ಅವನು ಹೇಗೆ ಇರುತ್ತಾನೆ ಎಂಬವುಗಳಾಗಿರುತ್ತವೆ. ಈ ಪಾಠದ ೧೮—೧೯—೨೦ನೇ ಶ್ರುತಿಗಳಲ್ಲಿ ಈ ಸಂಗತಿಗಳನ್ನು ವಿವರಿಸೋಣಾಗುತ್ತದೆ.

मघवन् मर्त्यंवैमरणधर्मीदं शरीरं ।+। यदिदं शरीरंवै यत्पश्यसि तदेतन्मर्त्यं विनाशि तच्चात्तं मृत्युनाग्रस्तं सन्तमेव । कदाचिदेव म्रियतइति मर्त्यमित्युक्ते न तथासन्त्रासो भवति यथाग्रस्तमेव सदाव्याप्तमेव मृत्युनेत्युक्ते इति वैराग्यार्थं विशेषइत्युच्यते आत्तं

ಶಂಕರಾಚಾರ್ಯರು ಪ್ರತ್ಯಕ್ಷ ತೋರುವ ಈ ಶರೀರವು ನಾಶವಾಗುವಂಥಾದ್ದು. ಅದು ಮೃತ್ಯುವಿನಿಂದ ವ್ಯಾಪ್ತವಾಗಿಯೇ ಉಂಟು. [ಸದಾಕಾಲ ಮೃತ್ಯುವಿನಿಂದ ವ್ಯಾಪ್ತವಾಗಿ ಉಂಟೆಂದು ಹೇಳಿದರೆ ಭಯ ಉಂಟಾಗುವ ಹಾಗೆ

मृत्युनेति । कथं नामदेहाभिमानतो विरक्तः सन्निवर्ततइति शरीरमिति अत्रसहेन्द्रियमनोभिरुच्यते । तच्छरीरं अस्य संप्रसादस्य त्रिस्थानतयागम्यमानस्यामृतस्य मरणादि देहेन्द्रियमनोधर्मवर्जितस्येत्येतत् । अमृतस्येत्यनेनैवा शरीरत्वे सिद्धे पुनरशरीरस्येति वचनं वाय्वादिवत्सावयवत्वमूर्तिमत्वे माभूतामिति । आत्मनो भोगाधिष्ठानं । आत्मनो वासत ईक्षितुस्तेजोबन्नादि क्रमेणोत्पन्नमधिष्ठानं [जनयितुस्तस्योपलब्धेराधिकरणमिति यावत् । आ] जीवरूपेण प्रविश्य सदेवाधितिष्ठत्यस्मिन्निति वाधिष्ठानं । यस्येदमीदृशं नित्यमेव मृत्युग्रस्तं धर्माधर्मजनितत्वात्प्रियाप्रियवदधिष्ठानं । तदधिष्ठितः [पुरुषः आ] तद्वान् सशरीरो भवति । अशरीरस्वभावस्यात्मनः तदेवाहं शरीरं शरीरमेव चाहमित्यविवेकादात्मभावः सशरीरत्वं । अत एव सशरीरः सन्नात्तः ग्रस्तः प्रियाप्रियाभ्यां प्रसिद्धमेतत् । तस्य च नवैसशरीरस्यसतः प्रियाप्रिययोः बाह्यविषय संयोगवियोगयोर्निमित्तयोर्बाह्यविषयसंयोगवियोगौ ममेतिमन्यमानस्यापहतिः विनाशः उच्छेदः सन्ततिरूपयोर्नास्तीति । तं पुनर्देहाभिमानादशरीरस्वरूपविज्ञानेन निवर्तिताविवेकज्ञानं अशरीरं सन्तं प्रियाप्रियेनस्पृशतः । + । धर्माधर्मकार्ये हिताहिते यतोऽशरीरतातुस्वरूप

ಯಾವಾಗಲಾದರೂ ಒಂದು ಕಾಲದಲ್ಲಿ ಸಾಯುವದರಿಂದ ಸಾವು ಉಳ್ಳದೆಂದು (ಮಾತ್ರ) ಹೇಳಿದರೆ ಭಯ ಉಂಟಾಗುವದಿಲ್ಲವಾದ ಕಾರಣ, ವೈರಾಗ್ಯ ಉಂಟುಮಾಡುವಗೋಸ್ಕರ ಮೃತ್ಯುವಿನಿಂದ ವ್ಯಾಪಿಸಿಕೊಂಡುಂಟೆಂದು ಹೆಚ್ಚಾಗಿ ಹೇಳೋಣಾಗುತ್ತದೆ. ಪ್ರಸಿದ್ಧವಾಗಿರುವ ದೇಹಾಭಿಮಾನದಿಂದ ವಿರಕ್ತ ಹೇಗೆ ಆದಾನು? ಎಂದು ಆಕ್ಷೇಪಿಸಿದರೆ] ಈ ಶರೀರವು [ಇಲ್ಲಿ ಶರೀರವೆಂದರೆ ಇಂದ್ರಿಯ ಮನಸ್ಸುಗಳನ್ನು ಕೂಡಿಕೊಂಡಿರುವದಕ್ಕೆ ಹೇಳುವದು]. (ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ) ೩ ಸ್ಥಾನಗಳುಳ್ಳವನಾಗಿ ತಿಳಿಯಬಂದ, ಮರಣ ಮೊದಲಾದ ದೇಹೇಂದ್ರಿಯ ಮನಸ್ಸುಗಳ ಸ್ವಭಾವರಹಿತನಾದ ಸಾವಿಲ್ಲದಂಥಾ ಸಂಪ್ರಸಾದನ ದ ಅತ್ಮನು ಭೋಗಪಡುವ ಸ್ಥಳವಾಗಿರುತ್ತದೆ. [ಸಾವಿಲ್ಲದವನ ಎಂದದರಿಂದಲೇ ಶರೀರ ರಾಹಿತ್ಯವು ಸಿದ್ಧವಾಗುತ್ತಿರುವಾಗ್ಯೆ ಪುನಹ ಶರೀರವಿಲ್ಲದವನ ಎಂದು ಹೇಳಿದ್ದು ವಾಯು ಮೊದಲಾದವುಗಳಂತೆಯೇ ಅವಯವ ಯುಕ್ತತ್ವ ಮತ್ತು ಶರೀರ ಯುಕ್ತತ್ವ ಸಹ ಇರಬಾರದೆಂಬದಕ್ಕಾಗಿ ಆಗಿರುತ್ತದೆ.] ಅಥವಾ (1ನೇ ಪಾಠದಲ್ಲಿ ವಿವರಿಸಿದಂತೆ) ತೇಜೋಬನ್ನಾದಿ ಕ್ರಮದಿಂದ ಉಂಟಾಗಿರುವಂಥಾ, ಸೃಷ್ಟಿ

मिति तत्रधर्माधर्मयोरसंभवात्तत्कार्यभावो दूरतएवेति अतोनप्रियाप्रियेस्पृशतः ॥

तत्राशरीरस्य सम्प्रसादस्याविद्ययाशरीरेणाविशेषतां सशरीरतामेव संप्राप्तस्य शरीरात्समुत्थायस्वेनरूपेण यथाभिनिष्पत्तिः तथावक्तव्येति दृष्टान्तउच्यते । अशरीरो वायुः । अविद्यमानं शिरःपाण्यादिमच्छरीरमस्येत्यशरीरः । किञ्चअभ्रं विद्युत्स्तनयित्नुरित्येतानि चाशरीराणि । तत्‌तत्रएवं सति वर्षादिप्रयोजनावसानेयथा । × । एतानियथोक्तान्याकाशसमानरूपतामापन्नानि स्वेन वाय्वादिरूपेणागृह्यमाणानि आकाशाख्यतां गतानि । यथासम्प्रसादोऽविद्यावस्थायां शरीरात्मभावमेवापन्नः । तानिच तथाभूतानि अमुष्मात् द्युलोकसम्बन्धिन आकाशदेशात्समुत्तिष्ठन्ति वर्षणादि प्रयोजनाभिनिर्वृत्तये । कथं? शिशिरापाये सावित्रं परञ्ज्योतिः प्रकृष्टं ग्रैष्मकमुपसम्पद्यसावित्रमभितापं प्राप्येत्यर्थः । आदित्याभितापेन पृथग्भावमापादिताः सन्तः स्वेनस्वेन रूपेण पुरोवातादिना वायुरूपेण स्तिमितभावं हित्वा। अभ्रमपि पर्वतहस्त्यादिरूपेण विद्युदपिस्वेन ज्योतिर्लतादि चपलरूपेण । स्तनयित्नुरपि स्वेन गर्जिताशनिरूपेणेत्येवं प्रावृडागमे स्वेनस्वेन रूपेणाभि निष्पद्यन्ते । तथाऽयं दृष्टान्तः वाय्वादीनां आकाशादिसाम्यगमनवदविद्यया संसारावस्थायां शरीरसाम्यमाप

ಕರ್ತನಾದ ಆತ್ಮನು ಕಂಡುಬರುವ, ಸ್ಥಳವಾಗಿರುತ್ತದೆ. ಅಥವಾ ಸತ್ (ಬ್ರಹ್ಮವು) ಜೀವರೂಪದಿಂದ ಪ್ರವೇಶಿಸಿ ವಾಸಿಸಿಕೊಂಡಿರುವಕಾರಣ (ಅದರ) ವಾಸಸ್ಥಳವಾಗಿರುತ್ತದೆ. ಈ ರೀತಿ ಸದಾ ಮೃತ್ಯುವಿನಿಂದ ವ್ಯಾಪಿಸಿ ಇದ್ದುಕೊಂಡು ಧರ್ಮಾಧರ್ಮಗಳಿಂದುಂಟಾದವ್ದಾದಪ್ರಯುಕ್ತ, ಇದು (ಈ ಶರೀರವು) ಯಾರ ವಾಸಸ್ಥಳವಾಗಿ ಉಂಟೋ (ಆ) ಪುರುಷನು ಆದರಲ್ಲಿ ವಾಸಿಸಿಕೊಂಡಿರುವ ಪ್ರಯುಕ್ತ (ಅವನು) ಅದರಿಂದ ಯುಕ್ತನಾಗುತ್ತಾನೆ. ಶರೀರ ರಹಿತವಾದ ಸ್ವಭಾವವುಳ್ಳ ಆತ್ಮನಿಗೆ ನಾನೇ ಶರೀರ ಶರೀರವೇ ನಾನು ಎಂಬ ಅವಿವೇಕ (ಜ್ಞಾನ)ದಿಂದ ಉಂಟಾಗುವ ಆತ್ಮಭಾವವೇ ಶರೀರಯುಕ್ತತ್ವವಾಗಿರುತ್ತದೆ. ಆದಕಾರಣ, ಶರೀರಯುಕ್ತನಾಗಿದ್ದುಕೊಂಡು ಇಷ್ಟಾನಿಷ್ಟಗಳಿಗೆ ಗುರಿಯಾಗಿರುತ್ತಾನೆ. ಇದು ಪ್ರಸಿದ್ಧವಾದದ್ದು; ಮತ್ತು ಶರೀರಯುಕ್ತನಾಗಿರುವಾಗ ಹೊರಗಿನ ವಿಷಯ ಸಂಯೋಗ ವಿಯೋಗಗಳು ತನಗೆ ಸಂಭವಿಸುವವುಗಳೆಂದು ತಿಳಿಯುವವಗೆ ಅವುಗಳಿಂದುಂಟಾಗುವ ಸುಖ ದುಃಖಗಳಿಗೆ ನಾಶ, ಅವುಗಳ ಪ್ರವಾಹಕ್ಕೆ ವಿಚ್ಛಿತ್ತಿ (ವಿರಾಮ) ಸಹಉಂಟಾಗುವದಿಲ್ಲ. ಪರಂತು ದೇಹಾಭಿಮಾನವನ್ನು ಬಿಟ್ಟು (ತನ್ನ) ಅಶರೀರ ಸ್ವರೂಪವನ್ನು ತಿಳಿಯುವದರ ಮೂಲಕವಾಗಿ ಅವಿವೇಕ

ष्मोऽहममुष्यपुत्रो जातोजीर्णो मरिष्यइत्येवं प्रकारं प्रजापतिनैवमघवान् यथोक्तेन क्रमे ण नासित्वं देहेन्द्रियादिधर्मातत्वमसीति प्र बोधितः सन् सएष संप्रसादः जीवोऽस्माच्छ रीरादाकाशादिव वाय्वादयः समुत्थाय देहा दिविलक्षणमात्मनोरूपं अवगम्य देहात्मभा वनां हित्वैत्येतत्स्वेन रूपेण सदात्मनैवाभि निष्पद्यतइति व्याख्यातं पुरस्तात् ॥

(VII १०) ॥ शं ॥

ಜ್ಞಾನದಿಂದ ಬಿಡುಗಡೆ ಹೊಂದಿ ಅಶರೀರಿ ಯಾದವಗೆ ಸುಖದುಃಖಗಳು ತಗಲುವ ದಿಲ್ಲ. ಯಾಕಂದರೆ ಇಷ್ಟಾನಿಷ್ಟಗಳು ಧರ್ಮಾಧರ್ಮಗಳ ಕಾರ್ಯಗಳು. ಸ್ವ ರೂಪವು ಶರೀರರಹಿತವಾದದ್ದು. ಅದ ರಲ್ಲಿ ಧರ್ಮಾಧರ್ಮಗಳಿಗೆ ಇಂಬಿಲ್ಲ. ಆದಕಾರಣ (ಅವುಗಳ) ಕಾರ್ಯಭಾವವು (ಅದರಿಂದ) ದೂರವಾಗಿರುವ ಪ್ರಯುಕ್ತ ಸುಖದುಃಖಗಳು ತಗಲುವದಿಲ್ಲ.

ಈ ರೀತಿ ಅಜ್ಞಾನದಿಂದ ಶರೀರಯುಕ್ತತ್ವವನ್ನು ಪ್ರಾಪಿಸಿದ ಶರೀರವಿಲ್ಲದ ಸಂಪ್ರ ಸಾದನು (ಆ) ಶರೀರದಿಂದ ಹೊರಟು ಹೇಗೆ ಸ್ವರೂಪನಿಷ್ಪತ್ತಿಯನ್ನು ಪಡಿಯುತ್ತಾನೆ ಎಂಬದನ್ನು ತೋರಿಸುವದಕ್ಕಾಗಿ ದೃಷ್ಟಾಂತವು ಕೊಡೋಣಾಗುತ್ತದೆ. ವಾಯುವಿಗೆ ಶರೀರವಿಲ್ಲ, ಎಂದರೆ ತಲೆ ಕಾಲು ಮೊದಲಾದ ಅವಯವಗಳುಳ್ಳ ಶರೀರವಿಲ್ಲ. ಅದ ಲ್ಲದೆ ಮೇಘ, ವಿದ್ಯುತ್, (ಮಿಂಚು) ಗುಡುಗು ಇವುಗಳಿಗೂ ಶರೀರಗಳಿಲ್ಲ. ಹೀಗಿ ರಲಾಗಿ ಮಳೆ ಮೊದಲಾದ ಕೆಲಸ ಜರಗುತ್ತಲೇ ಅವುಗಳೆಲ್ಲ, ಅಜ್ಞಾನಾವಸ್ಥೆಯಲ್ಲಿ ಶರೀರವೇ ತಾನು ಎಂಬ ಭಾವವನ್ನು ಪಡದಂಥಾ ಸಂಪ್ರಸಾದನಂತೆ, ವಾಯು ಮೊದ ಲಾದ ಆಯಾ ರೂಪ ಉಳ್ಳದ್ದಾಗಿ ಎಣಿಸಲ್ಪಟ್ಟಂಥಾ ಆಕಾಶ ಸದೃಶರೂಪವನ್ನು ಪ್ರಾ ಪಿಸಿ ಆ ಹೆಸರು ಪಡದಂಥಾ ವಾಯು ಮೊದಲಾದವುಗಳು ಮಳೆ ಸುರಿಸುವದಕ್ಕೆ ವಗೈರೆ ದ್ಯುಲೋಕಸಂಬಂಧಿಯಾದ ಆಕಾಶದಿಂದ ಏಳುತ್ತವೆ. ಹೇಗಂದರೆ ಛಳಿಗಾ ಲವು ದಾಟುತ್ತಿರಲಾಗಿ ಉಷ್ಣಕಾಲದ ಸೂರ್ಯನ ಪರಂಜ್ಯೋತಿ ಎಂದರೆ ತೀಕ್ಷ್ಣವಾದ ಶಿಖೆಯಿಂದ ಬೆಂದು ಬೇರೆ ಬೇರೆ ಸ್ವಭಾವದಿಂದ ನಿಷ್ಪತ್ತಿಯನ್ನು ಪಡದು, ಮೂಡಣ ಘಾಳಿ ಮೊದಲಾದ ತಮ್ಮ ತಮ್ಮ ಸ್ವರೂಪಗಳನ್ನು ಪಡಿಯುತ್ತವೆ. ವಾಯುವು ಆ ರೂಪದಲ್ಲಿ ಸ್ತಿಮಿತ ಭಾವ, (ಶಾಂತತ್ವ)ವನ್ನು ಬಿಡುತ್ತದೆ. ಮೇಘವು ಪರ್ವತ ಆನೆ ಇತ್ಯಾದಿ ರೂಪವನ್ನು ಪ್ರಾಪಿಸುತ್ತದೆ. ವಿದ್ಯುತ್ (ಮಿಂಚು) ಅದರ ಜ್ಯೋತಿರ್ಲ ತಾದಿ (ಪ್ರಕಾಶದ ಬಳ್ಳಿ ಮೊದಲಾದ) ಚಪಲರೂಪವನ್ನು ಪಡಿಯುತ್ತದೆ. ಮತ್ತು ಗುಡುಗು ಅದರ ಗರ್ಜನೆ ಸ್ವಭಾವವುಳ್ಳ ಸಿಡಿಲಿನ ರೂಪವನ್ನು ಹೊಂದುತ್ತದೆ. ಈರೀತಿ

(ವಾಯು ಮೊದಲಾದವುಗಳು) ಮಳೆಗಾಲ ಬರುತ್ತಿರಲಾಗಿ ತಮ್ಮ ತಮ್ಮ ಸ್ವರೂಪ ನಿಷ್ಪತ್ತಿಯನ್ನು ಹೇಗೆ ಹೊಂದುತ್ತವೋ, ಎಂದರೆ ಹೇಗೆ ವಾಯು ಮೊದಲಾದವುಗಳು ಆಕಾಶಾದಿಗಳ ಹಾಗೆ ಆಗುವ ದೃಷ್ಟಾಂತಕ್ಕನುಸಾರವಾಗಿ ಅಜ್ಞಾನದಿಂದ ಸಂಸಾರ ದಶೆಯಲ್ಲಿ ನಾನು ಇಂಥವನ ಮಗ, ಹುಟ್ಟಿದೆ, ವೃದ್ಧನಾಗಿದ್ದೇನೆ, ಸಾಯುವೆನು ಎಂದು ಈ ರೀತಿ ಶರೀರಸಾಮ್ಯವನ್ನು ಪಡದಂಥ ಸಂಪ್ರಸಾದನೆಂದರೆ ಜೀವನು, ಪ್ರಜಾಪತಿಯಿಂದ ಇಂದ್ರನು ಎಚ್ಚರಿಸಲ್ಪಟ್ಟಂತೆ "ನೀನು ದೇಹೇಂದ್ರಿಯಾದಿಗಳ ಧರ್ಮ (ಮರಣ) ಉಳ್ಳವನಲ್ಲ, ನೀನು ಅದೇ"ಯಾಗಿರುವಿ ಎಂದು ಎಚ್ಚರಿಸಲ್ಪಟ್ಟು, ವಾಯು ಮೊದಲಾದವುಗಳು ಆಕಾಶದಿಂದ ಹೊರಡುವಂತೆ ಈ ಶರೀರದಿಂದ ಹೊರಟು, ದೇಹಾದಿಗಳ ಹಾಗಿಲ್ಲದ ತನ್ನ ರೂಪವನ್ನು ತಿಳಕೊಂಡು ಎಂದರೆ ದೇಹವೇ ತಾನು ಎಂಬ ಭಾವನೆಯನ್ನು ಬಿಟ್ಟು ತನ್ನ ಸ್ವಂತ ಸದ್ರೂಪವನ್ನು ಪಡೆಯುತ್ತಾನೆಂದು ಈ ಮೊದಲು ವ್ಯಾಖ್ಯಾನ ಮಾಡೋಣಾಗಿದೆ. (VII—೧೦) ಎಂದು ವಿವರಿಸುತ್ತಾರೆ.

इदं शरीरमेव हि मर्त्यं मरणधर्मि ।×। मृत्युनाआत्तं तद्व्याप्तञ्च सतत विनाशशीलमिति यावत् । इदञ्च शरीरे हेयत्वानुसन्धानार्थमुक्तं । एवं भूतं तदिदं शरीरं कर्मकृतशरीरराहित्यलक्षणामृतत्व स्वरूपस्यात्मनोभोगाधिष्ठानं । कर्मवशेन जीवेन भोगार्थे परिगृहीतमित्यर्थः । ततश्चा शरीरत्वमेव स्वरूपं सैवामृतत्वलक्षणामुक्तिः सशरीरत्वमेवतदभावः इत्युक्तं भवति । + । कर्मारब्ध शरीरयोगिनः तदनुगुणसुखदुःखयोगस्यावश्यं भावित्वात् कर्मणारब्धदेहसंबन्धाभावस्य पुरुषार्थतया मुक्तिरूपत्वमुपपद्यतइतिभावः। व्यतिरेकं दर्शयति अशरीरं वावसन्तं न प्रियाप्रियेस्पृशतः । वावशब्दः प्रसिद्धौ अवधारणेवा ॥

ರಂಗರಾಮಾನುಜಾಚಾರ್ಯರು, ಈ ಶರೀರವೇ ಪ್ರಸಿದ್ಧವಾಗಿ ಸಾವು ಉಳ್ಳದ್ದು, ಮತ್ತು ಮೃತ್ಯುವಿನಿಂದ ವ್ಯಾಪಿಸಿಕೊಂಡುಂಟು. [ಯಾವಾಗಲೂ ನಾಶವಾಗುವ ಸ್ವಭಾವಉಳ್ಳದ್ದೆಂದು ಇಷ್ಟೇ ತಾತ್ಪರ್ಯ. ಹೀಗೆ ಹೇಳಿದ್ದು ಶರೀರದವಿಷಯದಲ್ಲಿ ಅರುಚಿ ಹುಟ್ಟಿಸುವಬಗ್ಗೆ ಆಗಿರುತ್ತದೆ.] ಇಂಥಾ ಶರೀರವು ಕರ್ಮದಿಂದುಂಟಾದ ಶರೀರ ರಹಿತ ಮತ್ತು, ಸಾವಿಲ್ಲದ ಸ್ವಭಾವರೂಪನಾದ ಆತ್ಮನು ಭೋಗಪಡುವ ಸ್ಥಳವಾಗಿರುತ್ತದೆ; ಎಂದರೆ ಕರ್ಮದ ದೆಸೆಯಿಂದ ಜೀವನು ಭೋಗಪಡುವದಕ್ಕಾಗಿ ಸ್ವೀಕರಿಸಿದ್ದಾಗಿರುತ್ತದೆ. [ಇದರಿಂದ ಶರೀರರಹಿತವಾಗಿರೋಣವೇ (ಜೀವನ) ಸ್ವರೂಪ. ಅದೇ ಮರಣಾ

अशरीरोवायुः । शिरः पाण्यादि लक्षण
शरीरशून्यो वायुरित्यर्थः । अभ्रादीनिचाशरी
राणीत्यर्थः । अभ्रं भूत्वा मेघो भवतीत्यादि
वदभ्रस्तनयित्नोरवस्थाभेदेन भेदोद्रष्टव्यः ।
अशरीरागाञ्च प्रियाप्रियानन्वयोदृष्टइति
भावः । अत्रव्यासार्यैः वाय्वादीनां आका
शात्समुत्थानं नामस्वकार्यकरणायोर्ध्वदेशे
अभिवृद्धिः । परशब्दो वाय्वादीनां कारणा
वस्थावाची । ज्योतिःशब्दस्तु कारणानां
कार्योत्पादनद्वारेण तदभिव्यञ्जकतया प्रयु
क्तः । वाय्वादीनिच कारणद्रव्यमुपगम्य
कार्यावस्थां हित्वा कारणसदृशेन रूपेण
विशिष्टानि भवन्ति । वायुर्हि आवह प्रव
हादि रूपेण सप्तविधत्वं हित्वा वायुत्वमात्रे
णावतिष्ठते । विद्युत्तु विद्युत्वं हित्वातेजस्त्वे
न । अभ्रस्तनयित्नूचाभ्रादित्वादि प्रहाणेन
स्वकारणभूतरूपेण । एवं जीवोपि मार्गविशे
षेण देशविशेषविशिष्टं परंब्रह्म प्राप्यसंसार
वस्था प्रहाणेन परमात्मतुल्यरूपेणाविर्भव
तीत्येवमर्थे सत्येवदृष्टान्तदार्ष्टान्तिक वाक्य
सामंजस्यं भवतीति वर्णितं । × ।

यत्परैरुक्तं शरीरात्समुत्थाय शरीरे आ
त्माभिमानं हित्वा स्वेन रूपेण परमात्मरूपेण
साक्षात्कृत्यपरंज्योतिर्भवति । परमात्मा भ
वतीत्यर्थः । न तु शरीरादुत्क्रमणं देशान्तर
गमनं वात्रविवक्षितमिति तदसत् । अप

ಹಿತ್ಯಲಕ್ಷಣವುಳ್ಳ ಮುಕ್ತಿ, ಶರೀರರಾ
ಕ್ತನಾಗಿರುವದೇ ಅದರ (ಮುಕ್ತಿಯು)
ಅಭಾವವೆಂದು ಹೇಳಲ್ಪಡುತ್ತದೆ. ಕರ್ಮ
ದಿಂದ ಪ್ರಾಪ್ತವಾದ ದೇಹಸಮ್ಬಂಧ ಉಳ್ಳ
ವಗೆ ಅದಕ್ಕನುಗುಣವಾದ ಸುಖದುಃಖ
ಸಮ್ಬಂಧವು ಅವಶ್ಯವಾಗಿ ಇರಬೇಕಾದ
ಪ್ರಯುಕ್ತ, (ಹಾಗೆ) ಕರ್ಮದಿಂದುಂ
ಟಾದ ದೇಹಸಮ್ಬಂಧವಿಲ್ಲದವಗೆ ಪುರು
ಷಾರ್ಥರೂಪವಾಗಿ ಮುಕ್ತಿರೂಪ ಉಂ
ಟಾಗೋಣವು ಯುಕ್ತವಾಗಿರುತ್ತದೆಂದು
ಭಾವವಾಗಿರುತ್ತದೆ]. ಹಾಗಲ್ಲದೆ ಶರೀ
ರರಹಿತನಾಗಿದ್ದರೆ ಸುಖದುಃಖಗಳು ತಗ
ಲುವದಿಲ್ಲ. ಇದು ಪ್ರಸಿದ್ಧ ಅಥವಾ
ಖಂಡಿತವಾಗಿರುತ್ತದೆ.

ವಾಯುವಿಗೆ ಶರೀರವಿಲ್ಲ ಎಂದರೆ ವಾ
ಯುವು ತಲೆ ಕಾಲು ಮೊದಲಾದ ಲಕ್ಷಣ
ಉಳ್ಳ ಶರೀರಶೂನ್ಯವಾದದ್ದೆಂದು ಅರ್ಥ.
ಅಭ್ರ ಮೊದಲಾದವುಗಳೂ ಶರೀರ ಇಲ್ಲ
ದವುಗಳು. ಅಭ್ರವಾಗಿ ಮೇಘವಾಗು
ತ್ತದೆ ಎಂದು ಹೇಳಿದಂತೆ, ಅಭ್ರ ಮತ್ತು
ಗುಡುಗುಗಳಿಗೆ ಅವಸ್ಥಾಭೇದದಿಂದ ಭೇ
ದವಿರುತ್ತದೆ. ಶರೀರವಿಲ್ಲದವುಗಳಿಗೆ ಸು
ಖದುಃಖಗಳ ಸಮ್ಬಂಧ ರಾಹಿತ್ಯವು ಕಂಡು
ಬಂದದೆ ಎಂದು ಭಾವವಾಗಿರುತ್ತದೆ. ಈ
ಸಂದರ್ಭದಲ್ಲಿ ವ್ಯಾಸಾಚಾರ್ಯರು ವಾ
ಯು ಮೊದಲಾದವು ಆಕಾಶದಿಂದ ಎದ್ದು

दार्थत्वात् । न हि शरीरात्समुत्थायेत्यस्य शरीरे आत्माभिमानं हित्वेत्यर्थो भवति । स्वरूपसाक्षात्कारलक्षण स्वरूपाभिनिष्पत्यनन्तरभाविनः परंज्योतिर्भावस्य च परंज्योतिरुपसम्पद्येति पूर्वकालतयानिर्देशोनयुक्तः । न हि सर्पात्समुत्थाय रज्जुमुपसम्पद्येति च प्रयोगो दृष्टचरः । वाय्वभ्रादि दृष्टान्तवैरूप्यञ्च स्पष्टमेव । किञ्चानिर्विशेष ब्रह्मभावोऽत्र परंज्योतिरुपसम्पद्येत्यनेन विवक्षितः चेत् सुषुप्तिदशोद्घाटितस्य विशेषविज्ञानाभावप्रयुक्तनष्टप्रायत्वदोषस्यापरिहृततया तद्दोषपरिहाराय मुक्त्यवस्थोपदेशासांगत्यंस्यादित्यास्तांतावत् ॥ रं ॥

ಬರುವದೆಂದರೆ, ತಮ್ಮ ತಮ್ಮ ಕೆಲಸವನ್ನು ಮಾಡಲಿಕ್ಕೆ ಎತ್ತರಸ್ಥಳದಲ್ಲಿ ಅಭಿವೃದ್ಧಿ ಆಗೋಣ. ಪರಶಬ್ದವು ವಾಯು ಮೊದಲಾದವುಗಳ ಕಾರಣಾವಸ್ಥೆಯನ್ನು ಹೇಳುತ್ತದೆ. ಜ್ಯೋತಿಃಶಬ್ದವು ಕಾರಣಗಳಿಗೆ ಕಾರ್ಯೋತ್ಪತ್ತಿ ಮೂಲಕವಾಗಿ ಅವುಗಳನ್ನು ಪ್ರಕಟಪಡಿಸುವ ಭಾವದಲ್ಲಿ ಪ್ರಯೋಗಿಸಲ್ಪಟ್ಟಿದೆ. ವಾಯು ಮೊದಲಾದವುಗಳು ಕಾರಣದ್ರವ್ಯವನ್ನು ಪಡದು, ಕಾರ್ಯಾವಸ್ಥೆಯನ್ನು ಬಿಟ್ಟು, ಕಾರಣದ ಹಾಗಿನ ರೂಪದಿಂದ ಉತ್ತಮ ಪದಾರ್ಥಗಳಾಗುತ್ತವೆ. ವಾಯುವು ಆವಹ ಪ್ರವಹ ಮೊದಲಾದ ೭ ವಿಧದ ರೂಪಗಳನ್ನು ಬಿಟ್ಟು, ವಾಯುಭಾವ ಮಾತ್ರದಲ್ಲಿಯೇ ಉಳಕೊಳ್ಳುತ್ತದೆ. ವಿದ್ಯುತ್ (ಮಿಂಚು) ತನ್ನ ಭಾವವನ್ನು ಬಿಟ್ಟು ತೇಜೋಭಾವದಲ್ಲಿ, ಅಭ್ರ ಮತ್ತು ಗುಡುಗು ಇವೆರಡು ಆ ಭಾವಗಳನ್ನು ಬಿಟ್ಟು ತಮಗೆ ಮೂಲಕವಾದ ರೂಪದಲ್ಲಿ (ಹೇಗೆ ಉಳಕೊಳ್ಳುತ್ತವೋ) ಹಾಗೆ, ಜೀವ ಕೂಡಾ ಮಾರ್ಗವಿಶೇಷದಿಂದ ಸ್ಥಳವಿಶೇಷದಲ್ಲಿರುವ ಪರಬ್ರಹ್ಮವನ್ನು ಪಡದು, ಸಂಸಾರಿ ಅವಸ್ಥೆಯನ್ನು ಬಿಟ್ಟು, ಪರಮಾತ್ಮನ ರೂಪದ ಹಾಗಿನ ರೂಪದಿಂದ ವ್ಯಕ್ತವಾಗುತ್ತಾನೆಂದು ಅರ್ಥಮಾಡಿದ ಪಕ್ಷದಲ್ಲಿ ದೃಷ್ಟಾಂತ ದಾರ್ಷ್ಟಾಂತಿಕ ವಾಕ್ಯಗಳಿಗೆ ಸರಿಬಿದ್ದೇ ಬೀಳುತ್ತದೆ ಎಂದು ವರ್ಣಿಸಿರುತ್ತಾರೆ ಎಂದು ಹೇಳುವದಲ್ಲದೆ,

ಶರೀರವಿಷಯದಲ್ಲಿ "ನಾನೇ ಅದು" ಎಂಬ ಅಭಿಮಾನವನ್ನು ಬಿಟ್ಟು, ಸಾಕ್ಷಾತ್ ಪರಮಾತ್ಮರೂಪವನ್ನೇ ಪಡದು ಪರಂಜ್ಯೋತಿಯಾಗುತ್ತಾನೆ ಎಂದರೆ ಪರಮಾತ್ಮನೇ ಆಗುತ್ತಾನೆ ಎಂದು ಅರ್ಥ, ಶರೀರದಿಂದ ಹೊರಟು ಹೋಗುವದೆಂದರೆ ದೇಶಾಂತರಕ್ಕೆ ಹೋಗುವದು ಎಂಬದಾಗಿ ಇಲ್ಲಿ ಅರ್ಥ ತಾತ್ಪರ್ಯವಲ್ಲ ಎಂದು ಪರಕೀಯರು (ಶಂಕರಾಚಾರ್ಯರು) ಹೇಳುವದು ಸರಿಯಲ್ಲ; ಯಾಕಂದರೆ (ಪ್ರಸ್ತುತ) ಪದಗಳ ಅರ್ಥ

ಹಾಗಲ್ಲ. ಶರೀರದಿಂದ ಎದ್ದು ಎಂಬ ಪದಕ್ಕೆ ಶರೀರದ ಕುರಿತು (ಅದು) ನಾನು ಎಂಬ ಅಭಿಮಾನವನ್ನು ಬಿಟ್ಟು ಎಂತ ಅರ್ಥವಾಗುವದಿಲ್ಲ. ಇದು ಸ್ಪಷ್ಟವಾಗಿರುತ್ತದೆ; ಮತ್ತು ಪರಂಜ್ಯೋತಿಭಾವವು ಸ್ವರೂಪ ಸಾಕ್ಷಾತ್ಕಾರಲಕ್ಷಣವಾದ ಸ್ವರೂಪನಿಷ್ಪತ್ತಿ ಆದತರುವಾಯ ಉಂಟಾಗುವದಾಗಿರುತ್ತದೆ. ಅದಕ್ಕೆ ಮೊದಲಾಗಿಯೇ ಪರಂಜ್ಯೋತಿಯನ್ನು ಪ್ರಾಪಿಸಿ ಎಂದು ಹೇಳುವದು ಯುಕ್ತವಲ್ಲ. ಯಾಕಂದರೆ, ಸರ್ಪದಿಂದ ಹೊರಟು ಹಗ್ಗವನ್ನು ಪಡದು ಎಂತ ಈ ಮೊದಲು ಪ್ರಯೋಗಿಸಿದ್ದು ಎಲ್ಲಿಯೂ ಕಂಡು ಬರುವದಿಲ್ಲ. ಮತ್ತು ವಾಯು, ಅಭ್ರ ಮೊದಲಾದವುಗಳ ದೃಷ್ಟಾಂತಗಳ ವಿಕೃತಿಯು ಸ್ಪಷ್ಟವೇ. ಇದು ಹೊರತು ಇಲ್ಲಿ ಪರಂಜ್ಯೋತಿಯನ್ನು ಪಡದು ಎಂಬ ವಾಕ್ಯದಿಂದ ನಿರ್ವಿಶೇಷ ಬ್ರಹ್ಮಭಾವವು ವಿವಕ್ಷಿತವಾಗಿರುವ ಪಕ್ಷದಲ್ಲಿ ಸುಷುಪ್ತಿ ದಶೆಗೆ ಸಂಬಂಧಿಸಿ ಉತ್ಥಾಪನೆ ಮಾಡಿದ ವಿಶೇಷಾನುಭವಶೂನ್ಯತೆಯು ದೆಸೆಯಿಂದ ನಷ್ಟವಾದಂತೆ ತೋರುವ ದೋಷವು ಪರಿಹಾರವಾಗುವಂಥಾದಲ್ಲವಾದ್ದರಿಂದ ಅದಕ್ಕಾಗಿ ಮುಕ್ತಿ ಅವಸ್ಥೆ ಉಪದೇಶಕ್ಕೆ ಸಂಗತಿ ಇಲ್ಲದೇ ಹೋದೀತು ಎಂದು ಹೇಳುತ್ತಾರೆ.

इदं जीवशरीरं मृत्युना आत्तं व्याप्तं अतोमर्त्यंविनाशितच्छरीरको जीवोपि विनाश्येक । तज्जीवशरीरं अशरीरस्य प्राकृत देहहीनस्यात एवामृतस्याविनाशिन आत्मनोहरेराधिष्टानं । × । सशरीरोजीवः प्रियाप्रियाभ्यां परेण प्राप्यसुखदुःखाभ्यां आत्तः आक्रान्तः । प्रसिद्धमेतदित्याहनहवाइति । अपहतिर्हानिर्नास्ति । हवैप्रसिद्धं । वावेत्यवधारणे । अशरीरंसन्तं हरिं नैवस्पृशत इति वैलक्षण्यमित्यर्थः ॥ रा ॥

इदं जीवजातं मर्त्यंवाथमरणशीलमेव । उपलक्षणमेतत् । जराग्रस्तञ्च शरीरं शरीरसम्बन्धितदभिमानीतियावत् । तज्जीवाभिमतं शरीरं अमृतस्य जरामृत्युरहितनित्यशरी

ಮಾಧ್ವರು, ಈ ಜೀವಶರೀರವು ಮೃತ್ಯುವಿನಿಂದ ವ್ಯಾಪಿಸಿಕೊಂಡುಂಟು. ಆದ ಕಾರಣ ನಾಶಪಡುವ ಸ್ವಭಾವಉಳ್ಳದ್ದು. ಆ ಶರೀರಉಳ್ಳ ಜೀವ ಸಹ ನಾಶಪಡತಕ್ಕವನೇ; ಎಂದರೆ ಈ ಜೀವಸಮೂಹವೂ ಮರಣಪಡುವ ಸ್ವಭಾವಉಳ್ಳದ್ದೇ. ಈ ಸಂಗತಿ ಉಪಲಕ್ಷಣ ಮಾತ್ರವಾಗಿರುತ್ತದೆ. ವೃದ್ಧಾಪ್ಯದಿಂದಲೂ ವ್ಯಾಪಿಸಿಕೊಂಡುಂಟು. ಶರೀರವೆಂದರೆ ಶರೀರಸಂಬಂಧಿಯಾದ ಅದರ ಅಭಿಮಾನಿ (ಜೀವ) ಎಂದು ತಾತ್ಪರ್ಯ. ಆ ಜೀವನಿಂದ ಅಭಿಮಾನಿಸಲ್ಪಟ್ಟ ಶರೀರವು ಪ್ರಾಕೃತಶರೀರವಿಲ್ಲದ, ಆದಕಾರಣ ಮರಣರಹಿತನಾಗಿ ನಾಶವಿಲ್ಲದ, ಎಂದರೆ ಜರಾಮರಣಶೂನ್ಯವಾದ ನಿತ್ಯಶರೀರಉಳ್ಳ

रस अशरीरस्य शरीराभिमानशून्यस्य अस्य पूर्वोक्तगुणस्यात्मनः परमात्मनोऽधिष्ठानं । एवं भूतोपि लीलयामर्त्यशरीरमधितिष्ठती तियावत्। जीवस्तु न तदधितिष्ठतीति वक्ष्य ति । × । यः सशरीरो जीवः सःप्रियाप्रिया भ्यां आत्तः सम्बद्धः । × । अपहतिरपगमो नास्ति हवै नास्त्येवखलु । मुक्तानामपि प्रिय सद्भावादितिभावः । अत्र प्रियं नाम परेणेयं प्राप्यंसुखं अप्रियन्तु परेणेयमभद्रं । अकार स्य निषेधार्थत्वेनाभद्रवाचित्वात् प्रियशब्द स्य च परेणेयत्ववाचित्वात् । तथाच परेणेयं +अअप्रियमिति परनिपात इतिज्ञेयं । × । अशरीरं सदाशरीराभिमानशून्यं परमात्मानं प्रियाप्रिये नवाव नैवस्पृशतः । अभद्रं भगव ति नास्त्येव । सुखमपि नपरप्राप्यमस्तीति भावः ॥ वे ॥

अशरीरोवायुरिति । वायुर्मुख्यवायुः अशरिरः । अभ्रं आप्नोति व्याप्नोति जगदि त्यप्शब्दितेन हरिणाभ्रियमाणत्वादभ्रं ब्रह्मा। विशेषेणद्योततइति विद्युन्नाम्नी भारती । स्त नयित्नुः सर्वशब्दमानित्वात् स्तनयित्नुनाम्नी सरस्वती । इत्येतानित्रीण्यशरीराणि वायुश्चा शरिरः । वाय्वादयश्चत्वारो देहवन्तोपि तद भिमानाभावादशरीराण्येव तादृशान्यपि प्रि याप्रिये न स्पृशतः किमुपरेशमितिवाक्यशेषः। अत्रयद्यपि ब्रह्मवाय्वोः परेणेयं भगवता प्रा प्यं प्रियमस्ति । भारतीसरस्वत्योस्तु भग

ಮತ್ತು ಶರೀರಾಭಿಮಾನವಿಲ್ಲದ, ಈ ಮೊದಲು ಹೇಳಿದ ಗುಣಗಳುಳ್ಳ ಪರಮಾತ್ಮನಾದ ಹರಿಯ ಅಧಿಷ್ಠಾನ (ಇರುವ ಸ್ಥಳ) ವಾಗಿರುತ್ತದೆ. (ಆತ್ಮನು) ಈ ತರಹದವನಾದರೂ ಆಟಕ್ಕಾಗಿ ಸಾವು ಉಳ್ಳ ದೇಹದಲ್ಲಿ ಅಧಿಷ್ಠಿತನಾಗಿರುತ್ತಾನೆಂದು ತಾತ್ಪರ್ಯ. ಜೀವನು ಅದರಲ್ಲಿ ಅಧಿಷ್ಠಿತನಾಗಿರುವವನಲ್ಲೆಂದು ಮುಂದೆ ಹೇಳೋಣಾಗುತ್ತದೆ. ಶರೀರಯುಕ್ತನಾದ ಜೀವನು ಯಾರೋ ಅವನು ಪರಮಾತ್ಮನಿಂದ ದೊರಕುವ ಸುಖದುಃಖಗಳಿಂದ ಆಕ್ರಮಿಸಲ್ಪಟ್ಟಿರುತ್ತಾನೆ; ಎಂದರೆ ಅವುಗಳಿಂದ ನಿರ್ಬಂಧಿಸಲ್ಪಟ್ಟಿರುತ್ತಾನೆ. ಇದು ಪ್ರಸಿದ್ಧವಾದದ್ದು. ಇವನಿಗೆ ನಿಶ್ಚಯವಾಗಿ ಅವುಗಳಿಂದ ಬಿಡುಗಡೆ ಇಲ್ಲವೇ ಇಲ್ಲ. ಯಾಕಂದರೆ ಮುಕ್ತರಾದವರಿಗೆ ಕೂಡಾ ಸುಖಾನುಭವ ಉಂಟು. [ಇಲ್ಲಿ ಪ್ರಿಯ (ಸುಖ) ಎಂದರೆ ಭಗವಂತನಿಂದ ದೊರಕುವ ಸುಖ. ಅಪ್ರಿಯ (ದುಃಖ) ಎಂದರೆ ಭಗವಂತನಿಂದ ದೊರಕುವ ಅಭದ್ರ (ಅಮಂಗಲ) ಎಂದು ಅರ್ಥ]. ಯಾಕಂದರೆ ಅಕಾರವು ನಿಷೇದಾರ್ಥ ಉಳ್ಳದ್ದಾದಪ್ರಯುಕ್ತ ಅಮಂಗಲ ವಾಚಿಯಾಗಿರುತ್ತದೆ; ಮತ್ತು ಪ್ರಿಯ ಶಬ್ದವು ಭಗವಂತನಿಂದ ಶಿಕ್ಕುವಂಥಾದ್ದನ್ನು ಹೇಳುತ್ತದೆ. ಹೀಗೆ ಅಪ್ರಿಯಶಬ್ದವು ಭಗವಂತನಿಂದ ದೊರಕುವ ಅಮಂಗಲಾರ್ಥದಲ್ಲಿ ಅಕಾರವು ಪರನಿಪಾತ ಉಳ್ಳದ್ದಾ

वत्प्राप्यं स्वस्वभर्तृ प्राप्यञ्चास्तिसुखं । तथापि तदन्येनप्राप्यं सुखं नेति प्रियस्पृष्टिश्च तुर्णां नेत्युक्तं मुक्तोपि ईशप्रसादादेव भोगान् भुंक्ते । अतोपि जीवेशयोर्वैलक्ष्यण्यमित्याह तद्यथेति । तन्निदर्शनं यथा । एतानिवाम्ब्रविद्युत्स्तनयित्नुशब्दितानि अमुष्मादाकाशात्परमात्मनः समुत्थाय उत्पद्यपरंज्योतिः परमात्मानमेवोपसम्पद्य स्वेन रूपेण निजानंदानुभवरूपेणाभिनिष्पद्यन्ते ॥ रा ॥

एतानि अभ्रादीनि अशरीराणि । ज्ञानवैशेष्येण शरीरेणात्यन्तं न सम्बद्धानि । अतएव नप्रियाप्रियवन्ति । × । समुत्थाय शरीरादितिशेषः । परंज्जोतिःपरंब्रह्म । उपसम्पद्यसमीपंगत्वा । स्वेनरूपेण स्वस्वरूपानन्दादिनाऽभिनिष्पद्यन्ते । सम्यक् सम्पन्नानि भवन्ति ॥ वे ॥

ಗಿದೆ ಎಂದು ತಿಳಿಯಬೇಕಾಗಿರುತ್ತದೆ.] ಶರೀರರಹಿತನಾದ ಎಂದರೆ ಸರ್ವ ಕಾಲದಲ್ಲಿಯೂ ಶರೀರಾಭಿಮಾನಶೂನ್ಯನಾದಂಥಾ ಪರಮಾತ್ಮನಾದ ಹರಿಯನ್ನು ಸುಖ ದುಃಖಗಳು ಮುಟ್ಟುವದೇ ಇಲ್ಲ. ಅಮಂಗಲವು ಭಗವಂತನಲ್ಲಿ ಇಲ್ಲವೇ ಇಲ್ಲ. ಸುಖ ಕೂಡಾ ಇನ್ನೊಬ್ಬನಿಂದ ದೊರಕಬೇಕಾದದ್ದಿಲ್ಲ ಎಂದು ಭಾವವಾಗಿರುತ್ತದೆ. ಇದೇ (ಅವನಿಗೂ ಜೀವನಿಗೂ ತಮ್ಮೊಳಗಿರುವ) ವೈಲಕ್ಷಣ್ಯ(ಭೇದ)ವಾಗಿರುತ್ತದೆ.

ವಾಯು ಎಂದರೆ ಮುಖ್ಯವಾಯು. ಇವನು ಶರೀರ ಇಲ್ಲದವನು. ಅಭ್ರ ಎಂದರೆ ಜಗತ್ತನ್ನು ವ್ಯಾಪಿಸಿರುವ ಅಪ್ (ಜಲ) ಎಂಬ ಹರಿಯಿಂದ ಪೋಷಿಸಲ್ಪಡುವ ಕಾರಣ ಬ್ರಹ್ಮ(ನ ಹೆಸರು). ವಿಶೇಷವಾಗಿ ಪ್ರಕಾಶಿಸುವಕಾರಣ ವಿದ್ಯುತ್ ಎಂದರೆ ಆ ಹೆಸರಿನ ಭಾರತೀದೇವಿ. ಸರ್ವ ಶಬ್ದಾಭಿಮಾನಿಯಾದ್ದರಿಂದ ಸ್ತನಯಿತ್ನು ಎಂದರೆ ಆ ಹೆಸರುಳ್ಳ ಸರಸ್ವತಿ. ಈ ಮೂವರು, ಅಭ್ರಾದಿಗಳು, ಶರೀರವಿಲ್ಲದವರು. ವಾಯುವಿಗೂ ಶರೀರವಿಲ್ಲ. (ಈ) ವಾಯು ಮೊದಲಾದ ನಾಲ್ವರು ದೇಹ ಉಳ್ಳವರಾದಾಗ್ಯೂ (ಅದರಲ್ಲಿ ಅವರಿಗೆ) ಅಭಿಮಾನವಿಲ್ಲದಪ್ರಯುಕ್ತ ಶರೀರರಹಿತರಾದವರೇ, ಎಂದರೆ ಜ್ಞಾನಬಾಹುಳ್ಯದ ದೆಸೆಯಿಂದ ಹೆಚ್ಚಾಗಿ ಶರೀರನಿರ್ಬಂಧ ಇಲ್ಲದವರು. ಆದಕಾರಣ ಸುಖದುಃಖಗಳಿಲ್ಲದವರು. ಅಂಥವರಿಗೆ ಕೂಡಾ ಸುಖದುಃಖಗಳು ತಗಲುವದಿಲ್ಲವಾದ ಮೇಲೆ, ಉತ್ಕೃಷ್ಟನಾದ ಈಶನನ್ನು (ಅವು) ಸ್ಪರ್ಶ ಮಾಡುವದಿಲ್ಲೆಂದು ಹೇಳಬೇಕಾದ ಅಗತ್ಯವಿಲ್ಲೆಂದು ವಾಕ್ಯ ಪೂರ್ಣ ಮಾಡಿಕೊಳ್ಳಬೇಕು. ಇಲ್ಲಿ ಬ್ರಹ್ಮವಾಯು ಇವರಿಗೆ ಭಗವಂತನಿಂದ ಶಿಕ್ಕಬೇಕಾದ ಸುಖವೂ, ಭಾರತೀ ಸರಸ್ವತೀ ಇವರಿಗೆ ಭಗವಂತನಿಂದಲೂ, ತಮ್ಮ ತಮ್ಮ ಗಂಡಂದಿರಿಂದಲೂ, ದೊರಕಬೇಕಾದ ಸುಖವೂ ಇದೆ. ಆದರೂ ಬೇರೆಯವರಿಂದ ದೊರಕಬೇಕಾದ ಸುಖವಿಲ್ಲವಾದ ಕಾರಣ, ಈ ನಾಲ್ವರಿಗೂ ಸುಖ ಸ್ಪರ್ಶ

ಇಲ್ಲೆಂದು ಹೇಳಿದ್ದಾಗಿರುತ್ತದೆ. ಮುಕ್ತನಾದವನು ಕೂಡಾ ಈಶನ ಅನುಗ್ರಹದಿಂದಲೇ ಸುಖಗಳನ್ನು ಅನುಭವಿಸುವದಾಗಿರುತ್ತದೆ. ಇದರಿಂದ ಕೂಡಾ ಜೀವೇಶರೊಳಗೆ ಭೇದ ಉಂಟೆಂದು ಹೇಳೋಣಾಗುತ್ತದೆ. ಅದಕ್ಕೆ ದೃಷ್ಟಾಂತ ಯಾವದಂದರೆ:—ಈ ವಾಯು, ಅಭ್ರ, ವಿದ್ಯುತ್ ಗುಡುಗು ಎಂಬವುಗಳು ಆ ಆಕಾಶ ಎಂದರೆ (ಆ ಹೆಸರಿನ) ಪರಮಾತ್ಮನ ದೆಸೆಯಿಂದ ಹೊರಟುಕೊಂಡು ಬಂದು ಪರಂಜ್ಯೋತಿ ಎಂದರೆ ಪರಮಾತ್ಮನನ್ನೇ ಪ್ರಾಪಿಸಿ ತಮ್ಮ ಸ್ವಂತ ಆನಂದಾನುಭವರೂಪದಲ್ಲಿ ನಿಷ್ಪತ್ತಿಯನ್ನು ಹೇಗೆ ಹೊಂದುತ್ತವೋ ಎಂದರೆ ಆಯಾ ಶರೀರದಿಂದ ಹೊರಟು, ಪರಬ್ರಹ್ಮದ ಸಮೀಪಕ್ಕೆ ಹೋಗಿ, ಸ್ವಸ್ವರೂಪ ಆನಂದಾದಿಗಳೊಂದಿಗೆ ಹೇಗೆ ಸಂಪನ್ನವಾಗುತ್ತವೋ,

### (೨) ನೇ ಸಂಗತಿಯ ಕುರಿತು.

एवमेवैषज्ञानीजीवः । सम्प्रसादः सम्यक्भगवत्प्रसादयुक्तः अस्माच्छरीरात्समुत्थायपरंज्योतिरुपसम्पद्यस्वेन रूपेण निजानन्दानुभवरूपेणाभिनिष्पद्यते । उक्तवैलक्षण्यसिद्धमर्थमाह स इति । यं प्राप्यमुक्तो भूत् स परञ्ज्योतिः शब्दोक्तः उत्तमः पुरुषः । स मुक्तो जीवः । तत्रभगवल्लोकेपर्येति परितः सञ्चरति । कथं? जक्षन् भक्षयन् क्रीडन्नित्यादि । ज्ञातिभिः सहमुक्तैः । अज्ञातिभिः पूर्वमुक्तैः । वयस्यैः सखिभिः । रमणातिशयप्रकारमाहनोपजनमिति । उपजनं परिसरवर्त्तिजनं शरीरं स्वशरीरञ्च । न स्मरन् रमतइति रमणातिशयोक्तिः । पूर्वं तदेतच्छरीरमशरीरस्यात्मनोऽधिष्ठानमित्युक्तं। तत्रजीवोवा चक्षुरादिर्वास्तुतदधिष्ठातेत्यतो जीवस्या सामर्थ्याचक्षुरादेः करणत्वान्नाधिष्ठातृत्वमिति सदृष्टान्तमाह स यथेति । आचरणे रथप्रवर्तने सबुद्धिस्थः प्रयोग्यः सार

ಹಾಗೆಯೇ ಈ ಪರಕೀಯ(ಒಬ್ಬ) ಜ್ಞಾನಿಯಾದ ಮುಕ್ತಜೀವನು ಭಗವಂತನ ಅನುಗ್ರಹವನ್ನು ಪಡದು, ಈ ಬಾಹ್ಯಶರೀರದಿಂದ ಹೊರಟು ಪರಂಜ್ಯೋತಿಯನ್ನು ಪ್ರಾಪಿಸಿ (ಸಮೀಪಕ್ಕೆ ಹೋಗಿ) ನಿಜ (ಸ್ವಂತ) ಆನಂದಾನುಭವ ಉಳ್ಳ ರೂಪನಿಷ್ಪತ್ತಿಯನ್ನು ಪಡಿಯುತ್ತಾನೆ. ಯಾವ ಪರಂಜ್ಯೋತಿಯನ್ನು ಪ್ರಾಪಿಸಿ ಸ್ವರೂಪನಿಷ್ಪತ್ತಿಯನ್ನು ಪಡಿಯುತ್ತಾನೋ, ಎಂದರೆ (ಈಗ) ಯಾವದನ್ನು ಪ್ರಾಪಿಸಿ (ಜ್ಞಾನಿಯು) ಮುಕ್ತನಾದನೋ, ಆ ಪರಂಜ್ಯೋತಿ ಶಬ್ದವಾಚ್ಯನಾದವನು ಉತ್ತಮಪುರುಷನು. [ಇದರಿಂದ ಉತ್ತಮ ಪುರುಷನಾಗಿರುವ ಕಾರಣದಿಂದಲೂ ಅವನಿಗೆ ಜೀವವೈಲಕ್ಷಣ್ಯ (ಭೇದ)ವು ಹೇಳಲ್ಪಟ್ಟಿತೆಂದು ತಿಳಿಯ ಬೇಕಾಗಿರುತ್ತದೆ. ಕೆಲವರು ಆ ವೈಲಕ್ಷಣ್ಯದಿಂದ ಸಿದ್ಧವಾದಂಥಾ ಅರ್ಥನಿದರ್ಶನಕ್ಕಾಗಿ ಈ ರೀತಿ ಹೇಳುವದೆಂದು ಹೇಳುತ್ತಾರೆ.

थि: यानेयथानियुक्त: एवमेवायं प्राणो मुख्य वायुरस्मिन्शरीरे तत्प्रवर्तनाययुक्त: । सार थित्वेन नियुक्त: । विष्णुस्तुराथिकवद्देहाधि ष्ठातेत्युक्तमेव । जीवस्तु अन्यरथगवत्तिष्ठ तीतिभाव: ॥ रा ॥

एवमेवैषपरोपिमुक्त: । × । अस्माच्चर माच्छरीरात् । × । यत्परंज्योतिरुपसम्पद्य स्वेन रूपेणाभिनिष्पद्यते स उत्तम: पुरुष:। अनेनोत्तमपुरुषत्वेनापि जीववैलक्षण्यं उक्त मितिज्ञातव्यं ॥ केचित्तुवैलक्षण्य सिद्धार्थ प्रदर्शनायेदमित्याहु: ॥ मुक्तभोगप्रदत्वेनापि जीववैलक्षण्यमित्याशयेनाह स तत्रेति ।×। तदनुग्रहेणैवपर्येति परितो गच्छति जक्षन् भक्षयन् हसन्वा । × । उपजनं स्वसमीपव र्तिजनं । × । केवलं हर्यनुसन्धानेनैव परम सुखभोक्तृणां तेषामुपजनदर्शनादिकमपि ना स्तीतिभाव: । × । शरीराधिष्ठातृत्वं कथं जीवव्यावर्तकमित्याशंकापरिहाराय शरीरा धिष्ठातृत्वं विशदयन् भावनार्थमीश्वरस्य रथिकसाम्यमाह स यथेत्यादिना । × । यानप्रयोक्तृत्वात्प्रयोग्य: सारथि: । आचर त्यनेनेत्याचरणे रथे आचरणे तत्प्रवृत्यर्थं युक्तो नियुक्त: स्वामिना एवमेवायं प्राणोऽस्मिन् शरीराख्ये रथेतदाचरणार्थं युक्तोनियुक्त ई श्वरेण । शरीररथे प्राण: साराथिस्थानीय इत्यर्थ: । उपलक्षणमेतत् । यथारथी यथान्य रथग: इत्यादिग्राह्यं । तथा च यथारथी एव

(ಈಗ) ಮುಕ್ತನಿಗೆ ಸುಖಕೊಡುವದರಿಂದ ಕೂಡಾ ಆ ಭೇದ ಉಂಟೆಂದು ತೋರಿಸು ವದಕ್ಕಾಗಿ (ಮುಂದಿನ ಹೇಳಿಕೆಯನ್ನು) ಹೇಳೋಣಾಗುತ್ತದೆ]. (ಶ್ರುತಿಯಲ್ಲಿ ರುವ) ಅವನು (ಈ ಶಬ್ದದಿಂದ ಹೇಳಲ್ಪ ಡುವವನು) ಎಂದರೆ ಮುಕ್ತನಾದ ಜೀವ ನು, ಭಗವಂತನ ಲೋಕದಲ್ಲಿ ಅವನ ಅನು ಗ್ರಹದಿಂದಲೇ ಸಂಚರಿಸುತ್ತಿರುತ್ತಾನೆ, ಹೇ ಗೆಂದರೆ:—ತಿನ್ನುತ್ತಾ, ಅಥವಾ ನಗುತ್ತಾ ತನ್ನ ಸಂಗಡ ಮುಕ್ತರಾದವರನ್ನೂ, ತನ ಗಿಂತ ಮೊದಲು ಮುಕ್ತರಾದವರನ್ನೂ, ತನ್ನ ಸರಿಪ್ರಾಯ ಉಳ್ಳವರನ್ನೂ, ಸ್ನೇಹಿ ತರನ್ನೂ ಕೂಡಿಕೊಂಡು ಆಟ ಮೊದಲಾ ದದ್ದನ್ನಾಡುತ್ತಾ, ಸಮೀಪ ಇರುವವರನ್ನೂ ದೇಹವನ್ನೂ ಕೂಡಾ ಸ್ಮರಿಸದೇ ಕೇವಲ ಹರಿ ಚಿಂತನೆಯಿಂದಲೇ ಸುಖಪಡುತ್ತಿರು ತ್ತಾನೆ. [ಈ ರೀತಿ ಸುಖಪಡುವವರಿಗೆ ತಮ್ಮ ಸಮೀಪ ಇರುವವರ ದರ್ಶನಾದಿ ಗಳು ಕೂಡಾ ಇಲ್ಲ ಎಂದು ಭಾವವಾಗಿ ರುತ್ತದೆ. (ಈಗ) ಈ ಶರೀರವು ಶರೀರ ರಹಿತನಾದ ಆತ್ಮನ ಅಧಿಷ್ಠಾನ (ನಿವಾಸ ಸ್ಥಳ)ವೆಂದು ಹೇಳೋಣಾಯಿತು. ಅದ ರಲ್ಲಿ ಅಧಿಷ್ಠಾನವಾಗಿರುವದು ಜೀವವಾ ಗಲೀ, ಚಕ್ಷುರಾದಿ ಇಂದ್ರಿಯಗಳಾಗಲೀ ಆಗಿರಬಾರದೋ? ಎಂದರೆ ಜೀವಗೆ ಅದ ಕ್ಕೆ ಸಾಮರ್ಥ್ಯವಿಲ್ಲ. ಚಕ್ಷುರಾದಿಗಳು ಕರಣಗಳಾಗಿರುತ್ತವೆ, ಆದ್ದರಿಂದ ಇವ್ಯಾ

मेवायमस्मिन्शरीरे प्राणः प्रकृष्टानंदरूप त्वात् तन्नामाविष्णुः रथाधिष्ठाता । यथान्य रथगः अन्यस्वामिकरथगः कश्चित्पुमान् एव मेवायमस्मिञ्छरीरे प्राणस्तद्वान् जीवः इति योजना । इन्द्रियाणि हयस्थानीयानीत्यपि ग्राह्यं । एवञ्च जीवस्यान्यरथगोपमत्वा न्नशरीराधिष्ठातृत्वमिति तज्जीवव्यावर्तकं भ वत्येवेतिभावः । वे ।

ವದಕ್ಕೂ ಅಧಿಷ್ಠಾತೃತ್ವವಿಲ್ಲೆಂಬದನ್ನು ದೃಷ್ಟಾಂತ ಪುರಃಸರನಾಗಿ (ಶ್ರುತಿಯು) ಹೇಳುತ್ತದೆ; ಎಂದರೆ ಶರೀರದಲ್ಲಿ ಅಧಿಷ್ಠಾನವಾಗಿರೋಣವು, ಜೀವ ವ್ಯತಿರಿಕ್ತವಾದ ಸ್ವಭಾವವೆಂಬದು ಹೇಗೆ ಎಂಬ ಸಂಗತಿಯನ್ನು ಸ್ವಷ್ಟಪಡಿಸಿ, ಈಶ್ವರಗೆ ರಥಿಕನ (ರಥದಲ್ಲಿ ಕುಳಿತ ಯಜಮಾನನ) ಸಾಮ್ಯವನ್ನು ಹೇಳೋಣಾಗುತ್ತದೆ.] ಪ್ರಯೋಗ್ಯನೆಂದರೆ ರಥ ನಡಿಸಲಿಕ್ಕೆ ನೇಮಕಪಟ್ಟವನಾದ ಸಾರಥಿ (ಎಂದು ಅರ್ಥ). ರಥ ನಡಿಸುವದಕ್ಕಾಗಿ ಸ್ವಾಮಿಯಿಂದ ನೇಮಕಪಟ್ಟಂಥಾ, ಬುದ್ಧಿಷ್ಠನಾದ ಸಾರಥಿಯು ಹೇಗೆ ರಥದಲ್ಲಿ (ಅದನ್ನು ನಡಿಸುವದಕ್ಕೆ) ನಿಯೋಜಿಸಲ್ಪಡುತ್ತಾನೋ ಹಾಗೆಯೇ ಈ ಪ್ರಾಣ ಎಂದರೆ ಮುಖ್ಯ ವಾಯುವು, ಈ ಶರೀರವೆಂಬ ರಥದಲ್ಲಿ, ಅದನ್ನು ನಡಿಸುವಗೋಸ್ಕರ ಈಶ್ವರನಿಂದ ಸಾರಥಿಯಾಗಿ ನೇಮಿಸಲ್ಪಟ್ಟಿರುತ್ತಾನೆ—ಎಂದರೆ ಶರೀರವೆಂಬ ರಥದಲ್ಲಿ ಪ್ರಾಣನು ಸಾರಥಿಯಂತೆ ಇರುತ್ತಾನೆಂದು ಅರ್ಥ. [ಇದು ಒಂದು ಕುರುಹು ಮಾತ್ರವಾಗಿರುತ್ತದೆ. ರಥಿಕ ಮತ್ತು ರಥದಲ್ಲಿ (ಅವನ ಸಂಗಡ) ಕುಳಿತ ಇನ್ನೊಬ್ಬ ಇವರ ದೃಷ್ಟಾಂತವನ್ನು ಗ್ರಹಿಸಿಕೊಳ್ಳಬೇಕು. ಆದಕಾರಣ] ಒಬ್ಬ ರಥಿಕನು ಹೇಗೋ, ಹಾಗೆಯೇ ಈ ಶರೀರದಲ್ಲಿ ಅತ್ಯುತ್ಕೃಷ್ಟವಾದ ಆನಂದರೂಪ ಉಳ್ಳವನಾದ ಕಾರಣ ಪ್ರಾಣನೆಂದು ಕರೆಯಲ್ಪಡುವ ವಿಷ್ಣುವು ರಥಿಕನಾಗಿರುತ್ತಾನೆ. ಈ ರೀತಿ ವಿಷ್ಣುವು ದೇಹದಲ್ಲಿ ಅಧಿಷ್ಠಾನವಾಗಿರುವವನೆಂಬದನ್ನು ಈ ಮೊದಲೇ ಹೇಳೋಣಾಗಿರುತ್ತದೆ. ಜೀವನು ಇನ್ನೊಬ್ಬನ ರಥದಲ್ಲಿ ಕುಳಿತ (ಮೂರನೆಯ) ವನಂತೆ ಇರುತ್ತಾನೆ ಎಂದು ಭಾವವಾಗಿರುತ್ತದೆ, ಎಂದರೆ ಬೇರೆ ಒಬ್ಬನು ಯಜಮಾನನಾಗಿರುವ ರಥದಲ್ಲಿ ಕುಳಿತ ಒಬ್ಬ ಪುರುಷನು ಹೇಗೋ ಹಾಗೆಯೇ ಈ ಶರೀರದಲ್ಲಿ ಪ್ರಾಣಯುಕ್ತನಾದ ಜೀವನು ಇರುತ್ತಾನೆ. ಇಂದ್ರಿಯಗಳು ಕುದುರೆಗಳ ಬದಲಿಗೆ ಇದ್ದಾವೆಂದು ಕೂಡಾ ತಿಳಿಯಬೇಕಾಗಿರುತ್ತದೆ. ಹೀಗೆ ಜೀವನು ಇನ್ನೊಬ್ಬನ ರಥದಲ್ಲಿ ಕುಳಿತವನಂತೆ ಇರುವದರಿಂದ, ಇವನಿಗೆ ಶರೀರಾಧಿಷ್ಠಾತೃತ್ವವಿಲ್ಲವಾದಕಾರಣ, ಅದು ಜೀವಭೇದವನ್ನು ತೋರಿಸುತ್ತದೆಂತಲೇ ಭಾವವಾಗಿರುತ್ತದೆ ಎಂದು (ಮಾಧ್ವರು) ವಿವರಿಸುತ್ತಾರೆ.

स: उपसंपदनीय: उत्तमपुरुष: इत्यर्थ: ।+। स: उपसत्ता तत्र परमात्मानिपर्येति तं परितोऽनु भवति यद्वानुसञ्चरतीत्यर्थ: ।×। यथेष्टं भोगानवाप्नोतीत्यर्थ: । स्त्रीपुमांसयोर न्योन्योपगमेन जातमित्युपजनत्वं शरीरस्य। तेनचापुरुषार्थत्वमुच्यते । अथवाउपजनं बन्धुजनानां समीपे शयितं कुणपमित्यर्थ: । यद्यपिमुक्त: सर्वज्ञत्वात्त्यक्तमपि शरीरमनु भवत्येव । तथाप्य ब्रह्मात्मकतया दु:खरूप त्वेनानुभूतं शरीरं न मुक्तिदशायां तथानुभ वतीत्यर्थ: । आत्मनोऽशरीरस्वभावत्वे प्राक् शरीरसंबन्ध: किंनिबन्धनइत्यत्राह यथाआ चरणे शकटप्रयोग्य:युग्य: अश्वोबलीवर्दोवा पाशेनयुक्तो भवति एवमेवायं प्राण: प्राण सहचर: प्रत्यगात्मासंसारदशायां कर्मपाश वशेनयुक्तो भवतीत्यर्थ: । अनेन युग्यशकट दृष्टान्तेन देहात्मनोर्व्यतिरेकोदृढीकृतो भव ति ॥ रं ॥

ರಾಮಾನುಜಾಚಾರ್ಯರು, ಸಂಪಾದಿಸಲ್ಪಡತಕ್ಕವ (ಪರಮಾತ್ಮ) ನು ಉತ್ತಮ ಪುರುಷನಾಗಿರುತ್ತಾನೆ. ಅಲ್ಲಿ ಹೋಗಿ ಶೇರಿಕೊಳ್ಳುವವ (ಉಪಾಸಕ)ನು (ಶ್ರುತಿಯಲ್ಲಿ) ಅವನು (ಎಂಬ ಶಬ್ದದಿಂದ ಹೇಳಲ್ಪಡುವವನು) ಪರಮಾತ್ಮನಲ್ಲಿ ಅವನನ್ನು ಸರ್ವತ್ರ ಕಂಡುಕೊಳ್ಳುತ್ತಾನೆ, ಅಥವಾ ಅವನನ್ನು ಸಕಲ ಕಡೆಗಳಲ್ಲಿಯೂ ಅನುಸರಿಸುತ್ತಾನೆ, ಎಂದರೆ ತನ್ನ ಇಚ್ಛಾಪ್ರಕಾರ ಭೋಗಗಳನ್ನನುಭವಿಸುತ್ತಾನೆಂದು ಅರ್ಥ. ಸ್ತ್ರೀಪುರುಷರ ಅನ್ಯೋನ್ಯ ಸಂಸರ್ಗದಿಂದುಂಟಾಗುವ ಕಾರಣ, ಉಪಜನ ಎಂದರೆ ಶರೀರವಾಗಿರುತ್ತದೆ. ಇದರಿಂದ ಅದಕ್ಕೆ (ಶರೀರಕ್ಕೆ) ನಿಷ್ಪ್ರಯೋಜನತ್ವವು ಹೇಳಲ್ಪಡುತ್ತದೆ. ಅಲ್ಲವಾದರೆ ಉಪಜನ ಎಂದರೆ ಬಂಧುಗಳ ಸಮೀಪ ಮಲಗಿದ ಶವ ಎಂದು ಅರ್ಥ. ಮುಕ್ತನಾದವನು ಶರೀರವನ್ನು ತ್ಯಜಿಸಿದ್ದಾಗ್ಯೂ, ಸರ್ವಜ್ಞನಾದ ಕಾರಣ ಅದನ್ನನುಭವಿಸದೆ ಇರುವದಿಲ್ಲ. ಹಾಗಾದರೂ ಬ್ರಹ್ಮವಿರುದ್ಧ ಮತ್ತು ದುಃಖರೂಪ ಸ್ವಭಾವವುಳ್ಳದ್ದಾಗಿ ಅನುಭವಿಸಿದಂಥಾ (ಆ) ಶರೀರವನ್ನು ಮುಕ್ತಿ ಅವಸ್ಥೆಯಲ್ಲಿ (ಪೂರ್ವಪ್ರಕಾರ) ಅನುಭವಿಸುವದಿಲ್ಲ ಎಂದು ಅರ್ಥ. [ಆತ್ಮನು ಶರೀರರಾಹಿತ್ಯ ಸ್ವಭಾವ ಉಳ್ಳವನಾಗಿರುತ್ತಾ, (ತತ್ಪೂರ್ವ ಮುಕ್ತಿ ಆಗುವದಕ್ಕೆ) ಮೊದಲು ಅವನಿಗೆ ಇರುತ್ತಿದ್ದ ಶರೀರನಿರ್ಬಂಧವು ಯಾವ ತರಹದ್ದು ಎಂದರೆ] ಒಂದು ಭಂಡಿಗೆ ಕುದುರೆ ಅಥವಾ ಎತ್ತು, ಪಾಶ (ಲಗಾಮು ಹಗ್ಗ)ದಿಂದ ಹೇಗೆ ಯೋಜಿಸಲ್ಪಡುತ್ತದೋ ಹಾಗೆಯೇ ಈ ಪ್ರಾಣ, ಎಂದರೆ ಪ್ರಾಣವನ್ನೊಡಗೂಡಿರುವ ಪ್ರತ್ಯಗಾತ್ಮನು, ಸಂಸಾರಾವಸ್ಥೆಯಲ್ಲಿ ಕರ್ಮಪಾಶದ ಪ್ರಾಬಲ್ಯದಿಂದ ಯೋಜಿಸಲ್ಪಡುತ್ತಾನೆ ಎಂದು ಅರ್ಥ.

ಈ ಕುದುರೆ, ಭಂಡಿ, ಇವುಗಳ ದೃಷ್ಟಾಂತದಿಂದ ದೇಹ ಮತ್ತು ಆತ್ಮ ಇವರೊಳಗಿನ ಭೇದವು ದೃಢಪಡಿಸಲ್ಪಡುತ್ತದೆ ಎಂದು ಹೇಳುತ್ತಾರೆ.

स येनस्वरूपेण संप्रसादोऽभिनिष्पद्यते प्राक्प्रतिबोधात् तद्भ्रान्तिनिमित्तात् सर्पो भवति यथारज्जुः पश्चात्कृतप्रकाशाद्रज्वात्म नास्वेन रूपेणाभिनिष्पद्यतेऽतः एवञ्च स उत्तमपुरुषः । उत्तमश्चासौ पुरुषश्चेत्युत्तमपु रुषः स एवोत्तमपुरुषः । अक्षिस्वप्नपुरुषौ व्यक्तौ अव्यक्तश्च सुषुप्तस्समस्तस्सम्प्रसन्नोऽ शरीरश्चस्वेनरूपेणेति । एषामेवस्वेन रूपेणा वस्थितः क्षराक्षरौ व्याकृताव्याकृतावपेक्ष्यो त्तमपुरुषः । सः सम्प्रसादः स्वेनरूपेण तत्रस्वात्मनिस्वस्थतया सर्वात्मभूतः । पर्येतिक्वचिदिन्द्राद्यात्मना जक्षन् हसन् भक्षयन्वाभक्ष्यानुच्चावचानीप्सितान् । क्व चिन्मनोमात्रैः संकल्पादेवसमुत्थितैर्ब्राह्मलौ किकैर्वाक्रीडन् स्त्र्यादिभीरममाणश्च मन सैव । × । स्त्रीपुंसयोरन्योन्योपगमेन जायत इत्युपजनं आत्मभावेनवात्मसामीप्येन जाय तइत्युपजनमिदं शरीरं तं न स्मरन् । तत्स्म रणेहि दुःखमेवस्यात् दुःखात्मकत्वात्तस्य । । × । अशरीरस्वरूपोऽपहतपाप्मत्वादि ल क्षणः सन्कथमेषपुरुषः अक्षिणिदृश्यतइत्यु क्तः प्रजापतिना तत्रयथासावक्षिणि साक्षा दृश्यते तद्वक्तव्यमितीदमारभ्यते तत्रकोहे तुरक्षिणिदर्शनइतिआह सः दृष्टान्तः । यथा प्रयोग्यः । प्रयोग्यपरोवासशब्दः । प्रयुज्यत

ಶಂಕರಾಚಾರ್ಯರು, (ಕತ್ತಲೆಯಲ್ಲಿ) ಅದರ ನಿಜವಾದ ಸ್ವಭಾವ ಗೊತ್ತಾಗುವ ಮೊದಲು ಆ (ಸರ್ಪದ) ಭ್ರಾಂತಿಯಿಂದ ಸರ್ಪವಾದ (ಸರ್ಪವೆಂದು ತೋರಿದ) ಒಂದು ಹಗ್ಗವು ಪ್ರಕಾಶಿಸಲ್ಪಟ್ಟ ನಂತರ ತನ್ನ ನಿಜವಾದ ಹಗ್ಗದ ಸ್ವಭಾವದಿಂದಲೇ ಹೇಗೆ ತೋರಿಸಿಕೊಳ್ಳುತ್ತದೋ ಹಾಗೆ, ಸಂಪ್ರಸಾದ(ಸ್ವಚ್ಛನಾದವ)ನು ಯಾವ ತನ್ನ ಸ್ವಂತರೂಪದಿಂದ ಪರಿಸಮಾಪ್ತಿ(ಸಿದ್ಧಿ)ಯನ್ನು ಪಡಿಯುತ್ತಾನೋ ಅವನು (ಆ ರೂಪ ಹೊಂದಿದವನು) ಉತ್ತಮಪುರುಷನಾಗಿರುತ್ತಾನೆ. ಉತ್ತಮನು ಮತ್ತು ಪುರುಷನು ಸಹ ಯಾರೋ ಅವನೇ ಉತ್ತಮಪುರುಷ(ನೆಂದು ಕರೆಯಲ್ಪಡುವವ)ನು. ಕಣ್ಣಿನಲ್ಲಿರುವ ಪುರುಷ ಮತ್ತು ಸ್ವಪ್ನಕಾಣುವವ ಇವರು ವ್ಯಕ್ತರು (ಸ್ಪಷ್ಟವಾದವರು). ಸುಷುಪ್ತಿಯನ್ನು ಪಡದು ಇಂದ್ರಿಯಗಳನ್ನು ತನ್ನಲ್ಲಿ ಆಕರ್ಷಣೆ ಮಾಡಿಕೊಂಡು ಪೂರ್ಣ ನಿರುಪದ್ರವನಾಗಿರುವವನು ಅವ್ಯಕ್ತ (ಕಾಣದೆ ಇರುವವ)ನು. ಶರೀರವಿಲ್ಲದವನು ತನ್ನ ಸ್ವರೂಪವನ್ನು ಪ್ರಾಪಿಸಿದವನು. ಈ ನಾಲ್ಕು ತರಹದವರಲ್ಲಿ ತನ್ನ ಸ್ವಂತ ರೂಪದಲ್ಲಿರುವವನು ಕ್ಷರ (ನಾಶವುಳ್ಳ) ಅಕ್ಷರ (ನಾಶವಿಲ್ಲದ) ವ್ಯಾಕೃತ (ಸಕಲ ಸ್ಥೂಲ ಸೂಕ್ಷ್ಮಗಳಾದ

इतिप्रयोग्य: अश्व:बलीवर्दौवा । यथालोके आचरत्यनेनेत्याचरण: रथ: अनोवा तस्मिन्ना चरणेयुक्त: तदाकर्षणाय एवमस्मिन् शरीरे रथस्थानीये प्राण: पञ्चवृत्तिरिन्द्रियमनोबुद्धिसंयुक्त: प्रज्ञात्मा विज्ञानक्रियाशक्तिद्वय सम्मूर्छितात्मा युक्त: स्वकर्मफलोपभोगनिमित्तं नियुक्त: । × । ईश्वरेण राज्ञेव सर्वाधिकारी दर्शन श्रवणचेष्टाव्यापारेऽधिकृत:॥शं॥

ಭೂತರೂಪ ಕಾರ್ಯಗಳು) ಮತ್ತು ಅವ್ಯಾಕೃತ (ಅಜ್ಞಾನಮಯವಾದ ಮಾಯಾರೂಪ ಕಾರಣ) ಪುರುಷರಿಗಿಂತಲೂ ಉತ್ತಮಪುರುಷನು. ಆ ಸಂಪ್ರಸಾದನು (ಜೀವನು) ತನ್ನ ಸ್ವಂತ ರೂಪದಲ್ಲಿ ತನ್ನಲ್ಲಿ ತಾನೇ ನಿರಾತಂಕವಾಗಿ ಸರ್ವಾತ್ಮಭೂತನಾಗಿ ಕೆಲವು ವೇಳೆ ಇಂದ್ರ ಮೊದಲಾದ ದೇವತೆಯ ರೂಪದಲ್ಲಿ ನಗುತ್ತಾ ಅಥವಾ ಇಷ್ಟಉಳ್ಳ ವಿವಿಧವಾದ ಭಕ್ಷ್ಯಗಳನ್ನು ತಿನ್ನುತ್ತಾ, ಕೆಲವು ವೇಳೆಯಲ್ಲಿ ತನ್ನ ಇಛ್ಛಾಮಾತ್ರದಿಂದ ಉತ್ಪನ್ನರಾದ ಬ್ರಹ್ಮಲೋಕಕ್ಕೆ ಅಥವಾ ಈ ಲೋಕಕ್ಕೆ ಸಮ್ಮಂಧಪಟ್ಟ ಸ್ತ್ರೀಯರು ಮೊದಲಾದವರ ಸಂಗಡ ಮನಸ್ಸಿನಿಂದಲೇ ಕ್ರೀಡಿಸುತ್ತಾ, ಸ್ತ್ರೀ ಪುರುಷರ ಅನ್ಯೋನ್ಯ ಸಂಸರ್ಗದಿಂದುಂಟಾಗುವಕಾರಣ, ಅಥವಾ ಆತ್ಮಭಾವದಿಂದ ಆತ್ಮನಿಗೆ ಸಮೀಪವಾಗಿ ಉಂಟಾಗುವದರಿಂದ ಉಪಜನ ಎಂದು ಹೇಳಲ್ಪಡುವ ಈ ಶರೀರವನ್ನು ಸ್ಮರಿಸದೆ ಪರ್ಯಟನ ಮಾಡುತ್ತಿರುತ್ತಾನೆ. ಶರೀರವನ್ನು ಸ್ಮರಣೆ ಮಾಡಿದಪಕ್ಷದಲ್ಲಿ ದುಃಖವೇ ಉಂಟಾದೀತು, ಯಾಕಂದರೆ ಅದು ದುಃಖರೂಪವಾಗಿರುತ್ತದೆ. [(ಈಗ) ಈ ಪುರುಷನು ಅಶರೀರ ಸ್ವರೂಪ, ಮತ್ತು ಅಪಹತಪಾಪ್ಮತ್ವಾದಿ ಲಕ್ಷಣ ಉಳ್ಳವನಾಗಿರುತ್ತಾ, ಇವನು ಕಣ್ಣಿನಲ್ಲಿ ತೋರುತ್ತಾನೆಂದು ಪ್ರಜಾಪತಿಯು ಹೇಗೆ ಹೇಳಿದನೆಂದರೆ, ಆ ಪುರುಷನು ಕಣ್ಣಿನಲ್ಲಿ ಸಾಕ್ಷಾತ್ತಾಗಿ ಹೇಗೆ ಕಂಡುಬರುತ್ತಾನೋ ಆ ರೀತಿಯನ್ನು ತಿಳಿಸಿಕೊಡುವದಕ್ಕಾಗಿ ಮುಂದಿನ ಗ್ರಂಥವನ್ನು ಆರಂಭಿಸೋಣಾಗುತ್ತದೆ. ಈ ಸಂದರ್ಭದಲ್ಲಿ (ಅವನು) ಕಣ್ಣಿನಲ್ಲಿ ಕಂಡುಬರಲಿಕ್ಕೆ ಕಾರಣವೇನೆಂಬದನ್ನು ದೃಷ್ಟಾಂತದೊಡನೆ ಹೇಳೋಣಾಗುತ್ತದೆ.] ಯೋಜನೆ ಮಾಡಲ್ಪಡುವದರಿಂದ ಪ್ರಯೋಗ್ಯವೆಂದರೆ ಕುದುರೆ, ಅಥವಾ ಎತ್ತು ಆಗಿರುತ್ತದೆ. ಇವುಗಳನ್ನು ಲೋಕದಲ್ಲಿ ಒಂದು ರಥಕ್ಕಾಗಲೀ, ಗಾಡಿಗಾಗಲೀ, ಅದನ್ನು ಎಳಿಯುವದಕ್ಕೆ ಹೇಗೆ ಕಟ್ಟುತ್ತಾರೋ, ಹಾಗೆ ರಥಸ್ಥಾನೀಯವಾದ ಈ ಶರೀರದಲ್ಲಿ ಪಂಚವೃತ್ತಿ (೫ ತರಹದ ಕೆಲಸಗಳನ್ನು ಮಾಡುವ) ಇಂದ್ರಿಯಗಳು ಮನಸ್ಸು, ಬುದ್ಧಿ ಇವುಗಳಿಂದ ಕೂಡಿಕೊಂಡಿರುವಂಥಾ ಪ್ರಾಣನೆಂದು ಕರೆಯಲ್ಪಡುವ ಪ್ರಜ್ಞಾತ್ಮನು ವಿಜ್ಞಾನಕ್ರಿಯಾ ಈ ಎರಡು ವಿಧದ ಶಕ್ತಿಗಳೊಡಗೂಡಿದ ರೂಪ ಉಳ್ಳವನಾಗಿ, ತಾನು ಮಾಡಿದ ಕರ್ಮಫಲವನ್ನನುಭವಿಸುವಗೋಸ್ಕರ ಸ್ವಾಮಿ

ಯಾದಅರಸಿನಿಂದ ಒಬ್ಬ ಸರ್ವಾಧಿಕಾರಿಯು ಹೇಗೆ ನೇಮಿಸಲ್ಪಟ್ಟಿರುತ್ತಾನೋ ಅದೇ ರೀತಿ ನೋಡೋಣ, ಕೇಳೋಣ, ಚೇಷ್ಟಾರೂಪವಾದ ವ್ಯಾಪಾರದಲ್ಲಿ ನಿಯೋಜಿಸಲ್ಪಟ್ಟಿರುತ್ತಾನೆ ಎಂದು ವಿವರಿಸುತ್ತಾರೆ.

ಈಗ ಈ ಪ್ರಜಾಪತಿಯ ವಿದ್ಯದ ಉದ್ದಿಶ್ಯವೇನೆಂಬದನ್ನು ಓದುವವರು ತಾವೇ ನಿಶ್ಚಯಿಸಿಕೊಳ್ಳಬಹುದು. ಅದು ಈ ಮೊದಲು ಸೂಚಿಸಿರುವಂತೆ, ಸ್ಪಷ್ಟವಾಗಿ ಈ ಸಂಸಾರಾವಸ್ಥೆಯಲ್ಲಿ ಜಾಗ್ರತ್, ಸ್ವಪ್ನ, ಸುಷುಪ್ತಿಯೆಂಬ ಅವಸ್ಥಾತ್ರಯಕ್ಕೆ ಒಳಪಟ್ಟ ಜೀವನೆಂಬವನು ಯಾರೋ ಅವನೇ ಅಶರೀರಿಯಾದ ಅಪಹತ ಪಾಪ್ಮತ್ವಾದಿ ಗುಣಗಳುಳ್ಳ ಆತ್ಮನೆಂದು ತಿಳಿಸಿಕೊಡುವದೇ ಆಗಿರುತ್ತದೆ.

(೯). ಈ ರೀತಿ ಪ್ರಸ್ತುತ ಪ್ರತ್ಯಗಾತ್ಮನು ಸ್ವಭಾವತಃ ಮೇಲೆ ಹೇಳಿದ ಅವಸ್ಥಾತ್ರಯಕ್ಕೆ ಮಿಕ್ಕವನಾಗಿರುವದರಿಂದಲೇ ನಮ್ಮ ಕಣ್ಣು, ಮೂಗು, ವಾಗಿಂದ್ರಿಯ, ಕಿವಿ, ಮನಸ್ಸು, ಇವುಗಳೆಲ್ಲ ಅವನಿಗೆ ಆಯಾ ವ್ಯಾಪಾರವನ್ನು ನಡಿಸಲಿಕ್ಕೆ ಉಪಯೋಗವಾದ ಸಾಧನಗಳು, ಅವುಗಳನ್ನು ಉಪಯೋಗಿಸುವವನು ಅವನೇ, ಅವುಗಳಿಂದೆಲ್ಲ ತಿಳಕೊಳ್ಳುವವನು ಅವನೇ, ಅವನೇ ಮೇಲೆ ಹೇಳಿದ ಸುಖಗಳನ್ನು ಬ್ರಹ್ಮಲೋಕದಲ್ಲಿ (VII) ತನ್ನ ಇಚ್ಛಾಪ್ರಕಾರ ಅನುಭವಿಸುತ್ತಾ ಸಂತೋಷಪಡುವವನೆಂತಲೂ, (ಆದ್ದರಿಂದ) ಅವನು ಚಾಕ್ಷುಷ ಪುರುಷನು (ಕಣ್ಣಿನಲ್ಲಿ ತೋರುವವನು) ಮತ್ತು ಮನಸ್ಸು ಅವನ ದಿವ್ಯ ದೃಷ್ಟಿಯಾಗಿರುತ್ತದೆ ಎಂಬದಾಗಿ ಸಹ ೪೧–೫೫ನೇ ಶ್ರುತಿಗಳು ಹೇಳುತ್ತವೆ. ಇವುಗಳ ವ್ಯಾಖ್ಯಾನಗಳಲ್ಲಿ—

तस्यैवतुमात्राएकदेशः चक्षुरिन्द्रियं रूपोपलब्धिद्वारभूतं । अथयत्र कृष्णतारोपलक्षितमाकाशं देहच्छिद्रं अनुविषण्णं अनुषक्तं अनुगतं तत्र सः प्रकृतोऽशरीरआत्मा चक्षुषि भवतीति चाक्षुषः तस्यदर्शनायरूपोपलब्धये चक्षुः करणं यस्यतद्देहादिभिः संहतत्वात्परस्य द्रष्टुरर्थे सोऽत्र चक्षुषिदर्शनेन लिंगेनद्रश्यते परोऽशरीरोऽसंहतः । अक्षिणिदृश्यतइात प्रजापतिनोक्तं सर्वेन्द्रियद्वारोपल

ಶಂಕರಾಚಾರ್ಯರು, ರೂಪವನ್ನು ತಿಳಿಯುವದಕ್ಕೆ ದ್ವಾರಭೂತವಾದಂಥಾ ಚಕ್ಷುರಿಂದ್ರಿಯವು ಆ ಪ್ರಾಣನದೇ ಒಂದು ಅಂಶವಾಗಿರುತ್ತದೆ. ಈಗ ಕಣ್ಣಿನಲ್ಲಿರುವ ಕಪ್ಪು ಗೋಳದಿಂದ ಸೂಚಿಸಲ್ಪಡುವ ದೇಹಗತಛಿದ್ರವಾದ ಆಕಾಶವು ಎಲ್ಲಿ ಪ್ರವೇಶಿಸಿಕೊಂಡುಂಟೊ ಅದು ಪ್ರಸ್ತುತ ಶರೀರರಹಿತನಾದಂಥಾ, ಕಣ್ಣಿನಲ್ಲಿರುವ ಸಮ್ಮಂಧ ಚಾಕ್ಷುಷನೆಂದು ಕರೆಯಲ್ಪಡುವ

क्षणार्थे । सर्वविषयोपलब्धाहि स एवेति । स्फुटोपलब्धिहेतुत्वात्तु अक्षिणीति विशेषवचनं सर्वश्रुतिषु ॥ × ॥ अथ अपियोऽस्मिन् देहेवेद कथं? इदंसुगन्धिदुर्गन्धिवाजिघ्राणीति अस्यगन्धं विजानीयामिति स आत्मा तस्य गन्धायगन्धविज्ञानायघ्राणं । अथयोवेदेदं वचनमभिव्याहराणीति वदिष्यामीति स आत्मा अभिव्याहरणक्रियासिद्धये करणं वागिन्द्रियं । अथयोवेदेदं शृण्वानीति स आत्मा श्रवणाय श्रोत्रं ॥

अथयोवेदेदं मन्वानीति मननव्यापारमिन्द्रियासंप्रयुक्तं केवलं मन्वानीतिवेद स आत्मा। योवेद स आत्मेत्येवं सर्वत्रप्रयोगाद्वेदनं अस्य स्वरूपमित्यवगम्यते ॥×॥ दर्शनादिक्रियानिर्वृत्यर्थानितु चक्षुरादि करणानि। इदं चास्यात्मनः सामर्थ्यादवगम्यते । आत्मनः सत्तामात्रतएवज्ञानकर्तृत्वं न तुव्यापृततया। यथासवितुः सत्तामात्रत एव प्रकाशनकर्तृत्वं न तुव्यापृततयेति तद्वत् । मनोऽस्य आत्मनोदैवं अप्राकृतं इतरेन्द्रियैरसाधारणं चक्षुः । चष्टेपश्यत्यनेनेति चक्षुः । वर्तमानकालविषयाणि चेन्द्रियाणि अतोऽदैवानि तानि । मनस्तुत्रिकालविषयोपलब्धिकरणं मृदितदोषञ्च सूक्ष्मव्यवहितादि सर्वोपलब्धिकरणं चेतिदैवं चक्षुरुच्यते । सवैमुक्तः स्वरूपापन्नोऽविद्याकृतदेहेन्द्रियमनोवियुक्तः स र्वात्मभावमापन्नः सन्एष व्योमवद्विशुद्धः स

ಆತ್ಮನು ಇರುವ ಸ್ಥಳವಾಗಿರುತ್ತದೆ. ಅವನಿಗೆ ನೋಡಲಿಕ್ಕೆ ಎಂದರೆ ಬಣ್ಣ ಅಥವಾ ರೂಪ ಅಥವಾ ಇವೆರಡನ್ನೂ ತಿಳಕೊಳ್ಳುವದಕ್ಕೆ ಚಕ್ಷುರಿಂದ್ರಿಯವು ಕರಣವಾಗಿರುತ್ತದೆ. ದೇಹಾದಿಗಳಿಂದ ಕೂಡಿಕೊಂಡಿರುವಕಾರಣ ಯಾವ ನೋಡುವ ಪರಮಾತ್ಮನಿಗೆ ಅದು (ಚಕ್ಷು) ಇಷ್ಟವಾಗಿ ಇದೆಯೋ ಆ ಉತ್ತಮ, ಶರೀರರಹಿತ, ಮತ್ತು ಅಸಂಹತನಾದ(ಬಿಟ್ಟುಕೊಂಡಿರುವ)ವನು ಈ ಕಣ್ಣಿನಲ್ಲಿ ದರ್ಶನರೂಪ ಚಿನ್ಹೆಯಿಂದ ಕಂಡುಬರುತ್ತಾನೆ. [ಕಣ್ಣಿನಲ್ಲಿ ಕಂಡು ಬರುತ್ತಾನೆಂದು ಪ್ರಜಾಪತಿಯು ಹೇಳಿದ್ದು ಸರ್ವೇಂದ್ರಿಯರೂಪವಾದ ದ್ವಾರಗಳ ಉಪಲಕ್ಷಣಕ್ಕೋಸ್ಕರ, ಮತ್ತು ಸಕಲ ವಿಷಯಗಳನ್ನು ತಿಳಕೊಳ್ಳುವವನು ಅವನೇಯಾಗಿರುತ್ತಾನೆಂಬದರಿಂದ ಆಗಿರುತ್ತದೆ. ಪರಂತು ಸಕಲ ಶ್ರುತಿಗಳಲ್ಲಿ ಕಣ್ಣಿನಲ್ಲಿ ಎಂದು ವಿಶೇಷ ವಚನವನ್ನು ಪ್ರಯೋಗಿಸಿದ್ದು ಅದು ಸ್ಪಷ್ಟವಾಗಿ ತಿಳಕೊಳ್ಳುವದಕ್ಕೆ ಹೇತುವಾಗಿರುವದರಿಂದ ಆಗಿರುತ್ತದೆ. ಮತ್ತು ಈ ದೇಹದಲ್ಲಿ] ಫಲಾಣೆ ಸುಗಂಧ ಅಥವಾ ದುರ್ಗಂಧದ ವಾಸನೆಯನ್ನು ಮೂಸುತ್ತೇನೆಂದು ಯಾರು ತಿಳಿಯುತ್ತಾನೋ ಅವನು ಆತ್ಮಾ, ಅವನಿಗೆ ವಾಸನೆ ತಿಳಿಯುವದಕ್ಕೆ ಮೂಗು; ಮತ್ತು ಫಲಾಣೆ ಮಾತನ್ನು ಹೇಳುತ್ತೇನೆಂದು ಯಾರು ತಿಳಿಯುತ್ತಾನೋ ಅವನು ಆತ್ಮಾ,

ीश्वरमनउपाधिः सन्एतेनैव ईश्वरेण मन
्रा एतान् कामान् सवितृप्रकाशवन्नित्यप्रत
ेन दर्शनेन पश्यन्नमते । कान्कामानिति
त्रिशिनष्टि । यएते ब्रह्मलोके हिरण्यनिधि
वद्बाह्यविषयासंगानृतेनापिहिताः संकल्पमा
त्रेणलभ्याः तानित्यर्थः ॥ शं ॥

ಮಾತಾಡುವ ಕೆಲಸ ಸಿದ್ಧಿಯಾಗುವದಕ್ಕೆ ವಾಗಿಂದ್ರಿಯವು ಕರಣ; ಮತ್ತು ಘಲಾಣೆ ಶಬ್ದವನ್ನು ಕೇಳುತ್ತೇನೆಂದು ಯಾರು ತಿಳಿಯುತ್ತಾನೋ ಅವನು ಆತ್ಮಾ, ಕೇಳುವದಕ್ಕೆ ಕಿವಿ.

ಮತ್ತು ಘಲಾಣೆ ವಿಷಯವನ್ನು ಯೋಚಿಸುತ್ತೇನೆ [ಯೋಚನೆ ವ್ಯಾಪಾರವು ಇಂದ್ರಿಯ ಹೊರತಾದದ್ದು. ಆದ್ದರಿಂದ ಕೇವಲ ಯೋಚಿಸುತ್ತೇನೆ] ಎಂದು ಯಾರು ತಿಳಿಯುತ್ತಾನೋ ಅವನು ಆತ್ಮಾ. [ಇಲ್ಲಿ ಯಾರು ತಿಳಿಯುತ್ತಾನೋ ಅವನು ಆತ್ಮಾ ಎಂದು ಸರ್ವತ್ರ ಪ್ರಯೋಗಿಸಿರುವದರಿಂದ ಜ್ಞಾನವು ಅವನ ಸ್ವರೂಪವೆಂದು ತಿಳದುಬರುತ್ತದೆ. ಚಕ್ಷುರಾದಿ ಕರಣಗಳು ನೋಡೋಣ ಮೊದಲಾದ ಕೆಲಸಗಳನ್ನು ನಡಿಸುವಗೋಸ್ಕರವಾಗಿರುತ್ತದೆ. ಈ ಸಂಗತಿ ಆತ್ಮನ ಸಾಮರ್ಥ್ಯದಿಂದ ತಿಳದುಬರುತ್ತದೆ.] ಆತ್ಮಗೆ ಜ್ಞಾನಕರ್ತೃತ್ವವು (ಅವನು) ಇರೋಣ ಮಾತ್ರದಿಂದಲೇ ಉಂಟಾದದ್ದಲ್ಲದೆ, ಆ ಕೆಲಸ ಮಾಡುವದರಿಂದಲ್ಲ. ಹೇಗೆ ಸೂರ್ಯನಿಗೆ (ಉದಯವಾಗಿ) ಇರೋಣಮಾತ್ರದಿಂದ ಬೆಳಕು ಮಾಡುವ ಅಧಿಕಾರ ಉಂಟಾಗಿದೆಯಲ್ಲದೆ, ಬೆಳಕನ್ನು ಮಾಡುವದರಿಂದಲ್ಲವೋ, ಹಾಗೆ ಮನಸ್ಸು ಈ ಆತ್ಮನ ದಿವ್ಯವಾದ ಎಂದರೆ ಪ್ರಾಕೃತವಲ್ಲದ ಮತ್ತು ಇತರೇಂದ್ರಿಯಗಳ ಹಾಗಲ್ಲದ ಚಕ್ಷುರಿಂದ್ರಿಯ (ದೃಷ್ಟಿಯು) ಆಗಿರುತ್ತದೆ. ಯಾವದರಿಂದ ನೋಡುತ್ತಾನೋ ಅದಕ್ಕೆ ಚಕ್ಷು (ಕಣ್ಣು) ಎಂದು ಹೇಳುವದು. ಇಂದ್ರಿಯಗಳು ವರ್ತಮಾನ (ಹಾಲೀ ನಡೆಯುವ) ಕಾಲದ ವಿಷಯಗಳಿಗೆ ಸಮ್ಮಂಧಪಟ್ಟವುಗಳು. ಪರಂತು ಮನಸ್ಸು ತ್ರಿಕಾಲ ವಿಷಯಗಳನ್ನು ತಿಳಕೊಳ್ಳುವದಕ್ಕೆ ಉಪಯೋಗವಾದ ಕರಣ (ಸಾಧನ) ಮತ್ತು ದೋಷರಹಿತವಾದದ್ದು. ಸೂಕ್ಷ್ಮ ಮತ್ತು ದೂರದಲ್ಲಿರುವ ವಸ್ತು ಮೊದಲಾದ ಸಕಲವನ್ನು ತಿಳಿಯುವದಕ್ಕೆ ಕರಣವಾಗಿರುವದರಿಂದ, ದಿವ್ಯವಾದ ದೃಷ್ಟಿ ಎಂದು ಹೇಳಲ್ಪಡುತ್ತದೆ. ಈ ಮುಕ್ತನಾಗಿ ಸ್ವರೂಪವನ್ನು ಪಡದವನು ಅಜ್ಞಾನದಿಂದುಂಟಾದ ದೇಹೇಂದ್ರಿಯ ಮನಸ್ಸು ಇವುಗಳಿಂದ ವಿರಹಿತನಾಗಿ, ಸರ್ವಾತ್ಮಭಾವವನ್ನು ಪಡದು, ಆಕಾಶದಂತೆ ಸ್ವಚ್ಛನಾಗಿ ಎಲ್ಲಕ್ಕೂ ಶ್ರೇಷ್ಟವಾದ ಮನೋರೂಪ ಉಪಾಧಿ ಉಳ್ಳವನಾಗಿ ಆ ಶ್ರೇಷ್ಟವಾದ ಮನಸ್ಸಿನಿಂದಲೇ ಸೂರ್ಯನ ಪ್ರಕಾಶದಂತೆ ನಿತ್ಯ ವ್ಯಾಪಿಸಿಕೊಂಡಿರುವ ದೃಷ್ಟಿಯಿಂದ ಈ ವಿಷಯಗಳನ್ನು ನೋಡುತ್ತಾ ಸಂತೋಷಪಡುತ್ತಾನೆ. ಆ ವಿಷಯಗಳು

ಯಾವವೆಂದರೆ ಹಣವಿನ ಕೊಪ್ಪರಿಗೆಯಂತೆ, ಬಾಹ್ಯ (ಹೊರಗಿನ) ವಿಷಯ ಸಂಪರ್ಕವಿಲ್ಲದ, ಅನೃತದಿಂದ ಆಚ್ಛಾದಿಸಲ್ಪಟ್ಟಿದ್ದಲ್ಲವಾದ, ಮತ್ತು ಸಂಕಲ್ಪಮಾತ್ರದಿಂದ ಲಭ್ಯವಾಗುವಂಥಾ ಬ್ರಹ್ಮಲೋಕದಲ್ಲಿರುವ ವಿಷಯಗಳಾಗಿರುತ್ತವೆ ಎಂದು ವಿವರಿಸುತ್ತಾರೆ.

आकाशं प्रकाशं आलोकादि । अथवा प्रकाश्यमानत्वादाकाशं रूपं। ततश्चायमर्थः। यत्र यस्मिन्नुपकरणत्वेनानुविषण्णं निबद्धं चक्षुः । आकाशं आलोकं रूपंवा, प्रकाशयतीतिशेषः। यद्वा आकाशं रूपादिप्रकाशकमित्यर्थः । सः चाक्षुषः चक्षुरुपकरणकः पुरुषः आत्मेत्यर्थः । चक्षुरुपकरणकमुद्दिश्यपुरुशब्देनात्मत्वं विधीयते । चक्षुस्तुदर्शनाय करणमात्रमित्यर्थः । ततश्च चक्षुरादीनां रूपादीनां आत्मनश्चकरणत्वज्ञेयत्वज्ञातृत्व प्रदर्शनमुखेन शरीरेन्द्रियेभ्यो व्यतिरेक उपपादितो भवति । गन्धग्रहणकरणं घ्राणं ज्ञातात्वात्मेत्यर्थः । अनेन घ्राणेन्द्रियव्यतिरेक उक्तो भवति ॥

सकलेन्द्रियविषयमननसाधनत्वान्मनो दिव्यं चक्षुरुच्यते । × । स एषः उक्तरीत्या शरीरेन्द्रियग्रामाविलक्षणः आत्माविधूतकर्मनिमित्तशरीरेन्द्रियः पुरुषो मनःशब्दाभिहितेन दिव्येन स्वाभाविकेन चक्षुषाज्ञानेन

ರಾಮಾನುಜಾಚಾರ್ಯರು, ಆಕಾಶ ಎಂದರೆ ಪ್ರಕಾಶ, ಬೆಳಕು* ಮೊದಲಾದದ್ದು; ಅಥವಾ ಪ್ರಕಾಶಿಸಲ್ಪಡುವ ಕಾರಣ ಆಕಾಶ ಎಂದರೆ ರೂಪ. ಆದ್ದರಿಂದ ಯಾರಲ್ಲಿ ಚಕ್ಷುರಿಂದ್ರಿಯವು ಸಾಧನರೂಪವಾಗಿ ನಿಬದ್ಧವಾಗಿ ಇದೆಯೋ [ಎಂದರೆ ಪ್ರಭೆ ಅಥವಾ ರೂಪವನ್ನು ತೋರಿಸಿಕೊಡುತ್ತದೋ, ಅಥವಾ ರೂಪಾದಿಗಳನ್ನು ಪ್ರಕಾಶಮಾಡುತ್ತದೋ ಎಂದು ತಾತ್ಪರ್ಯ.] ಆ ಪುರುಷನು ಚಾಕ್ಷುಷ ಎಂದರೆ ಚಕ್ಷುರಿಂದ್ರಿಯವು ಸಾಧನವಾಗಿ ಉಳ್ಳ ಆತ್ಮನೆಂದು ಅರ್ಥ. [(ಇಲ್ಲಿ) ಚಕ್ಷುರಿಂದ್ರಿಯವು ಉಪಕರಣರೂಪವಾಗಿ ಪಡದಿರುವಗೋಸ್ಕರ ಪುರುಷಶಬ್ದದಿಂದ ಆತ್ಮಸ್ವಭಾವವು ವಿಧಿಸಲ್ಪಡುತ್ತದೆ.] ಕಣ್ಣು ನೋಡುವದಕ್ಕೆ ಕರಣ ಮಾತ್ರವಾಗಿರುತ್ತದೆಂದು ಅರ್ಥ. ಇದರಿಂದ ಚಕ್ಷುರಾದೀಂದ್ರಿಯಗಳು, (ರೂಪಾದಿ) ವಿಷಯ, ಆತ್ಮ ಇವುಗಳಿಗೆ (ಕ್ರಮವಾಗಿ) ಕರಣತ್ವ, ಜ್ಞಾನ

---

* ಹಗಲು ಕಣ್ಣು ಕಾಣದ ಗೂಗೆ ಮೊದಲಾದ ಕೆಲವು ಪ್ರಾಣಿಗಳಿಗೆ ರಾತ್ರೆವೇಳೆ ಕತ್ತಲೆಯಲ್ಲಿ ಕಾಣುವದರಿಂದ ಈ "ಮೊದಲಾದ" ಎಂಬ ಶಬ್ದವನ್ನು ಪ್ರಯೋಗಿಸಿರುವದಾಗಿ ತೋರುತ್ತದೆ.

पूर्वोक्तब्रह्मलोकशब्दित दहराकाशनिष्ठान् स र्वान् कामाननुभवन्मोदत इत्यर्थः ॥ ९ ॥

ವಿಷಯತ್ವ, ಜ್ಞಾತೃ(ತಿಳಿಯುವ ಕರ್ತೃ)ತ್ವ ತೋರಿಸಿಕೊಡುವದರ ಮೂಲಕವಾಗಿ (ಆತ್ಮಗೆ) ಶರೀರೇಂದ್ರಿಯಗಳಿಂದ ವ್ಯತಿರಿಕ್ತತ್ವವು ಹೇಳಲ್ಪಡುತ್ತದೆ]. ವಾಸನೆ ತಿಳ ಕೊಳ್ಳುವದಕ್ಕೆ ಉಪಯುಕ್ತವಾದ ಸಾಧನವು ಮೂಗು, (ಅದನ್ನು) ತಿಳಿಯುವವನು ಆತ್ಮನೆಂದು ಅರ್ಥ. ಇದರಿಂದ ಘ್ರಾಣೇಂದ್ರಿಯ ವ್ಯತಿರೇಕವು ಹೇಳಲ್ಪಡುತ್ತದೆ.

ಮನಸ್ಸು ಸಕಲ ಇಂದ್ರಿಯ ವಿಷಯಗಳನ್ನೂ ತಿಳಕೊಳ್ಳುವದಕ್ಕೆ ಸಾಧನವಾಗಿರು ವದರಿಂದ ದಿವ್ಯದೃಷ್ಟಿ ಎಂದು ಹೇಳಲ್ಪಡುತ್ತದೆ. ಮೇಲೆ ಹೇಳಿದಂತೆ ಶರೀರೇಂದ್ರಿಯ ಸಮೂಹವಿಲಕ್ಷಣನಾದ ಈ ಆತ್ಮನೆಂಬ ಪುರುಷನು ಕರ್ಮದಿಂದ ಪ್ರಾಪ್ತವಾದ ಶರೀ ರೇಂದ್ರಿಯಗಳಿಂದ ಮುಕ್ತನಾಗಿ ಮನಸ್ಸೆಂದು ಹೇಳಲ್ಪಡುವ ಸ್ವಾಭಾವಿಕವಾದ ದೃಷ್ಟಿ ಎಂದರೆ ಜ್ಞಾನದಿಂದ ಈ ಮೊದಲು (VII) ಹೇಳಿದ ಬ್ರಹ್ಮಲೋಕವೆಂಬ ದಹರಾ (ಅಲ್ಪಾ) ಕಾಶದಲ್ಲಿ ವಿದ್ಯಮಾನವಾಗಿರುವ ಎಲ್ಲಾ ಸುಖಗಳನ್ನು ಅನುಭವಿಸುತ್ತಾ ಸಂತೋಷ ಪಡುತ್ತಾನೆಂದು ಅರ್ಥವೆಂದು ಹೇಳುತ್ತಾರೆ.

एतच्चक्षुर्यत्रयदधीनं सत् रश्मिभिरा काशमनुविषण्णमभिव्यात्तमस्ति स चाक्षुषः चक्षुः स्वामीपुरुषः हरिः देहाधिष्टातारथिक वदितिभावः । दर्शनायचक्षुः करणमिति यावत् । नतुदेहाधिष्टात्रितिभावः । भगवान् स्वरूपेन्द्रियैः सर्वभोगान् भोक्तुं शक्तोपि ली लया जीवदेहमधिष्टाय स्वकीयेन्द्रियमिलि तैर्जीवदेहगत चक्षुरादीन्द्रियैः पुरुषभोग्यवि षयान् सर्वान् भुङ्क्ते इतितात्पर्यं ज्ञेयं । × । अथयोदेहाधिष्टाता विष्णुः इदं सुगन्धं जिघ्रा णीतिवेद स आत्मादेहस्वामी गन्धायतस्य गन्धज्ञानाय घ्राणमित्यर्थः । एवमग्रेपिज्ञेयं । स आत्मेत्यनन्तरं मननायमनइति पूरणीयं ॥ × ॥ दैवंमनः दैवं चक्षुः देवाधिष्टितमि

ಮಾಧ್ವರು, ಈ ಚಕ್ಷುರಿಂದ್ರಿಯವು ಆದರ ವಿಷಯದಿಂದೊಡಗೂಡಿ ರಶ್ಮಿಗಳ ದ್ವಾರಾ ಯಾರಲ್ಲಿ ಅವನ ಅಧೀನವಾಗಿ ದ್ದುಕೊಂಡು ಪ್ರಕಾಶಮಾನವಾದ ರೂಪ ಕ್ಕೆ ಸಮ್ಮಂಧಪಟ್ಟುಕೊಂಡು ಎಂದರೆ ವ್ಯಾ ಪಿಸಿಕೊಂಡುಂಟೋ ಆ ಚಕ್ಷುರಿಂದ್ರಿಯಕ್ಕೆ ಸ್ವಾಮಿಯಾದ ವಿಷ್ಣುನಾಮಕನಾದ ಹರಿ ಯು ರಥಿಕನಂತೆ ದೇಹದಲ್ಲಿ ಅಧಿಷ್ಟಾನ ನಾಗಿರುವವನು. ಅವನಿಗೆ ನೋಡುವ ದಕ್ಕೆ ಎಂದರೆ ಭೋಗಿಸುವದಕ್ಕೆ ಚಕ್ಷು ರಿಂದ್ರಿಯವು ಕರಣವಲ್ಲದೆ, ದೇಹದಲ್ಲಿ ಅಧಿಷ್ಟಾನವಾಗಿರುವದು ಆ ಇಂದ್ರಿಯ ವೆಂದು ತಾತ್ಪರ್ಯವಲ್ಲ. ಚಾಕ್ಷುಷನೆಂ ಬವನು ಕಣ್ಣಿನಿಂದ ಘಲಾಣೆ ವಸ್ತುವನ್ನು

त्यर्थः । यद्वादैवं तत्तदभिमानिदेवाधिष्ठित मित्यर्थः । अन्येन्द्रियेभ्यो जीवेन्द्रियेभ्यः अनयोः परमात्मेन्द्रियाभिमानिनो दीप्यमानत्वादेते दैवमनश्चक्षुषी भगवतो विषयभोगे मुख्यकारणमित्याह सचाएषइति ॥ २२ ॥

यत्रविष्णौ एतत् आकाशं प्रकाशमानं रूपमनुविषण्णं तत्संबद्धं चक्षुः स्वविषयेण सहचक्षुरिन्द्रियं यत्राश्रितमित्यर्थः यस्य च दर्शनाय भोगायचक्षुः । यश्चपुरुषः चाक्षुषः चक्षुषेदं षश्यामीति स्वातन्त्र्येण वेदनान्यः इदञ्चतद्दर्शनाय चक्षुः कुतइत्याशंकायांत स्यैवतद्भोक्तृत्वानुसंधानवत्वादित्युपपादनार्थमुक्तमितिज्ञातव्यं । एवमग्रेपि । घ्राणादीन्द्रियं तद्भोगाय कुतइत्याशंकायां तस्यैवतत्तद्विषयभोक्तृत्वानुसन्धानवत्वादित्युपपादनाय योवेदेदं जिघ्राणीत्यादिकमितिद्रष्टव्यं । यश्चक्षुरिन्द्रियं तद्विषयादिकंच वेदेत्यपिग्राह्यं । स उत्तमः पुरुषइतिसम्बन्धः । एवं यत्रगन्धादिसहितं घ्राणादि आश्रितं यस्य च गन्धादिभोगाय घ्राणादि यश्चेदं पुष्पादिकं जिघ्राणीत्यादि वेदनान्यः यश्चघ्राणादीन्द्रियं तद्विषयाहिकञ्च सम्यग्वेद स आत्मा उत्तमपुरुषः इतिमननाय मन इत्यन्तं योज्यं । एवं यत्र प्राणे जीवेवास्वस्वविषयसम्बद्धं चक्षुरादीन्द्रियं यस्य च प्राणस्य जीवस्यवा भोगाय चक्षुरादिकं यश्चप्राणो जीवोवा इदं पश्यामीत्याद्यनुसन्धानवान् स आत्मा प्राणो जी

ನೋಡುತ್ತೇನೆಂದು ಸ್ವತಂತ್ರವಾಗಿ ಯಾರು ತಿಳಿಯುತ್ತಾನೋ ಆ ಪುರುಷನಾಗಿರುತ್ತಾನಲ್ಲದೆ ಇನ್ಯಾರೂ ಅಲ್ಲ. ಅವನು ನೋಡುವದಕ್ಕೆ ಚಕ್ಷುರಿಂದ್ರಿಯ(ಕರಣ)ವೆಂದು ಹೇಳಿದ್ದು ಅವನೇ ಅದರಿಂದ ಭೋಗಿಸುವ ಕರ್ತೃಸ್ವಭಾವ ಉಳ್ಳವನೆಂದು ತಿಳಕೊಳ್ಳುವವನಾಗಿರುತ್ತಾನೆಂದು ತಿಳಿಸಿಕೊಡುವ ಗೋಸ್ಕರವಾಗಿರುತ್ತದೆ. ಮುಂದೆಯೂ ಹೀಗೆಯೇ ತಿಳಕೊಳ್ಳಬೇಕು. ಭಗವಂತನು ತನ್ನ ಸ್ವರೂಪಭೂತವಾದ ಇಂದ್ರಿಯಗಳಿಂದ ಸಕಲ ಭೋಗಗಳನ್ನು ಭೋಗಿಸಲಿಕ್ಕೆ ಶಕ್ತನಾಗಿದ್ದರೂ, ಆಟಕ್ಕಾಗಿ ಜೀವನ ದೇಹದಲ್ಲಿ ಅಧಿಷ್ಠಾನನಾಗಿದ್ದುಕೊಂಡು ತನ್ನ ಸ್ವಕೀಯವಾದ ಇಂದ್ರಿಯಗಳಿಂದ ಬೆರಕೊಂಡಿರುವ ಜೀವನ ಶರೀರದಲ್ಲಿರುವ ಚಕ್ಷುರಾದಿ ಇಂದ್ರಿಯಗಳಿಂದ ಪುರುಷ ಭೋಗಕ್ಕೆ ಯೋಗ್ಯವಾದ ಸಕಲ ವಿಷಯಗಳನ್ನು ಭೋಗಿಸುತ್ತಾನೆಂಬ ತಾತ್ಪರ್ಯವನ್ನು ತಿಳಕೊಳ್ಳಬೇಕಾಗಿರುತ್ತದೆ. ಅನಂತರ ಯಾರು ದೇಹಾಧಿಷ್ಠಾತೃವಾಗಿದ್ದುಕೊಂಡು ಫಲಾಣೇ ಸುಗಂಧವನ್ನು ಮೂಸುತ್ತೇನೆಂದು ತಿಳಿಯುತ್ತಾನೋ ಆ ವಿಷ್ಣುವು ಆತ್ಮಾ ಎಂದರೆ ದೇಹಸ್ವಾಮಿ. ಅವನು ಪರಿಮಳವನ್ನು ತಿಳಿಯುವದಕ್ಕೆ ಘ್ರಾಣೇಂದ್ರಿಯವು (ಮೂಗು) ಕರಣವೆಂದು ಅರ್ಥ. ಇದೇ ರೀತಿ ಮುಂದೆಯೂ ತಿಳಿಯತಕ್ಕದ್ದು. ಅವನು ಭೋಗಿಸುವದಕ್ಕೆ

ोवायत्र स उत्तमपुरुषः । इति प्राणजीवप तथापि इदं वाक्यजातं योज्यं । तयोरपि ।थाक्रममनुख्यतया विषयभोक्तृत्वात् । अत्र चक्षुरादि शब्दास्तत्तदभिमानि देवता ।रा अपीति द्रष्टव्यं ॥ ननुएवं जीवेन्द्रियैर्भ ावतो विषयभोगे स्वयमिन्द्रियशून्यः इत्या गमं तथाच सहस्राक्षइत्यादि श्रुतिविरोध इत्यत आह अस्यदैवं चक्षुरिति ॥ अस्यभग वतश्चक्षुरादिकमिन्द्रियं अन्येभ्योदीप्यमान त्वाद्दैवं स्वरूपात्मकमस्तीत्यर्थः ।×। स एष परमात्मा एतेन स्वस्वरूपात्मकेन दैवेन दीप्य मानेन चक्षुषामनसेत्याद्यन्तग्रहणेन सर्वेन्द्रियै रिति सूचितं । जीवेन्द्रियानिविष्टेनेतिशेषः । तथाचस्वकीयेन्द्रियव्याप्तिः जीवेन्द्रियैरेतान् कामान् विषयान् पश्यन्नित्युपलक्षणं जि घ्रन्नित्यादि द्रष्टव्यं । रमते स्वेच्छया ॥ वे ॥

ಘ್ರಾಣಾದಿ ಇಂದ್ರಿಯಗಳು ಯಾವ ಬಗ್ಗೆ ಎಂದರೆ, ಈ ಪರಿಮಳವನ್ನು ಮೂಸುತ್ತೇ ನೆಂದು ಯಾರು ತಿಳಿಯುತ್ತಾನೋ ಎಂಬ ಮೊದಲಾದ ವಾಕ್ಯಗಳ ಮೂಲಕವಾಗಿ ಅವನೇ ಆಯಾ ವಿಷಯವನ್ನು ಭೋಗಿ ಸುತ್ತೇನೆಂದು ತಿಳಕೊಳ್ಳುವವನು ಎಂದು ಸ್ಥಾಪನೆಮಾಡುವಗೋಸ್ಕರವಾಗಿರುತ್ತದೆ; ಮತ್ತು ಚಕ್ಷುರಿಂದ್ರಿಯವನ್ನು, ಮತ್ತು ಇದರ ವಿಷಯವನ್ನು ಸಹ ಯಾರು ತಿಳದಿ ದ್ದಾನೋ ಅವನು ಉತ್ತಮಪುರುಷನು. ಈ ರೀತಿ ಯಾರಲ್ಲಿ ಪರಿಮಳ ಮೊದಲಾದ ಆಯಾ ವಿಷಯಗಳ ಸಹಿತವಾಗಿ ಘ್ರಾ ಣಾದಿ ಇಂದ್ರಿಯಗಳು ಆಶ್ರಯಿಸಿಕೊಂಡಿ ವೆಯೋ, ಯಾರಿಗೆ ಪರಿಮಳ ಮೊದಲಾ ದವುಗಳನ್ನು ಭೋಗಿಸುವಗೋಸ್ಕರ ಘ್ರಾ ಣಾದಿ (ಮೂಗು ಮೊದಲಾದ) ಇಂದ್ರಿಯ ಗಳು ಕರಣಗಳೋ, ಮತ್ತು ಯಾರು ಆಯಾ ವಿಷಯ ಮೊದಲಾದವುಗಳನ್ನು ಪೂರ್ಣ ವಾಗಿ ತಿಳಿಯುತ್ತಾನೋ, ಅವನು ಆತ್ಮನಾದ ಉತ್ತಮಪುರುಷನು. [ಮತ್ತು ಯಾರು ಫಲಾಣೆ ವಿಷಯವನ್ನು ಯೋಚಿಸುತ್ತೇನೆಂದು ತಿಳಕೊಳ್ಳುತ್ತಾನೋ ಅವನು ಆತ್ಮಾ ಎಂದು ಆಗುತ್ತಲೇ "ಯೋಚಿಸುವದಕ್ಕೆ ಮನಸ್ಸು" ಎಂದು ೨೨ನೇ ಶ್ರುತಿಯಲ್ಲಿ ಹೇಳ ಲಿಕ್ಕೆ ಬಿಟ್ಟಿರುವದನ್ನು ಶೇರಿಸಿಕೊಂಡು ಮೇಲೆ ಹೇಳಿದಂತೆಯೇ ಅರ್ಥ ಮಾಡಬೇಕು.] (ಅವನ) ಮನಸ್ಸು ದೇವತಾಸಂಬಂಧವಾದದ್ದು. ಚಕ್ಷುರಿಂದ್ರಿಯವು ದೇವತಾಸಮ್ಮಂಧ ವಾದದ್ದು ಎಂದರೆ ಅವನ ಅಧಿಷ್ಠಾನಉಳ್ಳದ್ದು, ಅಥವಾ ಅದರದರ ಅಭಿಮಾನಿದೇವತೆಗಳ ಅಧಿಷ್ಠಾನ ಉಳ್ಳದ್ದು. ಇತರ ಇಂದ್ರಿಯಗಳಕ್ಕಿಂತಲೂ, ಜೀವನ ಇಂದ್ರಿಯಗಳಕ್ಕಿಂತಲೂ ಈ ಪರಮಾತ್ಮನ ಇಂದ್ರಿಯಾಭಿಮಾನಿಗಳು ಹೆಚ್ಚು ಪ್ರಕಾಶ ಉಳ್ಳವರಾದ ಪ್ರಯುಕ್ತ ಈ ದೇವತಾಸಮ್ಮಂಧವಾದ ಮನಸ್ಸು ಮತ್ತು ಚಕ್ಷುರಿಂದ್ರಿಯ ಕೂಡಾ ಭಗವಂತನು ವಿಷಯಗಳನ್ನನುಭವಿಸುವದಕ್ಕೆ ಮುಖ್ಯವಾದ ಕರಣಗಳೆಂದು ಹೇಳೋಣಾಗುತ್ತದೆ.

ಹೀಗೆ ಯಾವ ಆತ್ಮನಲ್ಲಿ, ಪ್ರಾಣನಲ್ಲಿ ಅಥವಾ ಜೀವನಲ್ಲಿ ತಮ್ಮ ತಮ್ಮ ವಿಷಯುಗಳಿಂದ ಕೂಡಿಕೊಂಡಿರುವಂಥಾ ಚಕ್ಷುರಾದಿ ಇಂದ್ರಿಯಗಳು (ಆಶ್ರಯಿಸಿಕೊಂಡಿವೆಯೋ) ಯಾವ ಆತ್ಮನ, ಪ್ರಾಣನ ಅಥವಾ ಜೀವನ ಭೋಗಕ್ಕೆ ಚಕ್ಷುರಾದಿ ಇಂದ್ರಿಯಗಳು ಕರಣಗಳೋ, ಮತ್ತು ಯಾವ ಆತ್ಮನು ಪ್ರಾಣ ಅಥವಾ ಜೀವನು ಫಲಾಣೀ ವಸ್ತುವನ್ನು ಕಾಣುತ್ತೇನೆ ಎಂಬ ಮೊದಲಾದ ಅನುಸಂಧಾನ ಉಳ್ಳವನೋ, ಆ ಆತ್ಮನು ಪ್ರಾಣ ಅಥವಾ ಜೀವನು ಯಾರಲ್ಲಿ (ಶೇರುತ್ತಾನೋ) ಅವನು ಉತ್ತಮಪುರುಷನು ಎಂದು ಪ್ರಾಣ ಮತ್ತು ಜೀವಪರವಾಗಿ ಕೂಡಾ ಪ್ರಸ್ತುತ ವಾಕ್ಯಕ್ಕೆ ಅರ್ಥ ಹೇಳಬೇಕು. ಯಾಕಂದರೆ ಪ್ರಾಣ, ಜೀವ ಇವರಿಗೆ ಕೂಡಾ ಅವರ ಕ್ರಮಾನುಸಾರವಾಗಿ ಅಮುಖ್ಯವಾಗಿ ವಿಷಯಭೋಗ ಕರ್ತೃತ್ವವು ಇರುತ್ತದೆ. ಇಲ್ಲಿ ಚಕ್ಷುರಾದಿ ಶಬ್ದಗಳು ಅದರದರ ಅಭಿಮಾನಿದೇವತೆಗಳನ್ನು ಕೂಡಾ ಸೂಚಿಸುತ್ತವೆಂದು ತಿಳಕೊಳ್ಳಬೇಕು. ಹೀಗೆ ಭಗವಂತನು ಜೀವನ ಇಂದ್ರಿಯಗಳ ದ್ವಾರಾ ವಿಷಯುಗಳನ್ನು ಭೋಗಿಸುತ್ತಾನೆಂದು ಆದ ಮೇಲೆ ಅವನು ಸ್ವತಃ ಇಂದ್ರಿಯಶೂನ್ಯನೆಂದು ಘಟಿಸಿತಷ್ಟೆ! ಹಾಗಾದರೆ "ಸಹಸ್ರಾಕ್ಷಃ" ಸಾವಿರಾರು ಕಣ್ಣುಗಳುಳ್ಳವನೆಂದು ಹೇಳುವ ಶ್ರುತಿ ಮೊದಲಾದವುಗಳಿಗೆ ವಿರೋಧ ಸಂಭವಿಸಿತು ಎಂದು ಆಕ್ಷೇಪಿಸಿದರೆ, ಆ ಆಕ್ಷೇಪಕ್ಕೆ ಪರಿಹಾರರೂಪವಾಗಿ ದೇವತಾಸಮ್ಮಂಧವಾದ ಚಕ್ಷುರಿಂದ್ರಿಯ ಎಂದು ಹೇಳೋಣಾಗುತ್ತದೆ. ಈ ಭಗವಂತನ ಚಕ್ಷು ಎಂದರೆ ಕಣ್ಣು ಮೊದಲಾದ ಇಂದ್ರಿಯಗಳು ಇತರರ ಇಂದ್ರಿಯಗಳಿಗಿಂತಲೂ (ಹೆಚ್ಚು) ಪ್ರಕಾಶ ಉಳ್ಳವುಗಳಾದ್ದರಿಂದ ದೇವತಾಸಮ್ಮಂಧವಾದವುಗಳು ಎಂದರೆ ಅವನ ಸ್ವರೂಪದಂತೆ ಇರುವವುಗಳು ಎಂದು ಅರ್ಥವಾಗಿರುತ್ತದೆ. (ಇದರಿಂದ) ಈ ಪರಮಾತ್ಮನು ಈ ಸ್ವರೂಪಾತ್ಮಕವಾದ ಪ್ರಕಾಶ ಉಳ್ಳಂಥಾ [ಕಣ್ಣು, ಮನಸ್ಸು ಎಂದು ಆದ್ಯಂತ ಗ್ರಹಣಮಾಡಿರುವದರಿಂದ] ಜೀವನ ಇಂದ್ರಿಯಗಳಲ್ಲಿ ಪ್ರವೇಶಿಸಿಕೊಂಡಿರುವ ಎಂದರೆ ತನ್ನ ಸ್ವಂತ ಇಂದ್ರಿಯಗಳಿಂದ ವ್ಯಾಪ್ತವಾದಂಥಾ ಸಕಲೇಂದ್ರಿಯಗಳಿಂದ ಈ ವಿಷಯಗಳನ್ನು ನೋಡುತ್ತಾ [ಎಂದರೆ ಇದು ಉಪಲಕ್ಷಣವಾದ ಹೇಳಿಕೆಯ್ಯಾದ್ದರಿಂದ] ಮೂಗಿನಿಂದ ಪರಿಮಳ ತಿಳಕೊಳ್ಳೋಣ ಮೊದಲಾದ ಮೂಲಕವಾಗಿ ತನ್ನ ಇಚ್ಛಾಪ್ರಕಾರ (ಸ್ವತಂತ್ರನಾಗಿ) ಸುಖಿಸುತ್ತಾನೆ ಎಂತಲೂ ವಿವರಿಸುವದಲ್ಲದೆ,

ब्रह्मलोके यएतेदेवाः तमेवं आत्मान मुपासते तेषु देवेषु रमतइत्यन्वयः । तस्मा

೨೨ನೇ ಶ್ರುತಿಗೆ ಕೂಡಿರುವ "ಈ ಬ್ರಹ್ಮಲೋಕದಲ್ಲಿರುವ" ಎಂಬ ವಾಕ್ಯವನ್ನು

ाद्दुपासनवत्वात्तेषां सर्वेलोका आत्ता: प्राप्ता:। ोऽधिकारीतमात्मानमनुविद्यशास्त्रतो वि ार्य विजानात्यपरोक्षत: स ज्ञानीसर्वान् लो ान् सर्वांश्च कामानाप्नोतीति प्रजापतिनोक्तं ार्विमनूद्योपसंहरत्युपनिषदितिह प्रजापतिरु ाचेति ॥ रा ॥

ननुएवमशुभविषयभोगोपिभगवत: प्रादित्यतआह यएतइति यएते कामा: ब्र प्रलोके। शुभविषयोपलक्षणमेतत्। तेषुरम इत्यर्थ:। तथाच शुभमात्रभोक्तेतिभाव:। अथवा स्वस्वरूपेन्द्रियैर्जीवेन्द्रियानधिष्ठितै र्विषयभोग: कुत्रेत्यपेक्षायां आह यएतइति। यएते ब्रह्मलोके वैकुंठादौकामा: विषया: सन्तितेषु दैवेन चक्षुषामनसेतरेन्द्रियैश्च स्व रूपभूतैरेव रमतइत्यर्थ: ॥ × ॥ तंअपहतपा प्मत्वादिनोक्तमेतं सर्वभोक्तृत्वेन प्रकृतमा त्मानं परमात्मानं देवा: पूर्वोक्ता वाग्वाद्या: उपासते। तस्मादुपासनासाध्य भगवत्प्रसा दात्तेषां वाग्वादीनां देवानां सर्वेच लोका: जना: भुवनानिच सर्वेकामाश्च आत्ता: अधी ना:। तस्माद्यतनोपि यस्तमुक्तगुणं आ त्मानं श्रवणादिनानुविद्यापरोक्षतो विजाना ति सोपिसर्वान् लोकान् सर्वान् कामांश्चयो ग्यतानुसारेणाप्नोति। एवं प्रजापतिनोक्त मात्मोपदेशं उपसंहरति वेदपुरुष: इतीति। द्विरुक्तिरवधारणार्था ॥ वे ॥

೨೩ ನೇದಕ್ಕೆ ಕೂಡಿಸಿಕೊಂಡು ಅದಕ್ಕೆ ಅವರ (ಮಾಧ್ವರ) ಪೈಕಿ ಒಬ್ಬರು—

ಬ್ರಹ್ಮಲೋಕದಲ್ಲಿರುವ ಯಾವ ದೇವ ತೆಗಳು ಆತ್ಮನನ್ನು ಈ ರೀತಿ ಉಪಾಸನೆ ಮಾಡುತ್ತಾರೋ, ಅವನು ಆ ದೇವತೆಗಳ ಜೊತೆಯಲ್ಲಿ ಕ್ರೀಡಿಸುತ್ತಾನೆಂದು ಅನ್ವಯ ವೆಂತಲೂ;

ಇನ್ನೊಬ್ಬರು ಹಾಗಾದರೆ (ಮೇಲೆ ಹೇಳಿದಂತೆ ಜೀವನ ಇಂದ್ರಿಯಗಳ ದ್ವಾರಾ ವಿಷಯಗಳನ್ನು ಭೋಗಿಸುತ್ತಾನೆಂತಾದರೆ) ಭಗವಂತನಿಗೆ ಅಶುಭ ವಿಷಯ (ದುರ್ಗಂಧ ಇತ್ಯಾದಿ)ಗಳ ಭೋಗವು ಪ್ರಾಪ್ತವಾದೀತೆಂಬದರಿಂದ ಶ್ರುತಿಯು ಹೇಳುವದೇನಂದರೆ–ಅವನು ಬ್ರಹ್ಮಲೋಕದಲ್ಲಿರುವ ಶುಭ ವಿಷಯಗಳನ್ನು ಅನುಭವಿಸುತ್ತಾನೆಂದು ಅರ್ಥ. ಆದ್ದರಿಂದ ಶುಭವನ್ನು ಮಾತ್ರ ಅನುಭವಿಸುತ್ತಾನೆಂದು ಭಾವವಾಗಿರುತ್ತದೆ. ಹಾಗಲ್ಲವಾದರೆ ಜೀವನ ಇಂದ್ರಿಯಗಳಲ್ಲಿ ಅಧಿಷ್ಠಾನವಾಗಿ ಇಲ್ಲದ ತನ್ನ ಸ್ವರೂಪೇಂದ್ರಿಯಗಳಿಂದ ಭಗವಂತನು ವಿಷಯಗಳನ್ನು ಭೋಗಿಸುವದು ಎಲ್ಲಿ? ಎಂದರೆ ವೈಕುಂಠಾದಿ ಸ್ಥಾನಗಳಲ್ಲಿ ಯಾವ ವಿಷಯಗಳು ಇದ್ದಾವೋ ಆ ವಿಷಯಗಳನ್ನು ತನ್ನ ಸ್ವರೂಪಭೂತವಾದ ದೃಷ್ಟಿ, ಮನಸ್ಸು, ಇತರ ಇಂದ್ರಿಯಗಳು ಇವುಗಳಿಂದೆಲ್ಲ ಅನುಭವಿಸುತ್ತಾನೆಂದು ಶ್ರುತ್ಯರ್ಥವಾಗಿರುತ್ತದೆ ಎಂತಲೂ ಹೇಳುವದಲ್ಲದೆ;

ಮಿಕ್ಕ ಪ್ರಸ್ತುತ ೩೩ನೇ ಶ್ರುತಿಯು ಕುರಿತು ಅಪಹತ ಪಾಪ್ಮತ್ವಾದಿ ಗುಣಗಳೊಂದಿಗೆ ಹೇಳಲ್ಪಟ್ಟ ಸಕಲವನ್ನೂ ಅನುಭವಿಸುವ ಸ್ವಭಾವರೂಪದಿಂದ ಪ್ರಕೃತನಾದ ಪರ ಮಾತ್ಮನನ್ನು ಈ ಮೊದಲು ಹೇಳಿದ ವಾಯ್ವಾದಿ ದೇವತೆಗಳು ಉಪಾಸನೆ ಮಾಡು ತ್ತಾರೆ. ಆದಕಾರಣ ಅವರು ಉಪಾಸನಾ ಉಳ್ಳವರಾದ ಪ್ರಯುಕ್ತ ಎಂದರೆ ಉಪಾ ಸನೆಯಿಂದ ದೊರಕುವ ಭಗವಂತನ ಅನುಗ್ರಹ ಉಳ್ಳವರಾದ ಪ್ರಯುಕ್ತ ಆ ವಾಯು ಮೊದಲಾದ ದೇವತೆಗಳಿಗೆ ಸಕಲ ಲೋಕಗಳು ಎಂದರೆ ಜನಗಳು ಜಗತ್ತುಗಳು ಮತ್ತು ಸಕಲ ವಿಷಯಗಳು ಸಹಾ ಪ್ರಾಪ್ತ ಎಂದರೆ ಸ್ವಾಧೀನವಾಗಿ ಇವೆ, ಆದ್ದರಿಂದ ಈ ಕಾಲದ ಅಧಿಕಾರಿಯಾದ ಯಾವಾತನು ಆ ಉಕ್ತ (ಹೇಳಲ್ಪಟ್ಟ) ಗುಣವಿಶಿಷ್ಟನಾದ ಆತ್ಮನನ್ನು ಶಾಸ್ತ್ರಶ್ರವಣಮೂಲಕವಾಗಿ ವಿಚಾರಿಸಿ ತಿಳಕೊಂಡು, ಪ್ರತ್ಯಕ್ಷ ಕಂಡು ಕೊಳ್ಳುತ್ತಾನೋ ಅಂಥಾ ಜ್ಞಾನಿ ಕೂಡಾ ತನ್ನ ಯೋಗ್ಯತಾನುಸಾರವಾಗಿ ಸಕಲ ಲೋಕಗಳನ್ನೂ, ಸಕಲ ವಿಷಯಗಳನ್ನೂ ಪಡಿಯುತ್ತಾನೆಂದು ಪ್ರಜಾಪತಿ ಹೇಳಿದ್ದ ನ್ನೆಲ್ಲ ಎಂದರೆ ಅವನು ಮಾಡಿದ ಆತ್ಮೋಪದೇಶವನ್ನು ವೇದಪುರುಷನು ಪೂರ್ತಿಮಾ ಡುವದಕ್ಕಾಗಿ ಪ್ರಜಾಪತಿಯು ಹೇಳಿದನೆಂದು ಎರಡು ಸಲ ಹೇಳುತ್ತಾನೆ ಎಂದು ವಿವರಿ ಸುತ್ತಾರೆ.

एतादृशात्मस्वरूपस्य प्रजापतिनामघवते उपदिष्टत्वात् देवाः सर्वे मघवतः एतमात्मानं उपश्रुत्यतमेवोपासते । अतः तेषां सर्वलोकसर्वकामावाप्त्युपलक्षितब्रह्मानुभवो भवति । असुराणान्तुनतथेतिभावः । × । अद्यत्वेपि मनुष्याणामपि तमात्मानं श्रुत्वा उपासीनानां सर्वलोकसर्वकामावाप्तिर्भवतीत्यर्थः । अत्रकिं प्रमाणमित्यत्राह "इतिप्रजापतिरुवाच प्रजापतिरुवाचेति" । अत्रप्रत्यगात्मविद्यायाः ब्रह्मविद्याङ्गत्वेन अङ्गीभूतब्रह्मविद्याफलमेव तदङ्गभूतप्रत्यगात्मविद्यायां स्तुत्यर्थं निर्दिश्यतइतिद्रष्टव्यं ॥ रं ॥

ರಂಗರಾಮಾನುಜಾಚಾರ್ಯರು, ಈ ತರಹದ ಆತ್ಮನ ಸ್ವರೂಪವು ಪ್ರಜಾಪತಿ ಯಿಂದ ಇಂದ್ರಗೆ ಉಪದಿಷ್ಟವಾದದ್ದಾದ ಕಾರಣ, ದೇವತೆಗಳೆಲ್ಲರೂ ಇಂದ್ರನಿಂದ ಈ ಆತ್ಮನನ್ನು ತಿಳದವರಾಗಿ ಉಪಾಸಿಸು ತ್ತಾರೆ. ಆದಕಾರಣ ಅವರಿಗೆ ಸಕಲ ಲೋಕಗಳು ಮತ್ತು ಸಕಲ ವಿಷಯಗಳು ಇವುಗಳಿಂದ ಉಪಲಕ್ಷಿತವಾದ (ಸೂಚಿಸ ಲ್ಪಡುವ) ಬ್ರಹ್ಮಾನುಭವವು ದೊರಿಯು ತ್ತದೆ, ಅಸುರರಿಗೆ ದೊರಿಯುವದಿಲ್ಲ ಎಂ ದು ಭಾವವಾಗಿರುತ್ತದೆ. ಈ ಕಾಲದ ಮನುಷ್ಯರು ಕೂಡಾ ಆ ಆತ್ಮನನ್ನು ಕೇಳಿ ಕೊಂಡು ಉಪಾಸನೆ ಮಾಡಿದಪಕ್ಷದಲ್ಲಿ ಅವರಿಗೆ ಸಕಲ ಲೋಕಗಳು, ಸಕಲ ವಿಷಯು

ಗಳು ಪ್ರಾಪ್ತವಾಗುತ್ತವೆ ಎಂದು ಅರ್ಥ. ಇದಕ್ಕೆ ಪ್ರಮಾಣವೇನು ಎಂದರೆ, ಈ ರೀತಿ ಪ್ರಜಾಪತಿ ಹೇಳಿದನು—ಪ್ರಜಾಪತಿಯು ಹೇಳಿದನು ಎಂದು ಹೇಳುವದೇ ಆಗಿರುತ್ತದೆ. ಇಲ್ಲಿ (ಈ) ಪ್ರತ್ಯಗಾತ್ಮ ವಿದ್ಯವು ಬ್ರಹ್ಮವಿದ್ಯದ ಅಂಗ (ಅವಯವ)ವಾಗಿರುವದರಿಂದ ಅಂಗಿಯಾದ (ಶರೀರಭೂತವಾದ) ಬ್ರಹ್ಮವಿದ್ಯದಿಂದುಂಟಾಗುವ ಫಲವು ಅದರ ಅಂಗ ಭೂತವಾದ (ಈ) ಪ್ರತ್ಯಗಾತ್ಮ ವಿದ್ಯದಲ್ಲಿ ಹೇಳಿದ್ದು ಸ್ತುತಿ (ಹೊಗಳಿಕೆ)ಗೋಸ್ಕರ (ಮಾತ್ರ)ವೆಂದು ತಿಳಕೊಳ್ಳಬೇಕಾಗಿರುತ್ತದೆ ಎಂದು ಹೇಳುತ್ತಾರೆ.

यस्मादेषइन्द्राय प्रजापतिनोक्त आत्मा ततः श्रुत्वातमात्मानं अद्यत्वेपि देवा उपासते । तदुपासनाच्चतेषां सर्वेच लोका आप्ताः प्राप्ताः सर्वेचकामाः । यदर्थेहीन्द्रः एकशतं वर्षाणि प्रजापतौ ब्रह्मचर्यमुवास तत्फलं प्राप्तं देवैरित्यभिप्रायः । तद्युक्तं देवानां महा भाग्यत्वात् । नत्विदानीं मनुष्याणां अल्पजीवितत्वान्मन्दतरप्रज्ञत्वाच्च संभवतीति प्राप्ते इदमुच्यते स सर्वांश्च लोकानाप्नोति सर्वांश्चकामानिदानीन्तनोपि । कोऽसौ? इन्द्रादिवद्यस्तमात्मानं अनुविद्यविजानाती ति ह सामान्येन किलप्रजापतिरुवाच । अतः सर्वेषां आत्मज्ञानं तत्फलप्राप्तिश्च तुल्यैव भवतीत्यर्थः । द्विर्वचनं प्रकरणसमाप्त्यर्थं ॥ ॥ शं ॥

ಶಂಕರಾಚಾರ್ಯರು, ಈ ಆತ್ಮನು ಪ್ರಜಾಪತಿಯಿಂದ ಇಂದ್ರಗೆ ಉಪದೇಶಿಸಲ್ಪಟ್ಟವನಾದಕಾರಣ, ದೇವತೆಗಳು ಇವನನ್ನು ಇಂದ್ರನ ಮುಖದಿಂದ ತಿಳಕೊಂಡು ಅದ್ಯಾಪಿ ಉಪಾಸನೆ ಮಾಡುತ್ತಾರೆ. ಆ ಉಪಾಸನೆ ದೆಸೆಯಿಂದ ಅವರಿಗೆ ಸಕಲ ಲೋಕಗಳು ಸಕಲ ವಿಷಯಗಳು ಪ್ರಾಪ್ತವಾಗಿವೆ. ಯಾವಗೋಸ್ಕರ ಇಂದ್ರನು ೧೦೧ ವರ್ಷ ಪ್ರಜಾಪತಿಯಲ್ಲಿ ಬ್ರಹ್ಮಚರ್ಯವನ್ನು ಮಾಡಿಕೊಂಡಿದ್ದನೋ ಆ ಪ್ರಯೋಜನವು ದೇವತೆಗಳಿಗೆ ದೊರಕಿತು ಎಂದು ಅಭಿಪ್ರಾಯವಾಗಿರುತ್ತದೆ. ದೇವತೆಗಳಿಗೆ ಅದು ಯೋಗ್ಯವಾದದ್ದು ಯಾಕಂದರೆ ಅವರು ಮಹಾ ಭಾಗ್ಯವಂತರಾಗಿರುತ್ತಾರೆ. ಹಾಗಾದರೆ ಬಹುಸ್ವಲ್ಪ ಕಾಲ ಬದುಕಿರುವ ಮತ್ತು ಮಂದ ಬುದ್ಧಿಯುಳ್ಳವರಾದ ಈ ಕಾಲದ ಮನುಷ್ಯರಿಗೆ ಆ ಫಲ ದೊರಕುವದಿಲ್ಲ ಎಂದು ಪಾಪ್ತವಾಗುವದಾದರೆ ಅದಕ್ಕೆ ಪರಿಹಾರರೂಪವಾಗಿ ಹೇಳುವದೇನಂದರೆ:—ಈ ಕಾಲದ ಮನುಷ್ಯನಾರೂ ಕೂಡಾ ಸಕಲ ಲೋಕಗಳನ್ನೂ, ಸರ್ವ ವಿಷಯಗಳನ್ನೂ ಪಡಿಯುತ್ತಾನೆ. ಯಾವಾತ (ಅವುಗಳನ್ನು ಪಡಿಯುವವನು)? ಎಂದರೆ ಇಂದ್ರಾದಿಗಳಂತೆ ಯಾರು ಆ ಆತ್ಮನನ್ನು ತಿಳದು ಕಂಡುಕೊಳ್ಳುತ್ತಾನೋ ಅವನು ಎಂದು ಸಾಮಾನ್ಯವಾಗಿ ಪ್ರಜಾಪತಿಯು ಹೇಳಿದನೆಂದು ಹೇಳೋ

ಣಾಗುತ್ತದೆ. ಆದಕಾರಣ ಎಲ್ಲರಿಗೂ ಆತ್ಮಜ್ಞಾನ ಮತ್ತು ಅದರಿಂದುಂಟಾಗುವ ಫಲಪ್ರಾಪ್ತಿ ಕೂಡಾ ಸರಿಯಾಗಿ ಆಗುತ್ತದೆ (ಅವುಗಳಲ್ಲಿ ಹೆಚ್ಚು ಕಡಿಮೆ ಇಲ್ಲ) ಎಂದು ಅರ್ಥವಾಗಿರುತ್ತದೆ. ಪ್ರಜಾಪತಿಯು ಹೇಳಿದನೆಂದು ಕಡೆಯಲ್ಲಿ ಎರಡು ಸಲ ಹೇಳಿದ್ದು ಪ್ರಕರಣ ಸಂಪೂರ್ಣ ಮಾಡುವ ಬಗ್ಯಾಗಿರುತ್ತದೆ ಎಂದು ಹೇಳುತ್ತಾರೆ.

## XII ನೇ ಪಾಠ.

## ಪರಿಶೇಷ.



|| शिष्यः ||

(१) केनेषितं पततिप्रेषितं मनः ।
केनप्राणः प्रथमः प्रैतियुक्तः ॥
केनेषितांवाचमिमांवदन्ति ।
चक्षुः श्रोत्रंकउदेवो युनक्ति ॥ (१-१)

ಶಿಷ್ಯನು.

(೧) ಯಾರ ಇಚ್ಛೆ (ಮತ್ತು) ಅಪ್ಪಣೆ ಪ್ರಕಾರ ಮನಸ್ಸು (ವಿಷಯುಗಳನ್ನು ಕುರಿತು) ಹೋಗುತ್ತದೆ? ಯಾರಿಂದ ಮೊದಲನೇದಾದ ಪ್ರಾಣ (ಶ್ವಾಸ)ವು ನಿಯೋಜಿಸಲ್ಪಟ್ಟು ಚಲಿಸುತ್ತದೆ? ಯಾರ ಇಚ್ಛೆಪ್ರಕಾರ ಜನಗಳು ಈ ಮಾತನ್ನಾಡುತ್ತಾರೆ? ಕಣ್ಣು, ಕಿವಿ, ಇವುಗಳನ್ನು ಯಾವ ದೇವತೆ (ಆಯಾಯ ಕೆಲಸಗಳಲ್ಲಿ) ನಿಯೋಜಿಸುತ್ತದೆ?

|| गुरुः ||

(२) श्रोत्रस्य श्रोत्रं मनसोमनोय ।
द्वाचोहवाचं स उप्राणस्य प्राण ॥
श्चक्षुषश्चक्षुरतिमुच्यधीराः ।
प्रेत्यास्माल्लोकादमृता भवन्ति ॥
(१-२)

ಗುರುಗಳು.

(೨) ಅದು ಯಾರು ಕಿವಿಗೆ ಕಿವಿ, ಮನಸ್ಸಿಗೆ ಮನಸ್ಸು, ವಾಕ್ಕಿಗೆ (ಆ ಹೆಸರಿನ ಇಂದ್ರಿಯಕ್ಕೆ) ವಾಕ್, ಪ್ರಾಣಕ್ಕೆ ಪ್ರಾಣ, ಕಣ್ಣಿಗೆ ಕಣ್ಣು (ಆಗಿರುವನೋ) ಅವನೇ. ಜ್ಞಾನಿಗಳಾದವರು ಅವುಗಳನ್ನು ತೊರದು ಮೃತಪಟ್ಟು ಈ ಲೋಕದಿಂದ ಹೋದಪಕ್ಷದಲ್ಲಿ, ಅಮೃತ (ಸಾವಿಲ್ಲದವ)ರಾಗುವರು.

(३) नतत्रचक्षुर्गच्छति न वाग्गच्छति नोमनो । नविद्मो न विजानीमो यथैतदनुशिष्यात् ॥ (१–३)

(೩) ಕಣ್ಣು ಅದರ ಹತ್ತರ ಹೋಗುವದಿಲ್ಲ, ವಾಕ್ ಹೋಗುವದಿಲ್ಲ, ಮನಸ್ಸು (ಹೋಗುವದಿಲ್ಲ). ಇದನ್ನು ಹೇಗೆ ತಿಳಿಸಿಕೊಡಬಹುದೆಂಬದು ನಮಗೆ ತೋರುವದಿಲ್ಲ.

(४) अन्यदेवतद्विदितादथो अविदितादधि । इतिशुश्रुम पूर्वेषां येनस्तद्व्याचचक्षिरे ॥ (१–४)

(೪) ಅದು ತಿಳದುಬಂದದ್ದರಕ್ಕಿಂತ ಬೇರೆ; ಆದರೆ ತಿಳದುಬಾರದೇ ಇದ್ದದ್ದಕ್ಕೆ ಮಿಕ್ಕದ್ದೆಂದು ನಮಗೆ ಅದನ್ನು ವಿವರಿಸಿದ ಪೂರ್ವಿಕರು ಹೇಳುವದು ಕೇಳಿದ್ದೇವೆ.

(५) यद्वाचानभ्युदितं येनवागभ्युद्यते । तदेवब्रह्मत्वं विद्धि नेदं यदिदमुपासते ॥ (१–५)

(೫) ಮಾತಿನಿಂದ ಯಾವದು ಪ್ರಕಟಿಸಲ್ಪಡುವದಿಲ್ಲವೋ, ಯಾವದರಿಂದ ಮಾತು ಉಚ್ಚರಿಸಲ್ಪಡುತ್ತದೋ ಅದೇ ಬ್ರಹ್ಮವೆಂದು ನೀನು ತಿಳಿ. (ಜನರು) ಉಪಾಸಿಸುವ ಇದು (ಎನ್ನುವದು) ಅಲ್ಲ.

(६) यन्मनसानमनुते येनाहुर्मनोमतं। तदेवब्रह्मत्वं विद्धि नेदं यदिदमुपासते ॥ (१–६)

(೬) ಮನಸ್ಸಿನಿಂದ ಯಾವದು ಯೋಚಿಸುವದಿಲ್ಲವೋ ಯಾವದರಿಂದ ಮನಸ್ಸು ಯೋಚಿಸುತ್ತದೆಂದು ಹೇಳುತ್ತಾರೋ, ಅದೇ ಬ್ರಹ್ಮವೆಂದು ನೀನು ತಿಳಿ. (ಜನರು) ಉಪಾಸಿಸುವ ಇದು (ಎನ್ನುವದು)ಅಲ್ಲ.

(७) यच्चक्षुषानपश्यति येनचक्षूंषि पश्यति । तदेवब्रह्मत्वं विद्धि नेदं यदिदमुपासते ॥ (१–७)

(೭) ಕಣ್ಣಿನಿಂದ ಯಾವದು ನೋಡುವದಿಲ್ಲವೋ ಯಾವದರಿಂದ ಕಣ್ಣುಗಳು ನೋಡುತ್ತವೋ, ಅದೇ ಬ್ರಹ್ಮವೆಂದು ನೀನು ತಿಳಿ. (ಜನರು) ಉಪಾಸಿಸುವ ಇದು (ಎನ್ನುವದು) ಅಲ್ಲ.

(८) यच्छ्रोत्रेण न शृणोति येन श्रोत्रमिदं श्रुतं । तदेवब्रह्मत्वं विद्धि नेदं यदिदमुपासते ॥ (१–८)

(೮) ಕಿವಿಯಿಂದ ಯಾವದು ಕೇಳುವದಿಲ್ಲವೋ, ಯಾವದರಿಂದ ಕಿವಿಗಳು ಶ್ರವಣಮಾಡುತ್ತವೋ ಅದೇ ಬ್ರಹ್ಮವೆಂದು ನೀನು ತಿಳಿ. (ಜನರು) ಉಪಾಸಿಸುವ ಇದು (ಎಂಬದು) ಅಲ್ಲ.

(९) यत्प्राणेन न प्राणिति येनप्राणः प्रणीयते । तदेवब्रह्मत्वं विद्धि नेदं यदिदमुपासते ॥ (१–९)

(೯) ಯಾವದು (ಈ) ಶ್ವಾಸದಿಂದ ಶ್ವಾಸ ಬಿಟ್ಟುಕೊಂಡಿಲ್ಲವೋ, ಯಾವದರಿಂದ ಶ್ವಾಸವು ಚಲಿಸಿಕೊಂಡುಂಟೋ,

ಅದೇ ಬ್ರಹ್ಮವೆಂದು ನೀನು ತಿಳಿ. (ಜನರು) ಉಪಾಸಿಸುವ ಇದು (ಎಂಬದು) ಅಲ್ಲ.

॥ गुरुः ॥

(१०) *यदिमन्यसे सुवेदेति दहरमेवा । पिनूनं त्वंवेत्थब्रह्मणोरूपं यदस्य ॥ (२–१)

ಗುರುಗಳು.

(೧೦) ಈ ಬ್ರಹ್ಮದ ರೂಪವನ್ನು "ನಾನು ಚನ್ನಾಗಿ ಬಲ್ಲೆ" ಎಂದು ನೀನು ತಿಳಕೊಳ್ಳುತ್ತೀಯಾದರೆ, ನಿಶ್ಚಯವಾಗಿ ನೀನು (ಅದನ್ನು) ಸ್ವಲ್ಪವೇ ತಿಳಿದಿರುತ್ತೀ.

॥ शिष्यः ॥

(११) नाहंमन्येसुवेदेतिनो न वेदे

ಶಿಷ್ಯನು.

(೧೧) ನಾನು ಚನ್ನಾಗಿ ತಿಳಿದಿದ್ದೇ

---

* ಈ ಶ್ಲೋಕದ ಪಾಠಗಳು ವಿವಿಧವಾಗಿರುತ್ತವೆ. ಶಂಕರಾಚಾರ್ಯರ ಮತ್ತು ರಾಮಾನುಜಾಚಾರ್ಯರ ಪಾಠಗಳಲ್ಲಿ दहर ಶಬ್ದದ ಬದಲಿಗೆ दभ्र ಈ ಶಬ್ದವನ್ನು ಪ್ರಯೋಗಿಸಿರುವದಲ್ಲದೆ त्वंयदस्य देवेष्वथनुमीमांस्यमेवते मन्येविदितं (ದೇವತೆಗಳಲ್ಲಿರುವಂಥಾ ನಿನಗೆ ತಿಳಿದುಬಂದಿರುವ ಅದರ ರೂಪ ಕೂಡಾ ನೀನು ವಿಚಾರಿಸತಕ್ಕದ್ದಾಗಿಯೇ ಇರುತ್ತದೆಂದು ನಾನು ಎಣಿಸುತ್ತೇನೆ) ಎಂಬ ವಾಕ್ಯವು ಅದರ ಅಂತ್ಯದಲ್ಲಿ ಸೇರಿಕೊಂಡುಂಟು. ಮಾಧ್ವರ ಪಾಠದಲ್ಲಿ दहर ಶಬ್ದಕ್ಕೆ ಅದನ್ನೇ ಪ್ರಯೋಗಿಸಿರುವವಲ್ಲದೆ ಕಡೆಯಲ್ಲಿರುವ ಮೇಲೆ ಹೇಳಿದ ವಾಕ್ಯದಪೈಕಿ मन्येविदितं ಎಂಬ ಈಶಬ್ದಗಳು ಮಾತ್ರ ಈ ಶ್ಲೋಕದಲ್ಲಿಲ್ಲ, ಮುಂದಿನ ೧೧ನೇ ಶ್ಲೋಕದ ಆರಂಭದಲ್ಲಿ ಸೇರಿಕೊಂಡಿವೆ. ಮಿಕ್ಕ ಶಬ್ದಗಳೆಲ್ಲ ಈ ಶ್ಲೋಕಕ್ಕೇನೇ ಕೂಡಿಕೊಂಡಿರುತ್ತವೆ. ಪ್ರೊಫೆಸ್ಸರ್ ಮೆಕ್ಸ-ಮೂಲರ್ ಎಂಬ ವಿದ್ವಾಂಸರು दहर ಶಬ್ದವೇ ಹಳೇ ಪ್ರಯೋಗವಾಗಿರಬೇಕೆಂತಲೂ ಪ್ರಸ್ತುತ ಶ್ಲೋಕದಲ್ಲಿ ಛಂದಸ್ (ವೃತ್ತ) ಸರಿಯಾಗಬೇಕಾದರೆ त्वंयदस्य ಎಂಬ ಶಬ್ದಗಳನ್ನಾರಂಭಿಸಿಕೊಂಡು मीमांस्यमेव ಎಂಬಲ್ಲಿ ವರೇಗಿನ ಅಕ್ಷರಗಳನ್ನು ಈ ಶ್ಲೋಕದಿಂದ ತೆಗದು ಹಾಕಬೇಕೆಂತಲೂ ಹೇಳುವದಲ್ಲದೆ, ದೇವತೆಗಳಿಗೂ ಬ್ರಹ್ಮಕ್ಕೂ ಸಮ್ಮಂಧ ತೋರಿಸುವ ೩ನೇ ಖಂಡವನ್ನು ಪ್ರಸ್ತುತ ಉಪನಿಷತ್ತಿಗೆ (ಕೇನಕ್ಕೆ) ಕೂಡಿಸುವಗೋಸ್ಕರ, ಅವುಗಳನ್ನು ಮತ್ತೆ ಸೇರಿಸಿರಬೇಕೆಂದು ಅಭಿಪ್ರಾಯ ಪಡುತ್ತಾರೆ. ಮಿಕ್ಕ तेमन्येविदितम् ಎಂಬ ಇಷ್ಟು ಅಕ್ಷರಗಳು ಅವರ ಪ್ರತಿಯಲ್ಲಿ ಇಲ್ಲವೇ ಇಲ್ಲ ಎಂದು ತೋರುತ್ತದೆ. (I. X. C. I.) ನಮ್ಮ ಈ ಪುಸ್ತಕವು ಹೆಚ್ಚಾಗಿ ಆಧ್ಯಾತ್ಮ ವಿಚಾರಕ್ಕೆ ಮಾತ್ರ ಸಮ್ಮಂಧಪಟ್ಟದ್ದಾದ್ದರಿಂದಲೂ दभ्र ದ ಬದಲಾಗಿ दहर ಶಬ್ದವನ್ನು ಪ್ರಯೋಗಿಸಿದರೆ ಅರ್ಥವ್ಯತ್ಯಾಸವಾಗದೇ ಇರುವದು ಮಾತ್ರವಲ್ಲದೆ, ಮೇಲೆ ಕಾಣಿಸಿದ ವಾಕ್ಯವನ್ನು ಪ್ರಸ್ತುತ ಶ್ಲೋಕದಿಂದ ತೆಗದು ಹಾಕಿದಪಕ್ಷದಲ್ಲಿ ದೊರಕುವ ಅದರ ಛಂದಸ್ಸು, ಈ ಪಾಠದ ೫ನೇ ಶ್ಲೋಕದ ಪೂರ್ವಾರ್ಧದ ಛಂದಸ್ಸಿಗೆ ಸರಿಬೀಳುವದರಿಂದ ಕೂಡಾ ೮ ಪೂರಾ ವಾಕ್ಯವನ್ನು ಈ ಪಾಠದಲ್ಲಿ ಬಿಟ್ಟುಬಿಡೋಣಾಗಿರುತ್ತದೆ. ಇದರಿಂದ ೧೧ನೇ ಶ್ಲೋಕದ ಛಂದಸ್ಸು ೧೨ನೇದರ ಛಂದಸ್ಸಿಗೆ ಸರಿಯಾಗಿ ದೊರಕಿರುತ್ತದೆ.

तिषेदच । योनस्तद्वेदतद्वेदनो न वेदेति वेद च ॥ (२–२)

ನೆಂದು ತಿಳಕೊಳ್ಳುವದಿಲ್ಲ, ತಿಳಿಯಲಿಲ್ಲೆಂದು ತಿಳಕೊಳ್ಳುವದೂ ಇಲ್ಲ. ನಮ್ಮ ಪೈಕಿ ಯಾರು ಅದನ್ನು "ನಾನು ತಿಳಿಯಲಿಲ್ಲೆಂದು ತಿಳಕೊಳ್ಳುವದೂ ಇಲ್ಲ"ಎಂಬದ(ರ ಅರ್ಥವ)ನ್ನು ತಿಳದಿದ್ದಾನೋ, ಅವನು ಅದನ್ನು (ಬ್ರಹ್ಮವನ್ನು) ತಿಳದವನಾಗಿರುತ್ತಾನೆ.

(१२) यस्यामतं तस्यमतं मतं यस्य न वेदसः । अविज्ञातं विजानतां विज्ञातम विजानतां ॥ (२–३)

(೧೨) ಯಾರ ಮನಸ್ಸಿಗೆ ಗೊತ್ತಾಗಲಿಲ್ಲವೋ, ಅವನಿಗೆ ಗೊತ್ತಾಗಿ ಇದೆ; ಯಾರ ಮನಸ್ಸಿಗೆ ಗೊತ್ತಾಗಿದೆಯೋ, ಅವನು ಅರಿಯನು. ಬುದ್ಧಿವಂತರಿಗೆ ಗೊತ್ತಾಗಲಿಲ್ಲ, ಹೆಡ್ಡರಿಗೆ ಗೊತ್ತಾಗಿ ಇದೆ.

(१३) प्रतिबोधविदितं मतममृतत्वं हि विन्दते । आत्मनाविन्दते वीर्यं विद्यया विन्दतेऽमृतं ॥ (२—४)

(೧೩) (ಅದು) ಪ್ರತಿ ಮನಸ್ಸಾಕ್ಷಿ ಎಂದು ತಿಳದರೆ ಗೊತ್ತಾಗುತ್ತದೆ. (ಅಂಥವನು) ಖಂಡಿತವಾಗಿ ಅಮೃತ (ಸಾಯದ) ಸ್ವಭಾವವನ್ನು ಪಡಿಯುತ್ತಾನೆ. ಆತ್ಮನಿಂದ ಶಕ್ತಿಯನ್ನು ಪಡಿಯುತ್ತಾನೆ. ಜ್ಞಾನದಿಂದ ಅಮೃತ (ಸ್ವಭಾವ)ವನ್ನು ಪಡಿಯುತ್ತಾನೆ.

(१४) इहचेदवेदीदथसत्यमस्ति । न चेहावेदीन्महतो विनष्टिः ॥ भूतेषु भूतेषुविचिन्त्यधीराः । प्रेत्यास्माल्लोकादमृताभवन्ति (२—५)

(೧೪) ಇಲ್ಲಿ ತಿಳದರೆ ಸಾರ್ಥಕವಿದೆ. ಇಲ್ಲಿ ತಿಳಿಯದಿದ್ದರೆ ಭಾರೀ ನಷ್ಟ. ಬುದ್ಧಿವಂತರಾದವರು ಪ್ರತಿ ಒಂದು ಪ್ರಾಣಿಯಲ್ಲಿಯೂ ಚಿಂತಿಸಿ, ಈ ಲೋಕದಿಂದ ಮೃತರಾಗಿ ಹೋದರೆ ಸಾವಿಲ್ಲದವರಾಗುತ್ತಾರೆ (ಮತ್ತೆ ಹುಟ್ಟುವದಿಲ್ಲ).

## XIIನೇ ಪಾಠದ

# ವ್ಯಾಖ್ಯಾನ ಸಂಗ್ರಹ.

—o—

(೧). ಈ ಪಾಠದಲ್ಲಿ ಸಂಗ್ರಹಿಸಿರುವ ಶ್ರುತಿಗಳೆಲ್ಲ ಕೇನೋಪನಿಷತ್ತಿನ ೧ನೇ ೨ನೇ ಖಂಡಗಳಾಗಿರುತ್ತವೆಂಬ ಸಂಗತಿ ಈ ಮೊದಲೇ ಹೇಳೋಣಾಗಿರುತ್ತದೆ.

विशुद्धसत्वस्यतु निष्कामस्यैव बाह्यादनित्यात्साध्यसाधनसंबन्धादिहकृतात्पूर्वकृताद्वा संस्कारविशेषोद्भवाद्विरक्तस्य प्रत्यगात्मविषया जिज्ञासा प्रवर्तते । तदेतद्वस्तु प्रश्नप्रतिवचनलक्षणया श्रुत्याप्रदर्श्यते केनेषितमित्याद्यया ॥ × ॥ शं ॥

ಶಂಕರಾಚಾರ್ಯರು ಮನಶ್ಶುದ್ಧಿ ಉಳ್ಳವನಾಗಿಯೂ, ವಿಷಯೇಚ್ಛಾರಹಿತನಾಗಿಯೂ, ಮತ್ತು ಈ ಜನ್ಮದಲ್ಲಾಗಲೀ ಪೂರ್ವಜನ್ಮಗಳಲ್ಲಾಗಲೀ ಮಾಡಿದ ಕರ್ಮಸಂಸ್ಕಾರದಿಂದುಟಾದ ಹೊರಗಿನ ಕ್ಷಣಭಂಗುರವಾದ ಸಾಧ್ಯಸಾಧನ (ವಿಕಾರೋಪಕರಣ)ಗಳ ಸಮ್ಮಂಧದಿಂದ ವಿರಕ್ತನಾದವಗೆ ಮಾತ್ರ ಪ್ರತ್ಯಗಾತ್ಮನ ವಿಷಯವನ್ನು ತಿಳಕೊಳ್ಳಬೇಕೆಂಬ ಇಚ್ಛೆಯುಂಟಾಗುತ್ತದೆ. ಆ ವಸ್ತುವನ್ನೇ (ಪ್ರಸ್ತುತ) ಕೇನೋಪನಿಷತಿನಿಂದ ಪ್ರಶ್ನೋತ್ತರರೂಪವಾಗಿ ತಿಳಿಸಿಕೊಡೋಣಾಗುತ್ತದೆಂದು ಹೇಳುತ್ತಾರೆ.

परमात्मस्वरूपं प्रश्नप्रतिवचनरूपप्रकारेण प्रकाशयितुं प्रस्तौति केनेषितं पततीति ॥ रं ॥

ರಂಗರಾಮಾನುಜಾಚಾರ್ಯರು, ಪರಮಾತ್ಮನ ಸ್ವರೂಪವನ್ನು ಪ್ರಶ್ನೋತ್ತರರೂಪ ಉಪಾಯದಿಂದ ಪ್ರಕಟಿಸುವಗೋಸ್ಕರ "ಯಾರ ಇಚ್ಛೆ ಮತ್ತು ಅಪ್ಪಣೆಪ್ರಕಾರ (ಮನಸ್ಸು) ಹೋಗುತ್ತದೆ" ಎಂಬದಾಗಿ (ಶ್ರುತಿಯು) ಸ್ತುತಿಸುತ್ತದೆ ಎಂದು ಹೇಳುತ್ತಾರೆ.

उमापतिः । × । सर्वेन्द्रियप्रेरकं पृच्छति ब्रह्माणं केनेत्यादिना ॥ रा ॥

ಮಾಧ್ವರು, ಸರ್ವೇಂದ್ರಿಯ ಪ್ರೇರಕನ ವಿಷಯವಾಗಿ (ಅವನನ್ನು) ತಿಳಿಯುವಗೋಸ್ಕರ) "ಯಾರ" ಎಂದು ಮೊದಲಾಗಿ ಚತುರ್ಮುಖ ಬ್ರಹ್ಮನಕೂಡೆ ಪಾರ್ವತೀಪತಿ ಶಿವನು ಪ್ರಶ್ನೆಮಾಡುತ್ತಾನೆಂದು ಹೇಳುತ್ತಾರೆ.*

---

* ಇಲ್ಲಿ ಶಿವ ಮತ್ತು ಚತುರ್ಮುಖ ಬ್ರಹ್ಮ ಇವರ ಹೆಸರುಗಳನ್ನು ಮಾಧ್ವರು ಸೇರಿಸಲಿಕ್ಕೆ ಕಾರಣವೇನೆಂದರೆ:—ಪ್ರಸ್ತುತ ಕೇನೋಪನಿಷತ್ ವೈಜಯಂತ ಎಂದರೆ ಅಂತರಿಕ್ಷದಲ್ಲಿರುವ ಆ ಹೆಸರಿನ ಲೋಕದಲ್ಲಿ (III ನೇ ಪಾಠ) ಪಾರ್ವತೀಪತಿ ಶಿವಗೆ ವಿಷ್ಣುತತ್ವವನ್ನು ತಿಳಿಸುವಗೋಸ್ಕರ ಚತುರ್ಮುಖ ಬ್ರಹ್ಮನಿಂದ ಉಪದೇಶಿಸಲ್ಪಟ್ಟದ್ದೆಂದು ಈ ಮತದವರ ಭಾವನೆಯಾಗಿರುತ್ತದೆ. ಹೀಗೆಯೇ ಛಾಂದೋಗ್ಯವು ಪ್ರಥಮತಃ ಹಯಗ್ರೀವ ರೂಪಿಯಾದ ಪರಮಾತ್ಮನ ಮುಖದಿಂದ ಹೊರಟಿತು; ಲಕ್ಷ್ಮಿಯು ಅದನ್ನು ಕೇಳಿ ಆ ಉಪನಿಷತ್‌ನಿಂದಲೇ ಶೇಷಶಾಯಿಯಾದ ಪರಮಾತ್ಮನನ್ನು ಸ್ತುತಿಸಿದಳು ಎಂದು ಇವರು ಹೇಳುತ್ತಾರೆ. ಆದರೆ ಇಂಥಾ ಹೇಳಿಕೆಗಳನ್ನು ಹೇಳುವಾಗ್ಯೆ ಅವುಗಳಿಂದ ನಮ್ಮ ಉಪನಿಷದ್ವಿದ್ಯಕ್ಕೆ ಎಷ್ಟರಮಟ್ಟಿನ ಬಾಧಕ ಉಂಟೆಂಬದನ್ನು ಇವರು ಗ್ರಹಿಸುವದಿಲ್ಲ. ಒಂದು ಗ್ರಂಥದಲ್ಲಿ ಜನಗಳಿಗೆ ವಿಶ್ವಾಸ ಉಂಟಾಗುವದು ಆದಕ್ಕೆ ಮಹಾನುಭಾವರ ಹೆಸರುಗಳನ್ನು ಜೋಡಿಸು

ಆದ್ದರಿಂದಲೂ ಈ ಪಾಠದ ೨ನೇ ಶ್ರುತಿಯ ವ್ಯಾಖ್ಯಾನದಲ್ಲಿ ಈ ಇಂದ್ರಿಯಪ್ರೇರಕನು ವಿಷ್ಣುವೆಂದು ಮಾಧ್ವರು ಹೇಳುವದಾದರೂ ಅವನು ಪ್ರತ್ಯಗಾತ್ಮನಲ್ಲೆಂದು ಇವರು ಸಾಧಿಸುವ ಹಾಗೆ ತೋರುವದಿಲ್ಲಾದ್ದರಿಂದಲೂ, ಹಿಂದೆ ಹೋದ XI ನೇ ಪಾಠ ಮತ್ತು ಈ ಪಾಠ ಸಹ ಒಂದೇ ವಿದ್ಯಕ್ಕೆ ಸಮ್ಮಂಧಪಟ್ಟವುಗಳೆಂದು ಕಂಡುಬರುತ್ತದೆ. ಆದ್ದರಿಂದಲೇ ಈ ಉಪನಿಷತ್ ಬೇರೆ ಶಾಖೆಯುವರದ್ದಾದರೂ ಇದನ್ನು ಪರಿಶೇಷವೆಂಬ ಹೆಸರಿನಿಂದ XII ನೇ ಪಾಠವಾಗಿ ಈ ಪುಸ್ತಕದಲ್ಲಿ ಶೇರಿಸೋಣಾಗಿರುತ್ತದೆ. ಪರಂತು XI ನೇ ಪಾಠದಲ್ಲಿ ಈ ಪ್ರತ್ಯಗಾತ್ಮವಿದ್ಯೆಯ ವಿಷಯವಾಗಿ ತಾಂಡಿಗಳು ದೀರ್ಘವಾಗಿ ಚರ್ಚಿಸಿರುವಾಗ್ಯೆ, ಅದೇ (ಸಾಮ) ವೇದಕ್ಕೆ ಸಮ್ಮಂಧಪಟ್ಟ ತಳವಕಾರ ಶಾಖೆಯುವರು ಪುನಹ ಅದೇ ವಿಷಯವನ್ನು ಚರ್ಚಿಸಲಿಕ್ಕೆ ಕಾರಣವೇನೆಂಬದನ್ನು ನಾವು ಮೊದಲು ವಿಚಾರಿಸಬೇಕು.

(೨) XI ನೇ ಪಾಠದಲ್ಲಿ ನಮ್ಮ ಆತ್ಮನು ಕಣ್ಣಿನಲ್ಲಿ ತೋರುತ್ತಾನೆ, ಅವನೇ ಬ್ರಹ್ಮ (೪). ಅವನು ತಿಳಿಯುವ ಕರ್ತೃ, ಆದ್ದರಿಂದ ಆ ಕಣ್ಣು ಮೊದಲಾದ ನಮ್ಮ ಇಂದ್ರಿಯಗಳೆಲ್ಲ ವಿಷಯಗಳನ್ನು ತಿಳಿಯುವದಕ್ಕೆ ಅವನಿಗೆ ಕರಣಗಳಾಗಿರುತ್ತವೆ—(೨೧) ಎಂದು ಹೇಳೋಣಾಗಿದೆಯಲ್ಲದೆ, ಆ ಆತ್ಮನು ಹೇಗೆ ಇದ್ದಾನೆ, ಮತ್ತು ಆ ಕರಣಗಳೆಂಬ ಇಂದ್ರಿಯಗಳು ಎಷ್ಟರಮಟ್ಟಿಗೆ ಅವನಿಗೆ ಉಪಯೋಗಕ್ಕೆ ಬೀಳುತ್ತವೆ ಎಂಬದನ್ನು ವಿವರಿಸಿರುವದಿಲ್ಲ; ಮತ್ತು ಆ ಪಾಠದಲ್ಲಿ ಅವನು ಕಣ್ಣಿನಲ್ಲಿ ತೋರುತ್ತಾನೆಂದು ಹೇಳಿದ್ದರಿಂದ ಅದೇ ವೊದಲಾದ ನಮ್ಮ ಇಂದ್ರಿಯಗಳ ಮೂಲಕವಾಗಿ ಅವನನ್ನು ತಿಳಿಯಬಹುದೆಂಬ ತಪ್ಪುಗ್ರಹಿಕೆಯು ಉಂಟಾಗುವದರಿಂದ, (೧ ನೇ) ಅವನ ಸ್ವರೂಪ ಹೇಗಿದೆ, ಮತ್ತು ಚಕ್ಷುರಾದಿ ಇಂದ್ರಿಯಗಳು ಎಷ್ಟರಮಟ್ಟಿಗೆ ಅವಗೆ ಉಪಕಾರಿಗಳಾಗಿವೆ; (೨ನೇ) ಆ ಇಂದ್ರಿಯಗಳಿಂದ ನಾವು ಅವನನ್ನು ತಿಳಿಯಬಹುದೋ; ಕೂಡದಾದರೆ ಎಂದರೆ ಅವನು ಸರ್ವಾತಿರಿಕ್ತನಾಗಿರುವ ಪಕ್ಷದಲ್ಲಿ (೩ನೇ) ಅವನು ಇದ್ದಾನೆಂಬದಕ್ಕೆ ಪ್ರಮಾಣವೇನು ಎಂಬ ಈ ಸಂಗತಿಗಳನ್ನು ವಿವರಿಸುವದೇ ತಳವಕಾರರ ಮುಖ್ಯ ಉದ್ದಿಶ್ಯವಾಗಿರುವದಾಗಿ ಕಂಡುಬರುತ್ತದೆ. ಈ ಸಂಗತಿ ಮುಂದೆ ಸ್ಪಷ್ಟವಾದೀತು. ಈಗ;

---

ವದರಿಂದಲ್ಲ, ಅದು ಆ ಗ್ರಂಥದ ಯೋಗ್ಯತೆಯ ಮೇಲೆ ಹೊಂದಿಕೊಂಡುಂಟು; ಮತ್ತು ಹಾಗೆ ಮಾಡಿದಪಕ್ಷದಲ್ಲಿ, ಅದು ಉಂಟಾದ ಕಾಲ ಮತ್ತು ಅದರ ಉದ್ದಿಶ್ಯ ಸಹ ಅಡಗಿಹೋಗುವದು ಮಾತ್ರವಲ್ಲದೆ, ಜನಗಳು ಆದರ ನಿಜವಾದ ಕರ್ತೃವಿನ ಕೀರ್ತಿಯನ್ನು ಕೊಂಡಾಡದೆ ವಂಚಿಸಲಿಕ್ಕೆ ಕಾರಣ ಕೊಟ್ಟ ಹಾಗಾಗುತ್ತದೆಂದು ನನ್ನ ಬುದ್ಧಿಗೆ ತೋರುತ್ತದೆ.

## ೧ನೇ ಸಂಗತಿಯನ್ನು ಕುರಿತು.

शृणोत्यनेनेति श्रोत्रं शब्दस्य श्रवणं प्रतिकरणं शब्दाभिव्यञ्जकं श्रोत्रमिन्द्रियं। तस्य श्रोत्रं तः । × । तस्यान्यथाविशेषानव गमात् । यदि हि श्रोत्रादि व्यापारव्यतिरिक्ते न स्वव्यापारेण विशिष्टः श्रोत्रादिनियोक्ताऽ वगम्येत दात्रादिप्रयोक्तृवत् तदिदमननुरूपं प्रतिवचनंस्यात् । नत्विह श्रोत्रादीनां प्रयो क्तास्वव्यापारवैशिष्टोल वित्रादिवदधिगम्य ते । श्रोत्रादीनामेवतुसंहतानां व्यापारेणा लोचनसंकल्पाध्यवसाय लक्षणेन फलाव सान लिंगेनावगम्यते ।अस्तिहि श्रोत्रादिभि रसंहतः यत्प्रयोजन प्रयुक्तः श्रोत्रादिकलापो ग्रहादिवदिति । संहतानां परार्थत्वादवगम्य ते श्रोत्रादीनां प्रयोक्ता । तस्मादनुरूपमेवेदं प्रतिवचनं श्रोत्रस्य श्रोत्रमित्यादिकं । कःपु नरत्रपदार्थः श्रोत्रस्य श्रोत्रमित्यादेः? नह्यत्र श्रोत्रस्य श्रोत्रान्तरेणार्थः यथाप्रकाशस्य प्र काशान्तरेण । नैषदोषः । अयमत्रपदार्थः श्रोत्रं तावत्स्वविषयव्यञ्जनसमर्थं दृष्टं । त घस्वविषयव्यञ्जनसामर्थ्यं श्रोत्रस्य चैतन्ये ह्यात्मज्योतिषिनित्येऽसंहते सर्वान्तरेसति भ वति । नासतीति । अतः श्रोत्रस्य श्रोत्रमि त्याद्युपपद्यते । × । श्रोत्राद्येवसर्वस्य आत्म भूतं चेतनामिति प्रसिद्धं । तदिहनिवर्त्यते । अस्तिकिमपि विद्वद्बुद्धिगम्यं सर्वान्तरतमं

(ಒಬ್ಬ ಮನುಷ್ಯನು) ಯಾವದರಿಂದ ಕೇಳುತ್ತಾನೋ ಅದು ಕಿವಿ; ಎಂದರೆ ಶಬ್ದ ವನ್ನು ಕೇಳಿಕೊಂಡು, ಅದನ್ನು ವ್ಯಕ್ತ ಪಡಿಸುವದಕ್ಕೆ ಕರಣಭೂತವಾದ ಇಂದ್ರಿ ಯವಿಶೇಷ. ಅದಕ್ಕೆ ಅವನು (ಪ್ರೇರ ಕನು) ಕಿವಿಯಾಗಿರುವನು. ಯಾಕಂ ದರೆ ಬೇರೆ ವಿಧವಾಗಿ ಅವನ ಪ್ರಭೇದವು ತಿಳದುಬರುವದಿಲ್ಲ. (ವಿಶೇಷಿಸಿ ತಿಳಿಸ ಕೂಡದು). ಒಂದು ಕತ್ತಿ ಮೊದಲಾದ ಆಯುಧವನ್ನು ಉಪಯೋಗಿಸುವವನಂತೆ ಯೇ (ಈ) ಶ್ರೋತ್ರಾದಿ ಪ್ರೇರಕನೂ ಆ ಇಂದ್ರಿಯಗಳ ವ್ಯಾಪಾರವಲ್ಲದೆ (ಪ್ರತ್ಯೇಕ ತನ್ನ) ಸ್ವಂತ ವ್ಯಾಪಾರ ಉಳ್ಳವನಾಗಿ ತಿಳ ದುಬರುವದಾಗಿದ್ದ ಪಕ್ಷದಲ್ಲಿ, ಆಗ ಈ (ಕಿವಿಗೆ ಕಿವಿ ಎಂಬ) ಪ್ರತ್ಯುತ್ತರವು ಅನು ಚಿತವಾಗುತ್ತಿತ್ತು. ಆದರೆ ಇಲ್ಲಿ ಶ್ರೋ ತ್ರಾದಿಗಳನ್ನು ಪ್ರೇರಿಸುವವನು ಒಬ್ಬ ಕೊ ಯ್ಯುವವನಂತೆ ಸ್ವವ್ಯಾಪಾರ ಉಳ್ಳವನಾಗಿ ತಿಳಿದುಬರುವದಿಲ್ಲ. ಪ್ರತ್ಯುತ ಸಮ್ಮಿಳಿತ ವಾದಂಥಾ (ಆ) ಶ್ರೋತ್ರಾದಿಗಳ ವ್ಯಾಪಾ ರದಿಂದಲೇ ಫಲಿಸುವ ಆಲೋಚನ, ಸಂ ಕಲ್ಪ, ನಿರ್ಣಯಲಕ್ಷಣವಾದ ಚಿನ್ಹೆಯಿಂದ ಊಹಿಸಲ್ಪಡುತ್ತಾನೆ. ಮನೆ ಇತ್ಯಾದಿಗ ಳಂತೆಯೇ ಶ್ರೋತ್ರಾದಿಗಳ ಸಮೂಹವು ಯಾರ ಪ್ರಯೋಜನಕ್ಕಾಗಿ ಇವೆಯೋ

कूटस्थमजरममृतमभयमजं श्रोत्रादेरपि श्रोत्रादितत्सामर्थ्यमिति प्रतिवचनं शब्दार्थश्चोपपद्यतएव ॥

तथामनसः अन्तःकरणस्य मनः । न ह्यन्तःकरणमन्तरेण चैतन्यस्य ज्योतिषादीपितं स्वविषयसङ्कल्पाध्यवसायादि समर्थं स्यात् । तस्मान्मनसोपिमन इति । इहबुद्धिमनसी एकीकृत्यानिर्देशो मनसइति ॥

यस्माच्छ्रोत्रस्य श्रोत्रं यस्मान्मनसोमन इति एवं वाचोहवाचम् इति द्वितीया प्रथमात्वेन परिणम्यते । × । वाचमित्यस्यवागित्येतावद्वक्तव्यं । × ।

स यस्त्वयापृष्टः प्राणास्य प्राणाख्यवृत्तिविशेषस्य प्राणः तत्कृतं हि प्राणस्य प्राणन सामर्थ्यं । नह्यात्मनाऽनधिष्ठितस्य प्राणन मुपपद्यते । × । श्रोत्रादीन्द्रियप्रस्तावे घ्राणस्येव प्राणस्य नतुयुक्तं ग्रहणं । सत्यमेवं । प्राणग्रहणेनैवतु घ्राणस्य ग्रहणं कृतमेवमन्यते श्रुतिः । सर्वस्यैवकरणकलापस्य यदर्थप्रयुक्ता प्रवृत्तिः तद्ब्रह्मेति प्रकरणार्थो विवक्षितः । × ।

रूपप्रकाशकस्य चक्षुषो यद्रूपग्रहणसामर्थ्यं तदात्मचैतन्याधिष्ठितस्यैव अतः चक्षुषश्चक्षुः । × ।

श्रोत्रादेः श्रोत्रादिलक्षणं ब्रह्मेति विदित्वाऽतिमुच्य श्रोत्राद्यात्मभावं परित्यज्य । येश्रोत्राद्यात्मभावं परित्यजन्तिते धीराः धी

ಅವನು ಅವುಗಳಿಂದ ಭಿನ್ನವಾಗಿರುವದು ಪ್ರಸಿದ್ಧವಾಗಿರುತ್ತದೆ. (ಈ ರೀತಿ) ಆ ಇಂದ್ರಿಯಗಳು ಇನ್ನೊಬ್ಬನ ಪ್ರಯೋಜನಕ್ಕಾಗಿರುವದರಿಂದ, ಅವುಗಳ ಪ್ರೇರಕನು ಅವುಗಳ ದೆಸೆಯಿಂದ ಊಹಿಸಲ್ಪಡುತ್ತಾನೆಂದು ಹೇಳುವದು. ಆದಕಾರಣ (ಅವನು) "ಕಿವಿಗೆ ಕಿವಿ" ಎಂದು ವಗೈರೆ ಕೊಡೋಣಾದ ಈ ಉತ್ತರವು ಸರಿಯಾದದ್ದೇ ಆಗಿರುತ್ತದೆ. ಹಾಗಾದರೆ "ಕಿವಿಗೆ ಕಿವಿ" ಎಂತ ವಗೈರೆ ಹೇಳುವ ಮಾತಿಗೆ ಅರ್ಥವೇನು? ಯಾಕಂದರೆ ಬೆಳಕಿಗೆ ಇನ್ನೊಂದು ಬೆಳಕು (ದೀಪ) ಎಂದಂತೆ ಕಿವಿಗೆ ಇನ್ನೊಂದು ಕಿವಿ ಎಂದು ಇಲ್ಲಿ ಅರ್ಥವಲ್ಲವಷ್ಟೆ? (ಎಂದರೆ) ಬಾಧಕವಿಲ್ಲ, ಆ ಮಾತಿಗೆ ವಿಷಯವಾದ ಪದಾರ್ಥವು ಇದು (ಕೆಳಗೆ ಹೇಳುವದು) ಆಗಿರುತ್ತದೆ. ಯಾವದೆಂದರೆ—

ಕಿವಿಯು ಅದರ ವಿಷಯ (ಶಬ್ದ)ವನ್ನು ಕೇಳಲಿಕ್ಕೆ ಸಮರ್ಥವಾದದ್ದೆಂಬದು ಕಂಡುಬಂದ ಸಂಗತಿಯಷ್ಟೆ? ಚೈತನ್ಯ ಮತ್ತು ಸ್ವಯಂಜ್ಯೋತಿ, (ರೂಪವಾದ) ನಿತ್ಯ, (ವ) ಅಸಂಹತವಾಗಿ (ಇನ್ನೊಂದಕ್ಕೆ ಕೂಡಿಕೊಳ್ಳದೆ)ಯೂ ಸಕಲದರಲ್ಲಿಯೂ ಅಡಗಿರುವ ವಸ್ತು (ಆತ್ಮ)ವು ಇರುವ ಪಕ್ಷದಲ್ಲಿ (ಮಾತ್ರ) ಕಿವಿಗೆ ಆ (ಕೇಳುವ) ಸಾಮರ್ಥ್ಯವು ಬರುತ್ತದೆಯಲ್ಲದೆ ಇಲ್ಲವಾದರೆ ಬರುವದಿಲ್ಲ. ಆದಕಾರಣ ಕಿವಿ

मन्तः । न हि विशिष्टधीमत्वमन्तरेण श्रोत्राद्यात्मभावः शक्यः परित्यक्तुं । प्रेत्यव्यावृत्य अस्माल्लोकात् पुत्रमित्रकुलबन्धुषु ममाहं भावसंव्यवहारलक्षणात् त्यक्तसर्वैषणा भूत्वेत्यर्थः । अमृताः अमरण धर्माणो भवन्ति । × । अथवा अतिमुच्येत्यनेनैषणात्यागस्य सिद्धत्वादस्माल्लोकात्प्रेत्य अस्माच्छरीरात्प्रेत्यमृत्वेत्यर्थः ॥ शं ॥

ಗೆ ಕಿವಿ ಎಂದು ವಗೈರೆ ಹೇಳಿದ್ದು ಸರಿಯಾಗಿರುತ್ತದೆ. ಇಲ್ಲಿ, ಕಿವಿ ಮೊದಲಾದವುಗಳೇ ಎಲ್ಲಕ್ಕೂ ಆತ್ಮಭೂತವಾದ ಚೇತನವೆಂಬದಾಗಿ ಲೋಕದಲ್ಲಿರುವ ಪ್ರಸಿದ್ಧಿಯನ್ನು ನಿವೃತ್ತಿಪಡಿಸೋಣಾಗುತ್ತದೆ. ವಿದ್ವಾಂಸರ ಬುದ್ಧಿಗೆ (ಮಾತ್ರ) ಗೋಚರವಾಗಿಯೂ, ಸಕಲ ವಸ್ತುಗಳ ಅತ್ಯಂತ ಒಳಪ್ರದೇಶದಲ್ಲಿ (ನಡುವೆ) ಇದ್ದುಕೊಂಡು ವಿಕಾರವಾಗದೆಯೂ, ಜರಾಮರಣರಹಿತವಾಗಿಯೂ, ಭಯವಿಲ್ಲದೆಯೂ, ಉತ್ಪತ್ತಿ ಇಲ್ಲದೆಯೂ ಇರುವ ಮತ್ತು ವರ್ಣಿಸಲಿಕ್ಕೆ ಕೂಡದ ಒಂದು ವಸ್ತುವಿದೆ. ಅದೇ ಕಿವಿ ಮೊದಲಾದವುಗಳಿಗೆ ಕಿವಿ ಮೊದಲಾದದ್ದು. ಅದು ಅವುಗಳ ಸಾಮರ್ಥ್ಯವೆಂದು ಪ್ರತ್ಯುತ್ತರವಾಗಿರುತ್ತದೆ. ಶಬ್ದಗಳ ಅರ್ಥವೂ ಸರಿಯೇ ಬೀಳುತ್ತದೆ.

ಹಾಗೆಯೇ ಮನಸು ಎಂದರೆ ಅಂತರಿಂದ್ರಿಯ, (ಅವನು) ಇದಕ್ಕೆ ಮನಸ್ಸು. (ಈ) ಅಂತರಿಂದ್ರಿಯವು ಚೈತನ್ಯಜ್ಯೋತಿಯಿಂದ ಪ್ರಕಾಶಿಸಲ್ಪಡದ ವಿನಹ ತನ್ನ ವಿಷಯಗಳಾದ ಸಂಕಲ್ಪ, ನಿರ್ಣಯ ಮೊದಲಾದವುಗಳನ್ನು ಮಾಡುವದಕ್ಕೆ ಸಮರ್ಥವಾಗುವದಿಲ್ಲ. • ಆದಕಾರಣ ಮನಸ್ಸಿಗೆ ಕೂಡಾ ಮನಸ್ಸೆಂದು ಹೇಳಿದ್ದಾಗಿರುತ್ತದೆ. ಇಲ್ಲಿ ಬುದ್ಧಿ, ಮನಸ್ಸು ಇವೆರಡನ್ನು ಒಟ್ಟುಕೂಡಿಸಿ ಮನಶ್ಶಬ್ದದಿಂದ ಹೇಳೋಣಾಗುತ್ತದೆ.

ಯಾವಕಾರಣದಿಂದ ಕಿವಿಗೆ ಕಿವಿ, ಮನಸ್ಸಿಗೆ ಮನಸ್ಸು ಆಗಿರುತ್ತದೋ, ಅದೇ ಕಾರಣದಿಂದ ವಾಕ್ಕಿಗೆ (ಇಂದ್ರಿಯಕ್ಕೆ) ವಾಕ್ ಆಗರುತ್ತದೆ.

ಪ್ರಾಣ ಎಂದರೆ ಆ ಹೆಸರಿನ ವೃತ್ತಿವಿಶೇಷ, ಅದಕ್ಕೆ ಪ್ರಾಣ ಯಾರೆಂದು ನೀನು ಕೇಳಿದ ಪ್ರಾಣನು ಅವನೇ. ಪ್ರಾಣಕ್ಕೆ ಚಲಿಸುವ ಸಾಮರ್ಥ್ಯವು ಅವನಿಂದಲೇ ಉಂಟಾಗುವದಾಗಿರುತ್ತದೆ. (ಅದು) ಆತ್ಮನಿಂದ ಅಧಿಷ್ಟಿತವಾಗಿರದೇ ಇರುವ ಪಕ್ಷದಲ್ಲಿ ಚಲಿಸಕೂಡದು. ಶ್ರೋತ್ರಾದಿ ಇಂದ್ರಿಯಗಳ ಪ್ರಸ್ತಾಪಿನಲ್ಲಿ ಘ್ರಾಣೇಂದ್ರಿಯದ ಬದಲಾಗಿ ಪ್ರಾಣವನ್ನು ಹೇಳಿದ್ದು ಸರಿಯಲ್ಲ ಎಂಬದು ಸತ್ಯವೇ. ಆದರೆ ಪ್ರಾಣವನ್ನು ಹೇಳಿದ್ದರಿಂದಲೇ ಘ್ರಾಣೇಂದ್ರಿಯವ(ಮೂಗ)ನ್ನು ಹೇಳಿದ ಹಾಗಾಯಿತೆಂದು ಶ್ರುತಿಯು ಅಭಿಪ್ರಾಯಪಡುತ್ತದೆ. ಸಕಲೇಂದ್ರಿಯಗಳ ಸಮೂಹದ ವ್ಯಾಪಾರವು ಯಾವದರ

ಪ್ರಯೋಜನಕ್ಕಾಗಿ ನಡಿಸೋಣಾಗುತ್ತದೋ, ಆ ವಸ್ತು ಬ್ರಹ್ಮವೆಂಬದಾಗಿ ಈ ಪ್ರಕರಣದ ತಾತ್ಪರ್ಯವಾಗಿರುತ್ತದೆ.

ರೂಪಪ್ರಕಾಶ ಮಾಡುವ ಕಣ್ಣಿಗಿರುವ ರೂಪ ತಿಳಿಯುವ ಸಾಮರ್ಥ್ಯವು, ಆತ್ಮ ಚೈತನ್ಯದ ಅಧಿಷ್ಠಾನವಿರುವ ಪಕ್ಷದಲ್ಲಿ ಮಾತ್ರ ಇರುವದಾಗಿರುತ್ತದೆ. ಆದಕಾರಣ (ಆತ್ಮನು) ಕಣ್ಣಿಗೆ ಕಣ್ಣು (ಆಗಿರುತ್ತಾನೆ).

ಬ್ರಹ್ಮವು ಕಿವಿ ಮೊದಲಾದವುಗಳಿಗೆ ಕಿವಿಯಾಗಿ ಉಳ್ಳ ಲಕ್ಷಣಯುಕ್ತವಾದದ್ದೆಂದು ತಿಳಿದು, (ಆ) ಕಿವಿ ಮೊದಲಾದವುಗಳು ಆತ್ಮನೆಂಬ ಭಾವನೆಯನ್ನು ಬಿಟ್ಟು, (ಕಿವಿ ಮೊದಲಾದವುಗಳು ಆತ್ಮನೆಂಬ ಭಾವನೆಯನ್ನು ಯಾರು ಬಿಡುತ್ತಾರೋ ಅಂಥವರು ಜ್ಞಾನಿಗಳಾಗಿರುತ್ತಾರೆ. ಉತ್ಕೃಷ್ಟವಾದ ಜ್ಞಾನ ವಿನಹ ಶ್ರೋತ್ರಾದಿಗಳೇ ಆತ್ಮನೆಂಬ ಭಾವನೆಯನ್ನು ಬಿಡುವದಕ್ಕೆ ಕೂಡುವದಿಲ್ಲ. ಏವಂಚ ಆ ಭಾವನೆಯನ್ನು ಬಿಟ್ಟು) ಪುತ್ರ, ಮಿತ್ರ, ಕುಲ, ಬಂಧು, ಇವರಲ್ಲಿ ನನ್ನದು ನಾನು ಎಂಬ ವ್ಯವಹಾರರೂಪವಾದ ಈ ಲೋಕದಿಂದ ವ್ಯಾವೃತ್ತರಾಗಿ (ಹಚ್ಚಿಕೊಳ್ಳದೆ) ಎಂದರೆ ಸಕಲ ಅಭಿಲಾಷಗಳನ್ನು ತ್ಯಜಿಸಿದಪಕ್ಷದಲ್ಲಿ ಮರಣಪಡುವ ಸ್ವಭಾವ ಇಲ್ಲದವರಾಗುತ್ತಾರೆ. ಅಥವಾ "ಬಿಟ್ಟು" ಎಂದದರಿಂದಲೇ ಅಭಿಲಾಷೆಗಳನ್ನು ಬಿಟ್ಟು ಎಂದು ಸಿದ್ಧವಾಗುವದರಿಂದ ಈ ಶರೀರವನ್ನು ಬಿಟ್ಟು (ಮರಣಪಟ್ಟು) ಹೋದಪಕ್ಷದಲ್ಲಿ (ಮರಣಪಡುವ ಸ್ವಭಾವ ಇಲ್ಲದವರಾಗುತ್ತಾರೆ.) ಎಂದು ಶಂಕರಾಚಾರ್ಯರು ವಿವರಿಸುತ್ತಾರೆ.

यच्चक्षुरादीनां प्रकाशकं चक्षुराद्यनधीन प्रकाशकं च अप्राणाधीनप्राणनं च यत् सत सएव इत्येवमात्मुच्यज्ञात्वा अस्माल्लोकाद र्चिरादिना मार्गेण गत्वा मुक्ताभवन्तीत्यर्थः ॥ २ ॥

ಯಾವದು ಕಣ್ಣು ಮೊದಲಾದ ಇಂದ್ರಿಯಗಳನ್ನು ಪ್ರಕಾಶ ಮಾಡುತ್ತದೋ, ಕಣ್ಣು ಮೊದಲಾದ ಇಂದ್ರಿಯಗಳ ಅಧೀನವಾಗಿ (ವಿಧೇಯವಾಗಿ) ಇಲ್ಲದೇ ಪ್ರಕಾಶಿಸುತ್ತದೋ, ಮತ್ತು ಯಾವದು ಪ್ರಾಣದ ಅಧೀನವಾಗಿರದೆ ಚಲಿಸುತ್ತದೋ ಅದೇ (ಆತ್ಮನು) ಎಂದು ತಿಳಿದು ಈ ಲೋಕದಿಂದ ಅರ್ಚಿರಾದಿ (IX) ಮಾರ್ಗದಿಂದ ಹೋದಪಕ್ಷದಲ್ಲಿ ಮುಕ್ತರಾಗುತ್ತಾರೆ ಎಂದು ಅರ್ಥವೆಂದು ರಂಗರಾಮಾನುಜಾಚಾರ್ಯರು ಹೇಳುತ್ತಾರೆ.

यत्नयः श्रोत्रस्य श्रोत्रं श्रवणशक्तिप्रदः। मनसोमनः मननशक्तिप्रदः। वाचोवागिन्द्रि

ಯಾರು ಕಿವಿಗೆ ಕೇಳುವ ಶಕ್ತಿಕೊಡುವವನೋ, ಮನಸ್ಸಿಗೆ ಯೋಚಿಸುವ ಶಕ್ತಿ

यस्यवाचं वागुच्चारणशक्तिप्रदः । प्राणस्य मुख्यवायोः प्रणः प्रणेता । चक्षुषः चक्षुर्दर्शनशक्तिप्रदः । × । सउ सएव प्रसिद्धो विष्णुरेवेत्यर्थः ॥

धीराः धीमन्तः श्रोत्रादिप्रेरकत्वं विजानन्तः अस्माल्लोकाद्भौतिकदेहात् प्रेत्यनिर्गत्यमृत्वेतियावत् अतिमुच्यालिंगबन्धं हित्वा अमृतामुक्ताभवन्तीति ॥ रा ॥

ಕೊಡುವವನೋ, ವಾಗಿಂದ್ರಿಯಕ್ಕೆ ಮಾತಾಡುವ ಶಕ್ತಿ ಕೊಡುವವನೋ, ಪ್ರಾಣ ಎಂದರೆ ಮುಖ್ಯ ವಾಯು, ಅದನ್ನು ಚಲಿಸುವವನೋ, ಕಣ್ಣಿಗೆ ನೋಡುವ ಶಕ್ತಿ ಕೊಡುವವನೋ ಅವನು ಪ್ರಸಿದ್ಧನಾದ ವಿಷ್ಣುವೇ ಆಗಿರುತ್ತಾನೆ.

(ಈ ರೀತಿ) ಕಿವಿ ಮೊದಲಾದವುಗಳಿಗೆ ಪ್ರೇರಿಸುವ (ಅವನ) ಸ್ವಭಾವವನ್ನು ತಿಳಿದಂಥವರು (ಈ ಪಾಂಚ) ಭೌತಿಕದೇಹದಿಂದ ಸತ್ತು, ಲಿಂಗ (ದೇಹ) ನಿರ್ಬಂಧದಿಂದ ಬಿಡುಗಡೆಪಟ್ಟು ಮುಕ್ತರಾಗುತ್ತಾರೆ ಎಂದು (ಅರ್ಥವೆಂದು) ಮಾಧ್ವರು ಹೇಳುತ್ತಾರೆ.

### ೨ನೇ ಸಂಗತಿಯನ್ನು ಕುರಿತು.

यस्माच्छ्रोत्रादेरपि श्रोत्राद्यात्मभूतं ब्रह्म अतो न तत्रतस्मिन् ब्रह्मणि चक्षुर्गच्छति । स्वात्मनि गमनासंभवात् । तथानवागगच्छति वाचाहि शब्दः उच्चार्यमाणोऽभिधेयं प्रकाशयतियदा तदाभिधेयं प्रतिवाग्गच्छतीत्युच्यते । तस्य च शब्दस्य तन्निवर्त्तकस्य च करणस्यात्माब्रह्म । अतोनवागगच्छति । यथाऽग्निर्दाहकः प्रकाशश्चापि सन् नह्यात्मानं प्रकाशयति दहति च तद्वत् । मनश्चान्यस्य संकल्पयितृ अध्यवसायितृ च सन्नात्मानं संकल्पयत्यध्यवस्यति च तस्यापि ब्रह्मात्मेति । इन्द्रियमनोभ्यां हि वस्तुनो विज्ञानं तदगोचरत्वान्नविद्मस्तद्ब्रह्मेदृशमिति । अतोनविजानीमो यथायेनप्रकारेणैतत् ब्रह्मानुशिष्यात् उपदिशेच्छिष्यायेत्यभिप्रायः। यद्धिकरणगोचरं तदन्यस्मै उपदेष्टुं शक्यं जा

ಶಂಕರಾಚಾರ್ಯರು, (ಮೇಲೆ ಹೇಳಿದ ಪ್ರಕಾರ) ಬ್ರಹ್ಮವು ಕಿವಿ ಮೊದಲಾದವುಗಳಿಗೆ ಕೂಡಾ ಕಿವಿ ಮೊದಲಾದವುಗಳಾಗಿರುವದರಿಂದ, ಕಣ್ಣು ಅದರ ಬಳಿಗೆ ಹೋಗುವದಿಲ್ಲ. ಯಾಕಂದರೆ (ಒಬ್ಬನು) ತನ್ನ ಬಳಿಗೆ ತಾನು ಹೋಗಕೂಡದಾಗಿರುತ್ತದೆ. ಹಾಗೆಯೇ ವಾಗಿಂದ್ರಿಯವು ಹೋಗುವದಿಲ್ಲ. ವಾಗಿಂದ್ರಿಯದಿಂದ ಉಚ್ಚರಿಸಲ್ಪಟ್ಟ ಒಂದು ಶಬ್ದವು ಅದರಿಂದ ಹೇಳುವ ಪದಾರ್ಥವನ್ನು ತೋರಿಸಿಕೊಡುವ ಪಕ್ಷದಲ್ಲಿ, ಆಗ ಆ ಶಬ್ದವು ಆ ವಸ್ತುವಿನ ಬಳಿಗೆ ಹೋಗುತ್ತದೆಂದು ಹೇಳೋಣಾಗುತ್ತದೆ. ಬ್ರಹ್ಮವು ಆ ಶಬ್ದಕ್ಕೂ, ಅದನ್ನು ಉಚ್ಚರಿಸುವ ಕರಣ (ವಾಗಿಂದ್ರಿಯ)ಕ್ಕೂ ಆತ್ಮವಾಗಿರುವ ಕಾರಣ, ಹೇಗೆ ಅಗ್ನಿಯು ಸುಡುವಂಥಾದ್ದಾಗಿಯೂ

त्रिगुणक्रियाविशेषणैः। न तज्जात्यादि विशेषणवद्ब्रह्म । तस्माद्विषमं शिष्यानुपदेशेन प्रत्याययितुमिति । उपदेशे तदर्थग्रहणेच यत्नातिशयकर्त्तव्यतां दर्शयति न विद्मइत्यादि ॥ शं ॥

ಪ್ರಕಾಶವಾಗಿಯೂ ಇದ್ದುಕೊಂಡು, ತನ್ನನ್ನು ತಾನೇ ಪ್ರಕಾಶಮಾಡುವದಾಗಲೀ, ಸುಡುವದಾಗಲೀ ಇಲ್ಲವೋ ಅದೇ ರೀತಿ ವಾಗಿಂದ್ರಿಯವು (ಬ್ರಹ್ಮದ ಬಳಿಗೆ) ಹೋಗುವದಿಲ್ಲ. ಮನಸ್ಸು ಕೂಡಾ ಇನ್ನೊಂದನ್ನು ಸಂಕಲ್ಪಿಸುತ್ತದೆ, (ಮತ್ತು) ನಿರ್ಣಯಿಸುತ್ತದಲ್ಲದೆ, ತನ್ನನ್ನು ತಾನು ಸಂಕಲ್ಪಿಸುವದಿಲ್ಲ, ನಿರ್ಣಯಿಸುವದೂ ಇಲ್ಲ. ಅದಕ್ಕೆ ಕೂಡಾ ಬ್ರಹ್ಮವು ಆತ್ಮ. ಇಂದ್ರಿಯ ಮನಸ್ಸುಗಳಿಂದ ಒಂದು ವಸ್ತುವಿನ ಜ್ಞಾನ ಉಂಟಾಗುವದಾಗಿರುತ್ತದೆ. ಬ್ರಹ್ಮವು ಅವುಗಳಿಗೆ ಅಗೋಚರವಾದದ್ದಾದ್ದರಿಂದ, ಅದು ಫಲಾಣೀತರಹ ಉಂಟೆಂದು ನಮಗೆ ಗೊತ್ತಾಗುವದಿಲ್ಲ. ಆದಕಾರಣ ಶಿಷ್ಯರಿಗೆ ಆ ಬ್ರಹ್ಮವನ್ನು ಯಾವ ರೀತಿಯಿಂದ ಉಪದೇಶಿಸಬಹುದೆಂಬದು ನಮಗೆ ತೋರುವದಿಲ್ಲ ಎಂದು ಅಭಿಪ್ರಾಯವಾಗಿರುತ್ತದೆ. ಕಾರಣವೇನೆಂದರೆ:—(ಬ್ರಹ್ಮ) ಕರಣಗಳಿಗೆ ಗೋಚರವಾಗುವದಾದಪಕ್ಷದಲ್ಲಿ ಅದನ್ನು ಜಾತಿ, ಗುಣ, ಕ್ರಿಯೆ, ವಿಶೇಷಣಗಳಿಂದ ಇನ್ನೊಬ್ಬಗೆ ಉಪದೇಶಿಸಬಹುದು. ಬ್ರಹ್ಮವು ಜಾತಿ ಮೊದಲಾದ ವಿಶೇಷಣ ಉಳ್ಳದ್ದಲ್ಲ. ಆದಕಾರಣ ಉಪದೇಶದಿಂದ ಶಿಷ್ಯರಿಗೆ ಅದರ ವಿಷಯದಲ್ಲಿ ನಂಬಿಕೆ ಹುಟ್ಟಿಸುವದು ಪ್ರಯಾಸವಾಗಿರುತ್ತದೆ. "ನಾವು ತಿಳಿಯಲಿಲ್ಲ" ಎಂದು ವಗೈರೆ ಹೇಳುವದರಿಂದ, ಉಪದೇಶದ ವಿಷಯದಲ್ಲಿಯೂ, ಅದರ ಅರ್ಥ ಗ್ರಹಿಸುವ ವಿಷಯದಲ್ಲಿಯೂ, ಹೆಚ್ಚು ಪ್ರಯತ್ನಪಡಬೇಕೆಂದು ತೋರಿಸೋಣಾಗುತ್ತದೆ ಎಂದು ವಿವರಿಸುತ್ತಾರೆ.

तदेवप्रपञ्चयति नतत्रेति । तर्हितत्कथमुपदेष्टव्यमित्यत्राह नविद्मो न विजानीमइति।किंतादितिपृष्ट आचार्यःनान्तरिन्द्रियेण न बाहिरिन्द्रियेण ज्ञेयं तादित्येवतदुपादिशेत्॥रं॥

ರಂಗರಾಮಾನುಜಾಚಾರ್ಯರು, ಕಿವಿಗೆ ಕಿವಿ ಎಂದು ವಗೈರೆ ಮೊದಲು ಹೇಳಿದ ಸಂಗತಿಯನ್ನೇ "ಕಣ್ಣು ಅದರ ಬಳಿಗೆ ಹೋಗುವದಿಲ್ಲ" ಎಂದು ವಗೈರೆ ಹೇಳುವ ಅರ್ಧ ಶ್ಲೋಕದಿಂದ (ಗುರುಗಳು) ವಿವರಿಸುತ್ತಾರೆ. ಹಾಗಾದರೆ ಅದನ್ನು (ಕಿವಿ ಮೊದಲಾದವುಗಳಿಗೆ ಕಿವಿ ಮೊದಲಾದವುಗಳಾಗಿರುವದನ್ನು) ಹೇಗೆ ಉಪದೇಶಿಸುವದು ಎಂಬದು ನಮಗೆ ಗೊತ್ತಿಲ್ಲ, (ಉಪಾಯು) ತೋರುವದಿಲ್ಲ ಎಂದು ಹೇಳೋಣಾಗುತ್ತದೆ; (ಮತ್ತು ಶಿಷ್ಯನು) "ಅದು ಏನು" ಎಂದು ಆಚಾರ್ಯರ ಕೂಡೆ ಕೇಳಿದರೆ ಇವರು ಅದನ್ನು ಅಂತರಿಂದ್ರಿಯದಿಂ(ಮನಸ್ಸಿನಿಂ)ದಾಗಲೀ, ಬಹಿರಿಂದ್ರಿಯ (ಕಣ್ಣು

ಮೊದಲಾದವು)ಗಳಿಂದಾಗಲೀ ತಿಳಿಯಲಿಕ್ಕೆ ಕೂಡದೆಂದು ಉಪದೇಶಿಸಬೇಕು (ಎಂದು ಅರ್ಥವೆಂದು) ಹೇಳುತ್ತಾರೆ.

कीदृशंहरेः प्रेरकत्वादिमाहात्म्यं यज्ज्ञानादमृतत्वं स्यादित्य तोऽपरिमितत्वात्तन्महिम्नो नसा कल्येनज्ञानंसंभवतीति भावेनाह नतत्रेति । तत्रहेरेर्विश्वशासनादिमाहात्म्ये चक्षुरादीन्द्रियं नगच्छति ।×। अतोयथायेनप्रकारेण एतत्प्राणादिजगदनुशिष्यात्प्रेरयेत् तंप्रकारंवयं नविद्मः । + । सामान्याकारज्ञानमेव नास्तिकुतोविशेषज्ञानमिति भावेनाह नविजानीमइति । + रा.॥.

ಮಾಧ್ವರು ಯಾರನ್ನು ತಿಳದರೆ ಮರಣರಾಹಿತ್ಯ ಸ್ವಭಾವವು ದೊರಕುತ್ತದೊ, ಆಹರಿಯ ಪ್ರೇರಕತ್ವ ಮೊದಲಾದ ಮಹಾತ್ಮೆಯು, ಯಾವ ತರ ಹದ್ದು ಎಂದರೆ ಅವನ ಮಹಿಮೆಯು, ಅಪರಿಮಿತವಾದದ್ದಾದ್ದರಿಂದ, ಅದರ ಜ್ಞಾನವು ಪೂರಾ ಆಗುವದಿಲ್ಲೆಂಬ ಭಾವನೆಯಿಂದ, (ಶ್ರುತಿಯು) ಹೇಳುವದೇನೆಂದರೆ:-ಜಗನ್ನಿಯಮನಮೊದಲಾದ ಹರಿಯ ಮಹಾತ್ಮೆಯನ್ನು ಕುರಿತು ಕಂಣುವೊದಲಾದ ಇಂದ್ರಿಯವು ಹೋಗುವದಿಲ್ಲ (ತಿಳಿಯುವದಿಲ್ಲ). ಆದಕಾರಣ ಯಾವ ರೀತಿಯಿಂದ ಈ (ಮುಖ್ಯ) ಪ್ರಾಣಾದಿ ಜಗತ್ತು ಪ್ರೆರಿಸಲ್ಪಡುತ್ತದೆಂಬದನ್ನು ನಾವು ಅರಿಯೆವು. ಸಾಮಾನ್ಯವಾದ ಜ್ಞಾನವೇ ಇಲ್ಲ, (ಇನ್ನು) ವಿಶೇಷ ಜ್ಞಾನ ಎಲ್ಲಿಂದ (ಬರುವದು, ಇಲ್ಲವೇ ಇಲ್ಲ,) ಎಂಬ ಭಾವನೆಯಿಂದ "ನಾವು ವಿಶೇಷವಾಗಿ ತಿಳಿಯಲಿಲ್ಲ" ಎಂದು ಹೇಳೋಣಾಗುತ್ತದೆ ಎಂದು ಹೇಳುತ್ತಾರೆ.

## ೩ ನೇ ಸಂಗತಿಯನ್ನು ಕುರಿತು.

अत्यन्तमेवोपदेशप्रकारप्रत्याख्याने प्राप्तेतदपवादो यमुच्यते। सत्यमेवं प्रत्यक्षादिभिः प्रमाणैर्नपरः प्रत्याययितुंशक्यः। आगमेनतुशक्यतएवप्रत्याययितुं । तदुपदेशार्थमागममाह । अन्यदेव पृथगेवतत्यत्प्रकृतं श्रोत्रादीनां श्रोत्रादित्युक्तमविषयश्चतेषां ताद्विदिताद न्यदेवहि । विदितंनाम यद्विदिक्रियया तिशये नाप्तंतद्विदिक्रियाकर्म भूतं क्वचित्किंचित्कस्यचिद्विदितं स्यादितित

(ಈ ರೀತಿ) ಉಪದೇಶವಿಧಾನವನ್ನು ತೀರಾನಿರಾಕರಣೆಮಾಡಬೇಕಾದ ಸಂಭವ ಒದಗಿದ್ದರಿಂದ ಅದಕ್ಕೆ ಈ ಅಪವಾದವನ್ನು ಹೇಳೋಣಾಗುತ್ತದೆ. ಬ್ರಹ್ಮವನ್ನು (ಈಗ ಹೇಳಿದ) ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸ್ಥಾಪಿಸಿಕೊಡಕೂಡದೆಂಬದು ಸತ್ಯವೆ;-ಪರಂತು ಆಗಮು(ಶಾಸ್ತ್ರ)ದಿಂದ ನಿಶ್ಚಯವಾಗಿ ಸ್ಥಾಪಿಸಿಕೊಡಬಹುದು. ಆದಕಾರಣ ಅದರ ಉಪದೇಶಾರ್ಥವಾಗಿ

स्मादिति सर्वमेवव्या कृतंतद्विदितमेवतत्त स्मादन्यदित्यर्थः। अविदितं अज्ञातंतर्हीति प्राप्ते आह अथो अपि अविदितात् विदि-तविपरीतात् अव्याकृताद विद्यालक्षणा द्व्याकृतबीजात्। अधीत्युपर्यर्थे लक्षणया अन्यादित्यर्थः। यद्धि यस्मादधिउपरिभव तितत्तस्माद न्यदितिप्रसिद्धं। यद्विदितंत-दल्पं अत्यन्तदुःखात्मक श्चेतिहेयं। तस्मा-द्विदिताद न्यद्ब्रह्मेत्युक्तेत्वहेयत्व मुक्तंस्यात् तथा अविदिताद धीत्युक्तेऽनुपादे यत्वमुक्तं स्यात्। कार्यार्थंहि कारणमन्यदन्येनो पादीयते। अतश्च नवेदितुरन्यस्मै प्रयोज-नायान्यदुपादेयं नभवतीत्येवं विदिता-विदिताभ्यां अन्यदितिहेयोपादेयप्रतिषे धेनस्वात्मनोऽनन्यत्वाद्ब्रह्मविषया जिज्ञा-साशिष्यस्यनिर्वर्तितास्यात् नह्यन्यस्य स्वात्मनोविदिताविदिताभ्यां अन्यत्वं व-स्तुनः संभवतीत्यात्माब्रह्मेत्येपवाक्यार्थः।+। ब्रह्म चैतन्यं आचार्योपदेश परंपरयैवा धिगन्तव्यं नतर्कतः प्रवचनमेधाबहुश्रुत-तायज्ञादिभ्यश्चेत्येवं शुश्रुमः श्रुतवन्तोव यंपूर्वेषां आचार्याणांवचनं।ये आचार्याःनः अस्मभ्यं तद्ब्रह्मव्याचीक्षेर व्याख्यातवन्तः विस्पष्टंकथितवन्तः तेपामित्यर्थः।शां।

(ಅ) ಅಗಮುವನ್ನು (ಗುರುಗಳು) ಹೇಳು ತ್ತಾರೆ. ಪ್ರಸ್ತುತ ಕಿಮಿ ಮೊದಲಾದವುಗ ಳಿಗೆ ಕಿಮಿಮೊದಲಾದದ್ದಾಗಿಯೂ, ಅವು ಗಳಿಗೆ ಅವಿಷಯವಾಗಿಯೂ, ಇದೆ ಎಂದು ಯಾವದು ಹೇಳಲ್ಪಟ್ಟಿತೊ ಅದು ತಿಳಿದು ಬಂದದ್ದರಕ್ಕಿಂತಲೂ ನಿಶ್ಚಯವಾಗಿ ಬೇರೆ ಯಾಗಿರುತ್ತದೆ. ತಿಳಿದು ಬಂದದ್ದೆಂದರೆ "ತಿಳಿ" ಎಂಬ ಕ್ರಿಯೆಯಿಂದ ವಿಶೇಷವಾಗಿ ದೊರಕಿ ಆ ಕ್ರಿಯೆಗೆಕರ್ಮ ಭೂತವಾಗಿ ರುವಂಥಾದು. ಅದು ಎಲ್ಲಿಯಾದರೂ, ಏ ನಾದರೂ, ಯಾರಿಗಾದರೂ, ತಿಳದುಬಂ ದದ್ದಾಗಿರಬಹುದಾದ್ದರಿಂದಲೂ, ತಿಳದು ಬಂದದ್ದೆಂಬದೆಲ್ಲ ವಿಕಾರಗಳೇ ಆಗಿರುವ ದರಿಂದಲೂ(ಬ್ರಹ್ಮವು) ಅದಕ್ಕಿಂತಲೂ ಬೆ ರೆಯಾದದ್ದು ಎಂದು ಅರ್ಥ. ಹಾಗಾ ದರೆ ಅದು ಗೊತ್ತಾಗದಿದ್ದದ್ದು ಎಂದು ಹೇಳಬೇಕಾಯಿತೆಂದರೆ—ಕೂಡದು, ಯಾ ಕಂದರೆ ತಿಳದು ಬಾರದೇ ಇರುವ (ಮತ್ತು) ವಿಕಾರವಾದದ್ದಕ್ಕೆ ಬೀಜವಾದ, ಅಜ್ಞಾನ ವೆಂಬ, ವಿಕಾರವಾಗದ ವಸ್ತುವಿಗೂ ಮೀ ರಿ ಎಂದರೆ ಅದರಿಂದಲೂ ಪ್ರತ್ಯೇಕವಾದ ದ್ದು ಎಂದು ಅರ್ಥವಾಗಿರುತ್ತದೆ. ಮೇಲೆ ಎಂದರೆ ಎತ್ತರದಲ್ಲಿ ಎಂದು ಅರ್ಥ. ಇಲ್ಲಿ ಆ ಶಬ್ದವು ಬೇರೆ ಎಂಬ ವ್ಯುತ್ಪನ್ನಾರ್ಥದ ಲ್ಲಿ ಪ್ರಯೋಗಿಸಲ್ಪಟ್ಟಿದೆ. ಒಂದುಪದಾರ್ಥವು ಇನ್ನೊಂದರ ಮೇಲೆ ಇರುವಪಕ್ಷದಲ್ಲಿ ಆ ಪದಾರ್ಥವು ಆ ಇನ್ನೊಂದರಕಿಂತ ಬೇರೆಯಾದದ್ದೆಂಬದು ಪ್ರಸಿದ್ಧವಾದದ್ದು. ತಿಳದು ಬಂದದ್ದು ಯಾವದು ಇದೆಯೊ ಅದು ಅಲ್ಪವಾದದ್ದು; ಮತ್ತು ಅತ್ಯಂತದುಃಖಸ್ವಭಾವ

ಉಳ್ಳದ್ದಾದ್ದರಿಂದ ತ್ಯಜಿಸಬೇಕಾದದ್ದೇ ಆಗಿರುತ್ತದೆ. ಆದಕಾರಣ ಬ್ರಹ್ಮವು ತಿಳಿದು ಬಂದ ವಸ್ತುವಿಗಿಂತ ಬೇರೆ ಎಂದು ಹೇಳೋಣದರಿಂದಬಿಡಭಾರದ ಸ್ವಾಭಾವವು ನಿರೂಪಿಸಲ್ಪಡುತ್ತದೆ. ಹಾಗೆಯೇ ಗೊತ್ತಾಗದಿದ್ದಕ್ಕೆ ಮಿಕ್ಕದೆಂದು ಹೇಳೋಣದರಿಂದ ಗ್ರಹಣಮಾಡಕೂಡದ ಸ್ವಭಾವವು ನಿರೂಪಿಸಲ್ಪಡುತ್ತದೆ. (ಈಗ) ಒಬ್ಬ ಮನುಷ್ಯನು ಒಂದು ಕಾರ್ಯಕ್ಕೋಸ್ಕರ ಕಾರಣವನ್ನು ಹುಡುಕುವದುಪ್ರಸಿದ್ಧವಾದದ್ದು. ಆದಕಾರಣ ತಿಳಕೊಳ್ಳುವವಗೆತನ್ನ ಹೊರತು ಇನ್ನೊಂದು ವಸ್ತುವನ್ನು ಹುಡುಕಿ ಪ್ರಯೋಜನವಿಲ್ಲ. ಹೀಗೆ ಅದು ತಿಳದು ಬಂದಂಥಾ ಮತ್ತು ಗೊತ್ತಾಗದೇ ಇದ್ದಂಥಾ ಈ ೨ ವಿಧದ ವಸ್ತುಗಳಿಂದಲೂ ಪ್ರತ್ಯೇಕವಾದದ್ದೆಂದು ಹೇಳುವದರ ಮೂಲವಾಗಿ ಬಿಡತಕ್ಕ ಮತ್ತು ಗ್ರಹಿಸಕೂಡತಕ್ಕ ಸ್ವಭಾವಗಳನ್ನು ನಿರಾಕರಣೆ ಮಾಡೋಣಾಗುವದರಿಂದ, (ಮತ್ತು) ಅವನ ಆತ್ಮನೂ ಅದೇ ಆಗಿರುವಕಾರಣ ಶಿಷ್ಯಗೆ ಬ್ರಹ್ಮವನ್ನು ತಿಳಕೊಳ್ಳಬೇಕೆಂಬ ಇಚ್ಛೆಯನ್ನು ಸಂಪೂರ್ಣವಾಗಿ ಉಂಟುಮಾಡೋಣಾಗುತ್ತದೆ. ಯಾಕಂದರೆ (ಅವಗೆ) ತನ್ನ ಆತ್ಮನ ಹೊರತು, ಗೊತ್ತಾದ ಮತ್ತು ಗೊತ್ತಾಗದಿರುವ ಪದಾರ್ಥಗಳಕಿಂತಾ ಬೇರೆಯಾದ ಇನ್ನೊಂದುವಸ್ತು ಇರಕೂಡದು. ಆದಕಾರಣ ಆತ್ಮನೇ ಬ್ರಹ್ಮವೆಂದು ಈ ವಾಕ್ಯದ ಅರ್ಥವಾಗಿರುತ್ತದೆ. ಬ್ರಹ್ಮಚೈತನ್ಯವನ್ನು ಆಚಾರ್ಯರ ಉಪದೇಶಪರಂಪರೆಯಿಂದಲೇ ತಿಳಿಯತಕ್ಕದಾಗಿರುತ್ತದೆ, (ಅಲ್ಲದೆ) ತರ್ಕದಿಂದಾಗಲಿ, ವ್ಯಾಖ್ಯಾನದಿಂದಾಗಲಿ, ಧಾರಣಾಶಕ್ತಿಯಿಂದಾಗಲಿ, ಹೆಚ್ಚು ಕೇಳೋಣದರಿಂದಾಗಲಿ, ಯಜ್ಞಾದಿಕರ್ಮಗಳನ್ನು ಮಾಡೋಣದರಿಂದಾಗಲಿ, ಅಲ್ಲ ಎಂದು ನಮಗೆ ಬ್ರಹ್ಮವನ್ನು ವಿವರಿಸಿದ ಪೂರ್ವದ ಆಚಾರ್ಯರು ಹೇಳುವದನ್ನು ನಾವು ಕೇಳಿದ್ದೇವೆಂದು ಅರ್ಥವಾಗಿರುತ್ತದೆಂದು ಶಂಕರಾಚಾರ್ಯರು ಹೇಳುತ್ತಾರೆ.

ननुसर्वात्मना तस्यज्ञानाविषयत्वेतुच्छत्वंस्यात् ब्रह्मजिज्ञासया गुरूपसदनादिकं च नस्यादित्यत्राह अन्यदेवतदिति । येऽस्माकं पूर्वेगुरवः ब्रह्मउपादिशन्तेषां सर्वात्मनाविदितादपिविलक्षणं सर्वात्मना अविदितादपिविलक्षणं । एवंरूपं ब्रह्मेतीदृशंवाचंवयंश्रुतवन्तइत्यर्थः ॥ ४ ॥.

(ಆತ್ಮನು) ಜ್ಞಾನಕ್ಕೆ ತೀರಾ ಅಗೋಚರವಾದ ಸ್ವಭಾವಉಳ್ಳವನೆಂದು ಹೇಳಿದ ಪಕ್ಷದಲ್ಲಿ ಅವಗೆ ನಿಷ್ಪ್ರಯೋಜನತ್ವವು ಉಂಟಾಗುವದಲ್ಲದೆ, ಬ್ರಹ್ಮವನ್ನು ತಿಳಕೊಳ್ಳುವ ಇಚ್ಛೆಯಿಂದ(ಶಿಷ್ಯರು)ಗುರುಗಳ ಉಪಸತ್ತಿ ಮಾಡೋಣ ಮೊದಲಾದ ವ್ಯವಹಾರ ಇಲ್ಲದೇ ಹೋದೀತು ಎಂಬದರಿಂದ, ಅದು ಬೇರೆ ಎಂಬದಾಗಿ ವಗೈರೆ ಹೇಳೋಣಾಗುತ್ತದೆ. ನಮಗೆ ಪೂರ್ವದಲ್ಲಿ ಬ್ರಹ್ಮವನ್ನು ಯಾವ ಗುರುಗಳು ಉಪದೇಶಿಸಿದರೋ ಅವರಿಗೆ ಪೂರಾ ಗೊತ್ತಾದದ್ದಕ್ಕೂವಿಲ

ಕ್ಷಣ (ವಿಪರೀತ)ವಾದದ್ದು! ಪೂರಾ ಗೊತ್ತಾಗದಿದ್ದದ್ದಕ್ಕೂ ವಿಪರೀತವಾದದ್ದು. ಬ್ರಹ್ಮವು ಈ ತರಹದರೂಪವುಳ್ಳದ್ದೆಂಬದಾಗಿ ಹೇಳುವದನ್ನು ನಾವು ಕೇಳಿದ್ದೇವೆ ಎಂದು ಅರ್ಥವೆಂದು ರಾಮಾನುಜಾಚಾರ್ಯರು ಹೇಳುತ್ತಾರೆ.

॥कुतोऽस्यपरिपूर्णत्वामित्यतो लोकविलक्षणवस्तुत्वादितिहेतोरित्याह अन्यदेवेति। तच्चक्षुराद्यगम्यं वस्तुविदितात्प्रमिताजगत: अथो अविदितादप्रमिताच्छशशृंगादेश्चान्यदेव विलक्षणमेवेत्यर्थ:। विदितादन्यदित्युक्तौनि:स्वरूपताशंकाव्युदासा याथो विदितादन्यदित्युक्ति:। केचिद्व्यक्ताव्यक्त जगतो न्यदित्यर्थमाहु:। अधिसर्वोत्तमइत्यर्थ: इत्येवं प्रकारेण पूर्वेषांव्यासप्रभृतीनांसकाशात् शुश्रुम श्रुतवन्त:स्म:।+। नोऽस्मान्प्रति येपूर्वे तद्ब्रह्मव्याचक्षिरे व्याख्यातवन्त: तेषांपूर्वेषामित्यन्वय:॥२॥

(ಹರಿಗೆ) ಪರಿಪೂರ್ಣತ್ವವು ಯಾವಕಾರಣದಿಂದ ಉಂಟಾಗಿದೆ ಎಂದರೆ, ಅವನು ಲೋಕವಿಕ್ಷಣವಾದ ವಸ್ತುವಾಗಿರುವ ಹೇತುವಿನಿಂದ ಎಂದು ಹೇಳುವಗೋಸ್ಕರ "ಬೇರೆಯೇ" ಎಂಬ ಈ ಶ್ರುತಿಯು ಪ್ರವೃತ್ತವಾಗಿದೆ. ಚಕ್ಷುರಾದಿ ಇಂದ್ರಿಯಗಳಿಗೆ ಗೋಚರವಾಗದ ವಸ್ತು, ತಿಳಿದು ಬಂದ ಜಗತ್ತು ಮತ್ತು ಗೊತ್ತಾಗದ ಮೊಲದ ಕೋಡು (ಮೊಲಕ್ಕೆ ಕೋಡು ಇಲ್ಲವೇ ಇಲ್ಲ.) ಇವುಳಿಗಗೆ ವಿಪರೀತವಾದದ್ದೇ ಎಂದು ಅರ್ಥ. ತಿಳಿದು ಬಂದದ್ದರಕಿಂತಲೂ ಬೇರೆಯಾದದ್ದು ಎಂದು ಮಾತ್ರ ಹೇಳಿದರೆ ಸ್ವರೂಪವಿಲ್ಲದ್ದೋ ಎಂದು ಪ್ರಶ್ನೆ ಉಂಟಾಗುವದರಿಂದ, ಆ ಆಕ್ಷೇಪನಿವೃತ್ತಿಗೋಸ್ಕರ "ಮತ್ತು ಗೊತ್ತಾಗದೇ ಇರುವದರಕಿಂತ ಬೇರೆ" ಎಂಬ ಮಾತನ್ನು ಹೇಳಿದ್ದಾಗಿರುತ್ತದೆ, ಕೆಲವರು ಪ್ರತ್ಯಕ್ಷ ತೋರುವ ಮತ್ತು ಕಾಣದೇ ಇರುವ ಜಗತ್ತಿಗಿಂತ ಬೇರೆಯಾದದ್ದು ಎಂದು ಅರ್ಥವೆಂದು ಹೇಳುತ್ತಾರೆ. "ಅಧಿ" ಎಂದರೆ ಉತ್ತಮವಾದದ್ದು ಎಂದು ಅರ್ಥ. ಈ ಪ್ರಕಾರ ನಮಗೆ ಪೂರ್ವದಲ್ಲಿ ಬ್ರಹ್ಮವನ್ನು ವಿವರಿಸಿದವರಿಗೆ ಮೊದಲಿನವರಾದ ವ್ಯಾಸರು? ಮೊದಲಾದವರು ಹೇಳುತ್ತಿದ್ದರಂತೆ ಎಂದು ಅನ್ವಯವಾಗಿರುತ್ತದೆ ಎಂದು ಮಾಧ್ವರು ಹೇಳುತ್ತಾರೆ.

**ಈಗ ಮೇಲೆ ಹೇಳಿದ ಆಗಮವನ್ನು ಸಂಗ್ರಹಿಸೋಣಾಗುತ್ತದೆ.**

॥ यत् चैतन्यमात्रसत्ताकं वाचा।+। पदत्वेनपरिच्छिन्नया करणगुणवत्या अनभ्युदितं अप्रकाशितं अनभ्युक्तंयेन ब्रह्मणाविवक्षितेऽर्थेसकरणावागभ्युद्यते चैत-

ವಾಕ್ ಎಂದರೆ ಆ ಹೆಸರಿನ ಇಂದ್ರಿಯದಿಂದ ಪ್ರಯೋಗಿಸಲ್ಪಟ್ಟಂಥಾ ಪದಭಾವದಲ್ಲಿ ನಿತ್ತ ಶಬ್ದದಿಂದ ಯಾವ ಚೈತನ್ಯಮಾತ್ರವೇ ಆಗಿರುವ ವ

न्यज्योतिषाप्रकाश्यते प्रयुज्यतइत्येतत्। +। तदेव आत्मस्वरूपंब्रह्म निरतिशयं भूमाख्यं बृहत्वात् ब्रह्मेति विद्धिविजानीहित्वं। यैर्वागाद्युपाधिभिः वाचोहवाक्, चक्षुषश्चक्षुः श्रोत्रस्य श्रोत्रं, मनसोमनः, कर्ताभोक्ताविज्ञातानियन्ता, प्रशासिता, विज्ञानमानन्दं ब्रह्मेत्येवमादयः संव्यवहारा असंव्यवहार्ये निर्विशेषपरे सौम्येब्रह्मणिवर्तन्ते। तान्, व्युदस्यात्मानमेव निर्विशेषं ब्रह्मविद्धीत्येवशब्दार्थः॥ नेदंब्रह्म यदिदमित्युपाधिभेद विशिष्टमनात्मेश्वराद्युपासते ध्यायन्ति। तदेवब्रह्मत्वंविद्धीत्युक्तेपि नेदंब्रह्मेत्यनात्मनोऽब्रह्मत्वं पुनरुच्यते नियमार्थमन्यब्रह्मबुद्धिपरिसंख्यानार्थंवा॥ मनइत्यन्तः करणंबुद्धि मनसोरेकत्वेन गृह्यते। मनुतेऽनेनेति मनः।•सर्वकरणसाधारणं सर्वविषयव्यापकात्वात्।+। कामादिवृत्तिमन्मनः तेनमनसायत् चैतन्यज्योतिर्मनसोऽवभासकं नमनुते। नसकंल्पयति नापिनिश्चिनोतिमनसोऽवभासकत्वेन नियन्तृत्वात् सर्वविषयंप्रति प्रत्यगेवेति स्वात्मनि नवर्ततेऽन्तःकरणं॥ अन्तस्थेनहि चैतन्यज्योतिषावभासितस्यमननसामर्थ्यं। तेनसवृत्तिकं मनोब्रह्मणामतं विषयीकृतं व्याप्तमाहुःकथयन्ति ब्रह्मविदः तस्मात्तदेवमनस आत्मानं प्रत्यक् चेतायितारं ब्रह्मविद्धि। नेदमित्यादि पूर्ववत्॥ यश्चक्षुषानपश्यति नविषयीकरोति,

ಸ್ತು ಪ್ರಕಟಿಸಲ್ಪಡುವದಿಲ್ಲವೊ (ಅ) ಶಬ್ದವು ಅದಕ್ಕೆ ಸಮ್ಮಂಧಪಟ್ಟ ಇಂದ್ರಿಯ ಸಮೇತವಾಗಿ ಯಾವ ಬ್ರಹ್ಮವೆಂಬ ಚೈತನ್ಯ ಜ್ಯೋತಿಯಿಂದ ಪ್ರಯೋಗಿಸಲ್ಪಡುತ್ತದೋ ಅದೇ ಆತ್ಮಸ್ವರೂಪವಾದ ಬ್ರಹ್ಮ; ಅದಕ್ಕೆ ಮಿಗಿಲಾದದ್ದಿಲ್ಲ. ಅದು ಸುಖರೂಪವಾದದ್ದು ಮತ್ತು ದೊಡ್ಡದಾದ ಕಾರಣ ಬ್ರಹ್ಮವೆಂದು ಹೇಳಲ್ಪಡುತ್ತದೆ ಎಂದು ನೀನು ತಿಳಿ. (ಪ್ರಸ್ತುತ ಶ್ರುತಿಯಲ್ಲಿರುವ,) ಅದೇ" ಎಂಬ ನಿರ್ಧಾರಣ ವಾಚಕದ ಅರ್ಥವು ವಾಗಿಂದ್ರಿಯ ಮೊದಲಾದ ಉಪಾಧಿಗಳಿಂದ ವಾಕ್ಕಿಗೆ ವಾಕ್ ಕಣ್ಣಿಗೆ ಕಣ್ಣು ಮನಸಿಗೆ ಮನಸು, ಮಾಡುವವ ಅನುಭವಿಸುವವ, ತಿಳಿಯುವವ, ಪ್ರೇರಿಸುವವ ಆಳುವವ, ಜ್ಞಾನ ಮತ್ತು ಸುಖರೂಪನಾದವ, ಬ್ರಹ್ಮ ಎಂದು ವಗೈರೆ (ಜನಗಳು) ಮಾಡುವ ವ್ಯವಹಾರಗಳು ವ್ಯವಹಾರಕ್ಕೆ ಶಿಕ್ಕದ, ಹೆಚ್ಚುಕಡಿಮೆ ಇಲ್ಲದ, ಉತ್ತಮವಾದ, ಮತ್ತು ಪ್ರಕಾಶಿಸುವ ಬ್ರಹ್ಮದ ವಿಷಯವಾಗಿ ಮಾಡಲ್ಪಡುವವುಗಳಾಗಿರುತ್ತವೆ; ನೀನು ಆ ವ್ಯವಹಾರಗಳನ್ನುಪೇಕ್ಷಿಸಿ ಆತ್ಮನೇ ಹೆಚ್ಚುಕಡಿಮೆ ಇಲ್ಲದ ಬ್ರಹ್ಮವೆಂದು ತಿಳಿ ಎಂದು ಆಗಿರುತ್ತದೆ. ಜನಗಳು ಈಶ್ವರ ಎಂದು ವಗೈರೆ ಧ್ಯಾನಿಸುವ ಉಪಾಧಿಭೇದಯುಕ್ತವಾದ "ಇದು" ಎಂತ ಹೇಳುವಆತ್ಮನಲ್ಲದ ವಸ್ತು ಬ್ರಹ

अन्तः करणवृत्तिसंयुक्तेनयेनचक्षूंषि अन्तः करणवृत्तिभेदभिन्नाश्चक्षुर्वृत्तीः पश्यति, लोकः, चैतन्यात्मज्योतिषाविषयीकरोति, व्याप्नोति ॥ यच्छोत्रेण नशृणोति दिग्देवताधि ष्ठितेनाकाशकार्येण मनोवृत्तिसंयुक्तेन नविषयीकरोतिलोकः येनश्रोत्रामिदंश्रुतं यत्प्रसिद्धं चैतन्यात्मज्योतिषाविषयीकृतंत देवपूर्ववत् ॥ यत्प्राणेनघ्राणेन पार्थिवेननासिकापुटान्तरवस्थितेनान्तःकरणप्राणवृत्तिभ्यां सहितेनयन्नप्राणितिगन्धवन्नाविषयीकरोति येनचैतन्यात्मज्योतिषाऽवभास्यत्वेनस्वविषयंप्रति प्राणःप्रणीयते । तदेवेत्यादिसर्वसमानं ॥ शं ॥

ವಲ್ಲ.. (ಮೇಲೆ) "ಅದೇ (ಆತ್ಮನೇ) ಬ್ರಹ್ಮವೆಂದು ತಿಳಿ" ಎಂದು ಹೇಳಿರುತ್ತಾ "ಇದು ಬ್ರಹ್ಮವಲ್ಲ" ಎಂಬದಾಗಿ ಆತ್ಮನ ಲ್ಲದ್ದಕ್ಕೆ ಬ್ರಹ್ಮವ್ಯತಿರಿಕ್ತತ್ವವನ್ನು ಪುನಹ ಹೇಳಿದ್ದು ನಿಯಮಕ್ಕೋಸ್ಕರ; ಅಥವಾ ಬೇರೇದರಲ್ಲಿ ಬ್ರಹ್ಮಬುದ್ಧಿಯನ್ನು ಪರಿಹರಿಸುವಗೋಸ್ಕರ ವಾಗಿರುತ್ತದೆ.

(೨) ಮನಸು ಎಂದರೆ ಅಂತರೀದ್ರಿಯ. ಆ ಶಬ್ದವು ಬುದ್ಧಿ, ಮನಸ್ಸು ಇವೆರಡನ್ನೂ ಒಂದೇಯಾಗಿ ಗ್ರಹಣಮಾಡುತ್ತದೆ. ಮ ಮನಸ್ಸೆಂದರೆ ಯಾವದರಿಂದ ತಿಳಿಯುತ್ತಾನೋ ಅದರ ಹೆಸರು. ಎಲ್ಲ ಕರಣ (ಇಂದ್ರಿಯ)ಗಳಿಗೂ ಅದು ಸಾಧರಣವಾಗಿರುತ್ತದೆ, (ಬೇಕು). ಯಾಕಂದರೆ ಸಕಲ ವಿಷಯುಗಳಲ್ಲಿಯೂ ಅದು ವ್ಯಾಪಿಸಿಕೊಂಡುಂಟು. ಅದು ಇಚ್ಛೆ ಮೊದಲಾದ ವ್ಯಾಪಾರಉಳ್ಳದ್ದು. ಅದಕ್ಕೆ ಪ್ರಕಾಶ (ಬೆಳಕು ಉಂಟುಮಾಡಿ) ಕೊಡುವ ಯಾವ ಚೈತನ್ಯಜ್ಯೋತಿಯನ್ನು ಆ ಮನಸಿನಿಂದ ಇವನು ಯೋಚಿಸುವದಿಲ್ಲವೋ, ಎಂದರೆ ಸಂಕಲ್ಪಿಸುವದೂ ಇಲ್ಲ ನಿರ್ಣಯಿಸುವದೂ ಇಲ್ಲವೋ÷ಯಾಕೆಂದರೆ ಅದು(ಬ್ರಹ್ಮ)ಮನಸಿಗೆಪ್ರಕಾಶ ಉಂಟುಮಾಡಿಕೊಡುವದರ ಮೂಲವಾಗಿ ಪ್ರೇರಿಸುವ ಕರ್ತೃ ಆಗಿರುತ್ತದೆ; (ಮತ್ತು) ಅದು ಸಕಲ ಪದಾರ್ಥಗಳಲ್ಲಿಯೂ ಶೇರಿಕೊಂಡಿರುವದರಿಂದ ಅಂತಃ ಕರಣವು ತನ್ನ ಆತ್ಮನ ಬಳಿಗೆ ಹೋಗುವದಿಲ್ಲ. ಅದಕ್ಕೆ ತಿಳಿಯುವ ಸಾಮರ್ಥ್ಯವು ಒಳಗಿರುವ ಚೈತನ್ಯ ಜ್ಯೋತಿಯಿಂದ ಪ್ರಕಾಶಿಸಲ್ಪಡುವದರಿಂದ ಬರುವದಾಗಿರುತ್ತದೆ. ಈ ಕಾರಣದಿಂದ ವೃತ್ತಿಸಹಿತವಾದ ಮನಸ್ಸುಬ್ರಹ್ಮದಿಂದ ವ್ಯಾಪಿಸಿಕೊಂಡುಂಟೆಂಬದಾಗಿ ಬ್ರಹ್ಮವನ್ನು ತಿಳದವರು ಹೇಳುತ್ತಾರೆ. ಆದ್ದರಿಂದ ಮನಸ್ಸಿಗೆ ಆತ್ಮ ಮತ್ತು ಅಂತಃ ಪ್ರೇರಕವಾಗಿರುವದೇ ಬ್ರಹ್ಮವೆಂದು ತಿಳಿ. "ಇದಲ್ಲ" ಎಂದು ವಗೈರೆ ಹೇಳುವ ವಾಕ್ಯಕ್ಕೆ ಈ ಮೊದಲು ಹೇಳಿದ್ದೇ ಅರ್ಥವಾಗಿರುತ್ತದೆ.

(೩) ಯಾವದನ್ನು ಇವನು ಕಣ್ಣಿನಿಂದ ಕಾಣುವದಿಲ್ಲವೊ, ಮೇಲೆ ಹೇಳಿದ ಅಂತ: ಕರಣದ ವೃತ್ತಿಯಿಂದ(ವ್ಯಾಪಾರದಿಂದ) ಮಿಳಿತವಾದ ಯಾವ ಚೈತನ್ಯಾತ್ಮಜ್ಯೋ

ತಿಯಿಂದ, ಆ ಅಂತಃ ಕರಣವೃತ್ತಿಯಿಂದ ಭಿನ್ನವಾದ, ಚಕ್ಷುರಿಂದ್ರಿಯ (ಕಣ್ಣಿನ) ವೃತ್ತಿಯು ವ್ಯಾಪಿಸಿಕೊಂಡುಂಟೋ;

(೪) ಯಾವದನ್ನು ಇವನು ದಿಗ್ದೇವತಾಅಧಿಷ್ಠಿತವಾದಂಥಾ, ಮನೋವೃತ್ತಿಸಂಯುಕ್ತ (ಮತ್ತು) ಆಕಾಶಕಾರ್ಯವಾದ ಶ್ರೋತ್ರೇಂದ್ರಿಯದಿಂದ ಕೇಳುವದಿಲ್ಲವೋ, ಪ್ರಸಿದ್ಧವಾದ ಯಾವ ಚೈನ್ಯಾತ್ಮ ಜ್ಯೋತಿಯಿಂದಈ ಶ್ರೋತ್ರೇಂದ್ರಿಯವು ವ್ಯಾಪಿಸಿಕೊಂಡುಂಟೊ; "ಅದೇ"ಎಂಬದರ ಅರ್ಥ ಮೇಲೆ ಹೇಳಿದಂತೆಯೇ.

(೫) ಯಾವದನ್ನು ಇವನು ಅಂತಃ ಕರಣ ಮತ್ತು ಪ್ರಾಣ (ಮುಖ್ಯವಾಯು) ಇವೆರಡರ ವೃತ್ತಿಗಳಿಂದಲೂ ಕೂಡಿಕೊಂಡಿರುವಂಥಾ, ಮೂಗಿನ ಸೊಳ್ಳೆಯ ಒಳಗಿರುವ ಪೃಥ್ವೀಸಂಮಂಧವಾದ ಘ್ರಾಣೇಂದ್ರಿಯದಿಂದ ಪರಿಮಳದಂತೆ ಮೂಸಿನೋಡುವದಿಲ್ಲವೊ; ಯಾವ ಚೈತನ್ಯಾತ್ಮಜ್ಯೋತಿಯಿಂದ ಪ್ರಕಾಶಿಸಲ್ಪಿಟ್ಟ ಪ್ರಾಣವು ತನ್ನ ವಿಷಯವನ್ನು ಕುರಿತು ಹೋಗುತ್ತದೋ; ಅದೇ ಎಂದು ವಗೈರೆ ಹೇಳುವದರ ಅರ್ಥ ಮೇಲೆ ಹೇಳಿದ್ದೇ ಆಗಿರುತ್ತದೆ.—

ಎಂದು ಶಂಕರಾಚಾರ್ಯರು ವ್ಯಾಖ್ಯಾನ ಮಾಡಿರುತ್ತಾರೆ.

॥ एतदेव प्रपंचयति यद्वाचान भ्युदितमिति। वागादिभिर्यदप्रकाश्यं स्वयंवागादीन्द्रियप्रकाशकं चयत् तदेव ब्रह्मजानीहि । यद्वस्तुइदमितिइदंकारगोचरतया हस्तामलकवत् सुविदिततया उपासतेजनाः तद्ब्रह्मनेत्यर्थः । एवमुत्तरत्रापि ॥ पश्यति पश्यन्तीत्यर्थः पूर्वोत्तरानुगुण्यात् ॥ प्रणीयते प्रणीतमित्यर्थः ॥ ५ ॥.

(ಆತ್ಮನು ಜ್ಞಾನಕ್ಕೆ ತಿರಾ ಅಗೋಚರನಲ್ಲೆಂದು ಮೇಲೆ ೪ನೇ ಶ್ರುತಿಯ ವ್ಯಾಖ್ಯಾನದಲ್ಲಿ ಹೇಳೋಣಾಯಿತಷ್ಟೆ.) ಆ ಸಂಗತಿಯನ್ನೇ (ಈಗ) ವಿವರಿಸೋಣಾಗುತ್ತದೆ.

(೧) ವಾಗಿಂದ್ರಿಯದಿಂದ ಯಾವದನ್ನು ಸ್ಪಷ್ಟಪಡಿಸಕೂಡದೋ, ಯಾವದು ತಾನುವಾಗಿಂದ್ರಿಯವನ್ನು ಸ್ಪಷ್ಟಪಡಿಸುತದೋ, ಅದೇ ಬ್ರಹ್ಮವೆಂದು ನೀನುತಿಳಿ, ಜನರು ಯಾವವಸ್ತುವನ್ನು ಅಂಗೈಯಲ್ಲಿರುವ ನೆಲ್ಲೀಕಾಯಿಗೆ "ಇದು" ಎಂದು ಹೇಳುವ ಹಾಗೆ ಚನ್ನಾಗಿ ತಿಳದು ಬಂದಂತೆ ಉಪಾಸಿಸುತ್ತಾರೋಅದು ಬ್ರಹ್ಮವಲ್ಲ. ಇದೇ ರೀತಿ ಮುಂದೆ ಕೂಡಾ (ಅರ್ಥ).

(೩) ಕಣ್ಣುಗಳು ನೋಡುತ್ತದೋ ಅಲ್ಲ ನೋಡುತ್ತವೋ ಎಂತ. ೬ನೇ ಶ್ರುತಿಯಲ್ಲಿ ಕಣ್ಣುಗಳು ನೋಡುತ್ತದೋ ಎಂದು ಏಕವಚನಪ್ರಯೋಗ ಇರುವದರಿಂದ

ಅದಕ್ಕೆ ಬದಲಾಗಿ ಬಹುವಚನವನ್ನು ಪ್ರಯೋಗಿಸಬೇಕೆಂದು ತಾತ್ಪರ್ಯ. ಈ ಅರ್ಥಹಿಂದೆ ಮುಂದಿನ ವಾಕ್ಯಗಳಿಗೆ ಸರಿಬೀಳುತ್ತದೆ.

(೫) (೯ ನೇ ಶ್ರುತಿಯಲ್ಲಿ ಶ್ವಾಸವು "ಚಲಿಸಿಕೊಂಡುಂಟೋ" ಎಂದರೆ) ಬಿಡೋಣಾಗಿದೆಯೋ ಎಂದು ಅರ್ಥ.—

ಎಂದು ರಂಗರಾಮನುಜಾಚಾರ್ಯರು ಹೇಳುತ್ತಾರೆ.

ननुमनोवागगोचरजीवरूपत्वाद्ब्रह्मण: वाङ्मनसागोचरत्वोक्तिरयुक्तेत्यतो नतत्र चक्षुर्गच्छतीत्यादेस्तात्पर्योक्तिपूर्वकंपञ्च भिर्मन्त्रैर्भेदमाह यद्वाचेति । यद्ब्रह्मवाचानभ्युदितं साकल्येननोक्तं येनप्रेरितासतीवाक् अभ्युद्यते पुरुषैरुच्चार्यते तदेवत्वं ब्रह्मविद्धि जानीहि। नेदंजीवरूपंब्रह्मतेतत्र उपसमीपे आस । × । आस्तेनियामकतयावर्तते इदमेवब्रह्मेतितदेवविद्धीत्यर्थ: । एवमग्रेप्यर्थो ध्येय: ॥पुरुषेनमनुते मतंविज्ञातं ॥ चक्षूंषि पश्यन्ति दृश्यन्तइत्यर्थ: ॥ नमनुतेइत्यादौ साकल्येनतिजेयं ॥ प्राणेनमुख्यवायुनानप्राणितिनचेष्टते प्रणीयतेप्रेर्यते ॥ रा. ॥.

ಬ್ರಹ್ಮಕ್ಕೆ ಮನಸು ಮತ್ತು ವಾಗಿಂದ್ರಿಯಗಳಿಗೆ ಗೋಚರವಾಗುವ ಜೀವರೂಪವಾದ್ದರಿಂದ ವಾಕ್ ಮನಸುಗಳಿಗೆ ಅಗೋಚರತ್ವಪ್ರತಿಪಾದನೆ ಮಾಡುವದು ಯುಕ್ತವಲ್ಲೆಂಬ ಆಕ್ಷೇಪವನ್ನು ಪರಿಹರಿಸುವದಕ್ಕಾಗಿ "ಕಣ್ಣು ಅದರ ಬಳಿಗೆ ಹೋಗುವದಿಲ್ಲ" ಎಂದು ವಗೈರೆ ೩ ನೇ ಶ್ರುತಿಯಲ್ಲಿ ಹೇಳುವ ಹೇಳಿಕೆಗಳಿಗೆ ತಾತ್ಪರ್ಯರೂಪವಾಗಿ ೫ ಮಂತ್ರಗಳಿಂದ ಜೀವಗೂ ಬ್ರಹ್ಮಕ್ಕೂ ಭೇದಹೇಳೋಣಾಗುತ್ತದೆ. ಯಾವದಂದರೆ:—

(೧) ಯಾವದು ಮಾತಿನಿಂದ ಸಂಪೂರ್ಣವಾಗಿ ವಿವರಿಸಲ್ಪಡುವದಿಲ್ಲವೊ, ಯಾವದರಿಂದ ಪ್ರೇರಿಸಲ್ಪಟ್ಟರೆ ಜನರಿಂದ ಮಾತು ಉಚ್ಚರಿಸಲ್ಪಡುತ್ತದೋ ಅದೇ ಬ್ರಹ್ಮವೆಂದು ನೀನು ತಿಳಿ. ಜೀವರೂಪವಾಗಿರುವದು ಬ್ರಹ್ಮವಲ್ಲ; (ಪರಂತ್ತು)ನಿನ್ನ ಸಮೀಪದಲ್ಲಿ ಈ ನಿಯಾಮಕಸ್ವಭಾವದಲ್ಲಿರುವದೇ ಬ್ರಹ್ಮವೆಂದು ನೀನು ತಿಳಿ ಎಂದು ಅರ್ಥ. ಮುಂದೆಯೂ ಹೀಗೆಯೇ ಅರ್ಥ ತಿಳಕೊಳ್ಳ ಬೇಕಾಗಿರುತ್ತದೆ.

(೨) ಪುರುಷನು (ಯಾವದನ್ನು) ಮನಸಿನಿಂದ ಯೋಚಿಸುವದಿಲ್ಲವೊ (ಯಾವದು ಮನಸ್ಸನ್ನು) ತಿಳದದೋ) ;

ಯೋಚಿಸುವದಿಲ್ಲವೋ ಎಂಬ ಮೊದಲಾದ ವಾಕ್ಯಗಳಲ್ಲಿ "ಸಂಪೂರ್ಣವಾಗಿ" ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು.

(೩) (ಯಾವದನ್ನು) ಕಣ್ಣುಗಳು ಕಾಣುವದಿಲ್ಲವೊ ಎಂದು ಅರ್ಥ.

(೫) (ಯಾವದನ್ನು) ಮುಖ್ಯವಾಯುವು ಅಲಿಗಿಸುವದಿಲ್ಲವೋ (ಯಾವದು ಆ ವಾಯುವನ್ನು) ಪ್ರೇರಿಸುತ್ತದೋ;

(ಅದೇ ಬ್ರಹ್ಮವೆಂದು ತಿಳಿ ಎಂದು ಅರ್ಥ) ಎಂಬದಾಗಿ ಮಾಧ್ವರು ಹೇಳುತ್ತಾರೆ.

* * * * * * *

॥ अविज्ञातं विजानतामित्यवधृतं । यदिब्रह्मात्यन्तमेवाविज्ञातं लौकिकानांब्रह्मविदाञ्चाविशेषः प्राप्तः । अविज्ञातंविजानतामितिचपरस्पराविरुद्धं । कथंतुतद्ब्रह्मसम्यग्विदितं भवतीत्येवमर्थमाह । प्रतिबोधविदितं बोधंबोधंप्रतिविदितं । बोधशब्देनबौद्धाः प्रत्ययाउच्यन्ते । सर्वेप्रत्ययाः विषयीभवन्तियस्य स आत्मा सर्वबोधान् प्रतिबुध्यते सर्वप्रत्ययदर्शी चिच्छक्तिस्वरूपमात्रः प्रत्ययैरेव प्रत्ययेष्वविशिष्टतयालक्ष्यते नान्यद्वारान्तरात्मनो विज्ञानाय । अतःप्रत्ययप्रत्यगात्मतया विदितं ब्रह्मयदातन्मतं तदातत्सम्यग्दर्शनामित्यर्थः । सर्वप्रत्ययदर्शित्वे चोपजननापायवर्जितदृक्स्वरूपतानित्यत्वं विशुद्धस्वरूपत्व मात्मत्वं निर्विशेषतैकत्वं चसर्वभूतेषुसिद्धं भवेत् । लक्षणभेदाभावात् व्योम्नइवघटगिरिगुहादिषु । विदिताविदिताभ्यामन्यद्ब्रह्मे त्यागमवाक्यार्थ एवं परिशुद्धएवोपसंहृतो भवति ।×। यदापुनर्बोधक्रियाकर्तेति बोधक्रियालक्षणेनतत्कर्तारं विजानातीति बोधलक्षणेनाविदितं प्रतिबोधविदितमिति व्याख्यायते, यथायोवृक्षशाखाश्चालयतिसवायुरितितद्वत् । तदाबो-

(ಈಗ) ಬ್ರಹ್ಮವು ಬುದ್ಧಿವಂತರಿಗೆ ತಿಳದು ಬರಲಿಲ್ಲ ಎಂದು (ಮೇಲೆ ೧೨ನೇ ಶ್ರುತಿಯಲ್ಲಿ) ನಿರ್ಣಯಿಸೋಣಾಯಿತು. ಬ್ರಹ್ಮವು ತೀರಾ ತಿಳದು ಬಾರದೇ ಇರುವ ಪಕ್ಷದಲ್ಲಿ ಲೌಕೀಕರಿಗೂ ಬ್ರಹ್ಮವನ್ನು ತಿಳದವರಿಗೂ ಸಮತ್ವಉಂಟಾಗುತ್ತದೆ; ಮತ್ತು ಬುದ್ಧಿವಂತರಿಗೆ ತಿಳಿಯಲಿಲ್ಲ ಎನ್ನುವದು ಪರಸ್ಪರವಿರುದ್ಧವಾದ ಹೇಳಿಕೆಯಾಗಿರುತ್ತದೆ. ಹಾಗಾದರೆ ಬ್ರಹ್ಮವು ಯಾವ ರೀತಿಯಿಂದ ಚನ್ನಾಗಿ ಗೊತ್ತಾದೀತು? ಎಂಬ ಪ್ರಶ್ನೆಯು ಹುಟ್ಟುವದರಿಂದ ಅದರ ಪರಿಹಾರವನ್ನು (೧೩ ನೇ ಶ್ರುತಿಯಿಂದ) ಹೇಳೋಣಾಗುತ್ತದೆ.—(ಬ್ರಹ್ಮವು) ಪ್ರತಿ ಒಂದು ಬೋಧೆಯ ವಿಷಯದಲ್ಲಿಯೂ (ಅದಕ್ಕೆ ಸಮ್ಮಂಧಪಟ್ಟು) ತಿಳಿದುಬರುವಂಥಾದ್ದು. (ಇಲ್ಲಿ) "ಬೋಧೆ" ಶಬ್ಧದಿಂದ ಬುದ್ಧಿಗೆ ಸಮ್ಮಂದಪಟ್ಟ ಗ್ರಹಿಕೆಗಳು ಹೇಳಲ್ಪಡುತ್ತವೆ. ಸಕಲ ಬೋಧೆಗಳೂ ಯಾರಿಗೆ ವಿಷಯವಾಗುತ್ತವೋ (ಗೊತ್ತಾಗುತ್ತವೊ) ಅವನು ಆತ್ಮನಾಗಿರುತ್ತಾನೆ. ಸಕಲ ಬೋಧೆಗಳ ವಿಷಯದಲ್ಲಿಯೂ ಅವನು ತಿಳದು ಬರುತ್ತಾನೆ. ಸಕಲ ಗ್ರಹಿಕೆಗಳಿಗೂ ಅವನು ಸಾಕ್ಷಿಯಾಗಿರುತ್ತಾ

धाक्रियाशक्तिमानात्माद्रव्यं नबोधस्वरूप एव । बोधस्तुजायते विनश्यतिच । यदा बोधोजायते तदाबोधक्रिययासविशेषः यदा बोधोनश्यति तदानष्टबोधो द्रव्यमात्रंनिर्वि- शेषः । तत्रैवंसतिविक्रियात्मकः सावयवो- ऽनित्योऽशुद्धइत्यादयोदोषा नपरिहर्तुंशक्य- न्ते । यदपिकाणादानां आत्मनः संयोगजो बोध आत्मनिसमवैति अतआत्मनिबोद्धृत्वं नतुविक्रियात्मक आत्माद्रव्यमात्रस्तुभवति घटइवरागसमवायी । अस्मिन्पक्षेप्यचेतनं द्रव्यमात्रंब्रह्मेति विज्ञानमानदं प्रज्ञानं ब्रह्मे त्याद्याः श्रुतयोबाधितास्युः । आत्मनोनिरव यवत्वेन प्रदेशाभावान्नित्यसंयुक्तत्वाच्चमन सः स्मृत्युत्पत्तिनियमानुपपत्तिरपरिहार्या- स्यात् । संसर्गधर्मित्वंचात्मनः श्रुतिस्मृति न्यायविरुद्धंकल्पितंस्यात् ।×। तस्मान्नित्या लुप्तज्ञानस्वरूपज्योतिरात्माब्रह्मेत्ययमर्थः : सर्वबोधबोद्धृत्वे आत्मनः सिध्यति । नान्य- था । तस्मात्प्रतिबोधविदितं मतामिति य- थाव्याख्यातएवार्थोऽस्माभिः । यत्पुनः स्वसंवेद्यताप्रतिबोधबिदितामित्यस्यवाक्यस्या र्थोवर्ण्यते । तत्रभवतिसोपाधिकत्वमा त्मनः । बुध्युपाधिस्वरूपत्वेनभेदं परिकल्प्या त्मानंवेत्तीतिसंव्यवहारः ।×। नतुनिरुपाधि कस्यात्मनएकत्वे स्वसंवेद्यतावासंभवति । संवेदनस्वरूपत्वात्संवेदनान्तरापेक्षाचनसंभ वति । यथाप्रकाशस्यप्रकाशान्तरापेक्षाया-

ನೆ. ಅವನ ಸ್ವರೂಪವು ಚಿತ್ (ಜ್ಞಾನ) ಶಕ್ತಿ ಮಾತ್ರವಾದದ್ದು. ಗ್ರಹಿಕೆಗಳಿಂದಲೇ ಅವುಗಳಲ್ಲಿ ಅವುಗಳ ಹೊರತಾದವನಲ್ಲದಂತೆ ತೋರುತ್ತಾನೆ. ಅಂತರಾತ್ಮನನ್ನು ತಿಳಿಯಲಿಕ್ಕೆ ಬೇರೆ ಉಪಾಯವಿಲ್ಲ. ಆದಕಾರಣ ಬ್ರಹ್ಮವು ಗ್ರಹಿಕೆಗಳಲ್ಲಿರುವ (ಅವುಗಳ ಸಾಕ್ಷಿಯಾದ) ಸ್ವಭಾವಉಳ್ಳದ್ದೆಂದು ಯಾವಾಗ ತಿಳಿಯೋಣಾಗುತ್ತದೋ, ಆಗ ಅದೇ ಅದನ್ನು ಚನ್ನಾಗಿ ಕಂಡುಕೊಳ್ಳೋಣವೆಂದು ಹೇಳಲ್ಪಡುತ್ತದೆ. ಸಕಲ ಗ್ರಹಿಕೆಗಳಿಗೂ ಸಾಕ್ಷಿಯಾಗಿರುವ ಸ್ವಭಾವವಾದ ಪಕ್ಷದಲ್ಲಿ (ಮಾತ್ರ) ಗಡಿಗೆ, ಗುಡ್ಡೆ, ಗುಹೆ, ಮೊದಲಾದ ಸ್ಥಳಗಳಲ್ಲಿರುವ ಆಕಾಶದಂತೆಯೇ ಗುರ್ತಭೇದ ಇಲ್ಲದೇ ಇರುವ ಪ್ರಯುಕ್ತ ಜನನಮರಣವಿಲ್ಲದ, ಜ್ಞಾನರೂಪಸ್ವಭಾವ, ನಿತ್ಯತ್ವ, ಶುಚಿರೂಪತ್ವ, ಆತ್ಮತ್ವ, ಸಕಲಪ್ರಾಣಿಗಳಲ್ಲಿಯೂ ಹೆಚ್ಚುಕಡಿಮೆ ಇಲ್ಲದೇ ಏಕಪ್ರಕಾರ ಇರೋಣ ಸಹ ಸ್ಥಾಪಿಸಲ್ಪಡುತ್ತದೆ. ಇದೇ ಬ್ರಹ್ಮವು ತಿಳದು ಬಂದದ್ದು ಮತ್ತು ಗೊತ್ತಾಗದಿದ್ದ ವಸ್ತುವಿಗಿಂತ ಬೇರೆಯಾದದ್ದೆಂದು ಹೇಳುವ ಶ್ರುತಿಯು ಚೊಕ್ಕವಾದ ಸಂಗ್ರಹಾರ್ಥವಾಗಿರುತ್ತದೆ.

ಹಾಗಲ್ಲದೆ ಒಂದು ಮರದ ಗೆಲ್ಲು ಹಂದುವದರಿಂದ ಅದನ್ನು ಹಂದಾಡಿಸುವದು ಘಾಳಿ ಎಂದು ತಿಳಿಯುವಂತೆ, ಪ್ರತಿಬೋಧೆಯ ವಿಷಯದಲ್ಲಿ ತಿಳದು ಬಂದ

नसंभवः तद्वत् । बौद्धपक्षेस्वसंवेद्यतायांतु क्षणभङ्गुरत्वंनिरात्मकत्वञ्च विज्ञानस्यस्यात् । × । यत्पुनःप्रतिबोधशब्देन निर्निमित्तो बोधः प्रतिबोधः यथासुप्तस्येत्यर्थं परिकल्प यन्ति । सकृद्विज्ञानं प्रतिबोधइत्यपरे । निर्निमित्तः सनिमित्तः सकृद्वाऽसकृद्वाप्रतिबो धएवहिसः ॥ अमृतत्वं अमरणभावं स्वात्मन्यवस्थानं मोक्षं हि यस्माद्विन्दतेलभते यथोक्तात्प्रतिबोधात्प्रतिबोधविदितात्मका त्तस्मात्प्रतिबोधविदितमेवमतामित्यभिप्रा यः । बोधस्यहि प्रत्यगात्मात्मविषयं मतम मृतत्वे हेतुः । नह्यात्मनोऽनात्मत्वादात्मनोऽमृतत्वं । निर्निमित्तमेव । एवं मर्त्यत्वं आत्मनः यदविद्ययाऽनात्मप्रतिपत्तिः । कथंपुन र्यथोक्तयाऽत्मविद्ययाऽमृतत्वं विन्दतइति अतआह आत्मनास्वेनेस्वरूपेण । विन्दते लभते । वीर्यबलं सामर्थ्यं । धनसहायमंत्रौषधितपोयोगकृतंवीर्यं मृत्युंनशक्नोत्यभिभ वितुं । अनित्यवस्तुकृतत्वात् । आत्मविद्या कृतंतुवीर्यमात्मनैवविन्दते नान्येनेत्यतोऽन न्यसाधनत्वादात्मविद्यावीर्यस्य । तदेव वीर्यंमृत्युंशक्नोत्याभिभवितुं । यतएवमात्मविद्याकृतवीर्यं आत्मनैवविन्दतेऽतोविद्यया आ त्मविषययाविन्दतेऽमृतं । × । ॥ शं ॥.

ಎಂಬ ವಾಕ್ಯಕ್ಕೆ "ಬೋಧೆಯಿಂದ" ತಿಳದು ಬಂದದ್ದು ಎಂದರೆ (ಅ) ಬೋಧೆಯನ್ನು ಹುಟ್ಟಿಸುವ ಕೃತ್ಯದ ಆಧಾರದ ಮೇಲೆ ಅದನ್ನುಂಟುಮಾಡುವ, ಕರ್ತೃವನ್ನು ತಿಳಿಯುತ್ತಾನೆ ಎಂದು ಅರ್ಥ ಮಾಡಿದ ಪಕ್ಷದಲ್ಲಿ, ಆಗ ಬೋಧೆಯನ್ನುಂಟುಮಾಡುವ ಶಕ್ತಿಯುಳ್ಳ ದ್ರವ್ಯವೇಆತ್ಮನಾಗುವದಲ್ಲದೆ, ಬೋಧೆಯಸ್ವರೂಪವು ಆತ್ಮವಾಗುವದಿಲ್ಲ. ಬೋಧೆಗೆ ಹೇಗೂ ಉತ್ಪತ್ತಿ ನಾಶಗಳಿವೆ. ಯಾವಾಗ ಬೋಧೆಯಾಗುತ್ತದೋ ಆಗ (ಅ) ಬೋಧೆಯನ್ನುಂಟು ಮಾಡುವ ಕ್ರಿಯೆಯ ಜೊತೆಯಲ್ಲಿ ಶೇರಿಕೊಳ್ಳುತ್ತಾನೆ. ಅದು ನಾಶವಾದಾಗ ಅದನ್ನುಂಟುಮಾಡಿದವನು ಬೋಧೆ ಇಲ್ಲದ ಬರೀ ದ್ರವ್ಯ ಮಾತ್ರವೇ ಆಗುತ್ತಾನೆ. ಹೀಗಾಗುತ್ತಿರಲಾಗಿ ಆತ್ಮನು ವಿಕಾರವಾಗುವವನು, ಅವಯುವವಿಶಿಷ್ಟನಾದವನು, ನಿತ್ಯನಲ್ಲದವನು, ಅಶುದ್ಧನು ಎಂದು ವಗ್ಯೈರೆ ಉಂಟಾಗುವ ಆಕ್ಷೇಪಗಳನ್ನು ಪರಿಹರಿಸಕೂಡದು.

ಕಣಾದ ಋಷಿಗಳ ಮತಪ್ರಕಾರ ಆತ್ಮಗೆ (ಮನಸ್) ಸಂಯೋಗದಿಂದುಟಾಗುವ ಬೋಧೆಯು ಅವನಲ್ಲಿ ಕೂಡಿಕೊಂಡುಂಟು; ಆದ್ದರಿಂದ ಅವಗೆ ತಿಳಿಯುವ ಶಕ್ತಿ ಉಂಟಾಗಿದೆ, ಅವನು ವಿಕಾರವಾಗುವವನಲ್ಲ, ಪರಂತು ಒಂದು ಗಡಿಗೆಯು ಹೇಗೆ ವರ್ಣ ಸಮೇತವಾಗಿರುತ್ತದೋ ಅದರಂತೆಯೇ ದ್ರವ್ಯ ಮಾತ್ರವೇ ಆಗಿರುತ್ತಾನೆ. ಈ ಪಕ್ಷದಲ್ಲಿ ಕೂಡಾ ಬ್ರಹ್ಮವು ಅಚೇತನ ದ್ರವ್ಯಮಾತ್ರವೇ ಆಗಿ ಅದು ವಿಶೇಷತರಹದ ಜ್ಞಾನ, ಆನಂದ

ಅತ್ಯುತ್ಕೃಷ್ಟವಾದಜ್ಞಾನ ಎಂಬ ಶ್ರುತಿಗಳಿಗೆ ಬಾಧಕಸಂಭವಿಸುತ್ತದೆ. ಇದಲ್ಲದೆ, ಆತ್ಮನು ಅವಯುವರಹಿತನಾದವನಾಗಿರುವ ಕಾರಣ ಅವಗೆ ಸ್ಥೂಳ ವಿಶೇಷವಿಲ್ಲದ ಪ್ರಯುಕ್ತ, ಮತ್ತು ಸದಾ ಅದರ ಜೊತೆಯಲ್ಲಿರುವವನಾದ್ದರಿಂದ ಮನಸ್ಸಿಗೆ ನೆನಪು ಉಂಟಾಗುವ ವಿಷಯದಲ್ಲಿ ಯಾವದೊಂದು ನಿಬಂಧನೆಯೂ ಪ್ರಯೋಜನವಿಲ್ಲದೇ ಹೋಗುತ್ತದೆಂಬ ಆಕ್ಷೇಪವನ್ನುಪರಿಹರಿಸಲಿಕ್ಕೆ ಸಾಧ್ಯವಿಲ್ಲದೇ ಹೋಗುತ್ತದೆ; ಮತ್ತು ಶ್ರುತಿ, ಸ್ಮೃತಿ, ನ್ಯಾಯಗಳಿಗೆವಿರೋಧವಾಗಿ ಆತ್ಮಗೆ ಸಂಗಗುಣಉಳ್ಳಸ್ವಭಾವವೂ, ಅಂಟುವ ಸ್ವಭಾವವೂ, ಕಲ್ಪಿಸಲ್ಪಡುತ್ತದೆ. ಆದಕಾರಣ ಆತ್ಮನು ನಿತ್ಯವಾದ ಮತ್ತು ಕಡಿಮೆಯಾಗದ ಜ್ಞಾನಸ್ವರೂಪಉಳ್ಳ ಜ್ಯೋತಿಯಾದ ಬ್ರಹ್ಮವೆಂಬ ಅರ್ಥವು ಆತ್ಮನು ಸಕಲ ಬೋಧೆಗಳನ್ನು ತಿಳಿಯುವದು (ಸಾಕ್ಷಿ) ಆಗಿರುವ ಪಕ್ಷದಲ್ಲಿ ಮಾತ್ರ ಹುಟ್ಟುತ್ತದಲ್ಲದೆ, ಇಲ್ಲವಾದರೆ ಹುಟ್ಟುವದಿಲ್ಲ. ಆದ್ದರಿಂದ ಪ್ರತಿಬೋಧೆಯ ವಿಷಯದಲ್ಲಿ ತಿಳದು ಬರುವವನು ಎಂಬ ವಾಕ್ಯಕ್ಕೆ ನಾವು ಹೇಳಿದ ಅರ್ಥವೇ ಸರಿಯಾಗಿರುತ್ತದೆ.

ಇದಲ್ಲದೆ (ಕೆಲವರು) ಪ್ರತಿಬೋಧೆಯ ವಿಷಯದಲ್ಲಿ ತಿಳದು ಬಂದ ಎಂಬ ವಾಕ್ಯಕ್ಕೆ ತಾನೇತನ್ನನ್ನು ತಿಳಿಯುವ ಸ್ವಭಾವ ಉಳ್ಳದ್ದೆಂದು ಅರ್ಥವೆಂದು ಹೇಳುತ್ತಾರೆ. ಆ ಪಕ್ಷದಲ್ಲಿ ಆತ್ಮಗೆ ಉಪಾಧಿ(ಅವಧಿ)ಯಕ್ತತ್ವವು ಉಂಟಾಗುತ್ತದೆ. ಜನಗಳು, ಆತ್ಮನು ಬುದ್ಧಿಯೇ ಉಪಾಧಿಯಾಗಿ ಉಳ್ಳ ಸ್ವಭಾವದವನು ಎಂಬ ಭೇದವನ್ನು ಕಲ್ಪಿಸಿಕೊಂಡು (ಉಪಾಧಿರಹಿತನಾದ) ತನ್ನನ್ನು ತಾನು ತಿಳಿಯುವವನೆಂದು ಆಡಿಕೊಳ್ಳುತ್ತಾರೆ. ಆದರೆ ಉಪಾಧಿರಹಿತನಾದ ಆತ್ಮನು ಒಬ್ಬನೇಯಾಗಿರುವದರಿಂದ ತನ್ನನ್ನು ತಾನು ತಿಳಿಯುವದೆಂಬದು ಆಗಲೀ, ಒಂದು ಬೆಳಕಿಗೆ ಇನ್ನೊಂದು ಬೆಳಕಿನ ಅಪೇಕ್ಷೆ ಹೇಗೆ ಆಗುವದಿಲ್ಲವೋ ಹಾಗೆ ತಾನೇ ಜ್ಞಾನಸ್ವರೂಪನಾಗಿರುವದರಿಂದ ಅವಗೆ ಇನ್ನೊಂದುನ ತಿಳಿಯಬೇಕೆಂಬ ಆಪೇಕ್ಷೆಯಾಗಲೀ, ಇರುವದಿಲ್ಲ.

ಬೌದ್ಧಮತಪ್ರಕಾರ (ಈ)ತನ್ನನ್ನು ತಾನು ತಿಳಿಯುವ ನ್ಯಾಯದಲ್ಲಿ, ಜ್ಞಾನಕ್ಕೆ ಕ್ಷಣಭಂಗುರತ್ವವು ನಿರಾತ್ಮಕತ್ವ (ತಿಳಿಯುವವನಿಲ್ಲದೆ ಹೋಗೋಣ)ವು ಸಂಭವಿಸುತ್ತವೆ. ಇದಲ್ಲದೆ, ಪ್ರತಿಬೋಧ ಶಬ್ದಕ್ಕೆ ಕೆಲವರು ನಿದ್ರಾವಸ್ಥೆಯಲ್ಲಿದ್ದವಗೆ ಸಂಭವಿಸುವ ಬೋಧೆಯಂತೆ ನಿರ್ನಿಮಿತ್ತ (ನಿಷ್ಕಾರಣ) ವಾದ ಬೋಧೆ ಎಂದು ಅರ್ಥ ಕಲ್ಪನೆಮಾಡುತ್ತಾರೆ. ಇನ್ನು ಕೆಲವರು "ಪ್ರತಿಬೋಧೆ" ಎಂದರೆ ಒಂದು ಸಲ ಉಂಟಾದ ಜ್ಞಾನವೆಂದು ಹೇಳುತ್ತಾರೆ. ಕಾರಣ ಉಳ್ಳದ್ದಾಗಲೀ, ನಿಷ್ಕಾರಣವಾದದ್ದಾಗಲೀ, ಒಮ್ಮೆ ಉಂಟಾದದ್ದಾಗಲೀ, ಹೆಚ್ಚು ಸಲ ಉಂಟಾದದ್ದಾಗಲೀ, ಅದು ಪ್ರತಿಬೋಧೆಯೇ(ಜ್ಞಾನವೇ).

ಅಮೃತತ್ವ ಎಂದರೆ ಸಾಯದೇ ಇರೋಣ, ತನ್ನಲ್ಲಿ ತಾನು ಶೇರಿಕೊಳ್ಳೋಣ, ಮೋಕ್ಷ. ಇದನ್ನು, ಮೇಲೆ ಹೇಳಲ್ಪಟ್ಟ ಪ್ರತಿಬೋಧೆಯನ್ನು ತಿಳಿಯುವ ಆತ್ಮನ ದೆಸೆಯಿಂದ ಪಡಿಯುವದರಿಂದ, ಪ್ರತಿಬೋಧೆಗೆ ಸಾಕ್ಷಿಯಾಗಿರುತ್ತಾನೆಂದು ತಿಳಿಯುವದೇ (ಬ್ರಹ್ಮವನ್ನು) ಚನ್ನಾಗಿ ತಿಳಿಯುವದೆಂದು ಅಭಿಪ್ರಾಯವಾಗಿರುತ್ತದೆ. ಬೋಧೆಯು ಪ್ರತ್ಯಗಾತ್ಮಗೆ ಸ್ವವಿಷಯವಾದದ್ದೆಂದು ತಿಳಿಯುವದೇ ಮೋಕ್ಷಕ್ಕೆ ಹೇತುವಾಗಿರುತ್ತದೆ. ಆತ್ಮಗೆ ಉಂಟಾಗುವ ಮೋಕ್ಷವು (ಬಂಧನಿವೃತ್ತಿಯು) ಅವನು ಆತ್ಮನಲ್ಲದೇ ಬೇರೆಯಾಗಿರುವ ಕಾರಣದಿಂದಲ್ಲ. ಅದು ನಿರ್ನಿಮಿತ್ತವಾಗಿ ಆಗುವದಾಗಿರುತ್ತದೆ. ಅದೇ ರೀತಿ ಆತ್ಮಗೆ ಸಾಯುವ ಸ್ವಭಾವವು ಅಜ್ಞಾನದಿಂದುಂಟಾಗುವಂಥಾ ಅವನು ಆತ್ಮನಲ್ಲೆಂಬ ಗ್ರಹಿಕೆಯೇ ಆಗಿರುತ್ತದೆ. ಹಾಗಾದರೆ ಮೇಲೆ ಹೇಳಿದಂತೆ ಆತ್ಮನನ್ನು ತಿಳಿಯುವದರಿಂದ ಒಬ್ಬನು ಮೊಕ್ಷವನ್ನು ಪಡಿಯುತ್ತಾನೆಂಬದು ಹೇಗೆ? ಎಂದರೆ ಆತ್ಮವಿಷಯವಾದ ವಿದ್ಯದ ಸಾಮರ್ಥ್ಯದಿಂದ ಪಡಿಯುತ್ತಾನೆ. ಹಣಸಹಾಯ, ಮಂತ್ರ, ಔಷಧಿ, ತಪಸ್ಸು, ಯೋಗ ಇವುಗಳಿಂದುಂಟಾಗುವ ಸಾಮರ್ಥ್ಯವು ಮೃತ್ಯುವನ್ನು ಜಯಿಸುವದಕ್ಕೆ ಶಕ್ತವಾಗುವದಿಲ್ಲ. ಯಾಕಂದರೆ ಅದು ಅನಿತ್ಯವಾದ ವಸ್ತುಗಳಿಂದುಂಟಾದದ್ದಾಗಿರುತ್ತದೆ. ಆತ್ಮವಿದ್ಯದಿಂದೆ ಉಂಟಾದ ಸಾಮರ್ಥ್ಯವು, ಆತ್ಮನಿಂದಲೇ ದೊರಕುತ್ತದಲ್ಲದೆ ಬೇರೆ ಯಾತರಿಂದಲೂ ಅಲ್ಲ. ಆದಕಾರಣ ಆತ್ಮವಿದ್ಯಾಸಾಮರ್ಥ್ಯವನ್ನು ಸಂಪಾದಿಸಲಿಕ್ಕೆ ಬೇರೆ ಸಾಧನವಿಲ್ಲದ ಪ್ರಯುಕ್ತ ಆ ಸಾಮರ್ಥ್ಯವೇ ಮೃತ್ಯುವನ್ನು ಜಯಿಸಲಿಕ್ಕೆ ಶಕ್ತವಾಗುತ್ತದೆ. ಈ ರೀತಿ ಆತ್ಮವಿದ್ಯದಿಂದುಂಟಾದ ಸಾಮರ್ಥ್ಯವು ಆತ್ನನಿಂದಲೇ ಶಿಕ್ಕುವ ಕಾರಣ ಆತ್ಮನ ವಿಷಯವಾದ ವಿದ್ಯದಿಂದ ಮೋಕ್ಷವನ್ನು ಪಡಿಯುವದಾಗಿರುತ್ತದೆ ಎಂದು ಶಂಕರಾಚಾರ್ಯರು ವಿವರಿಸುತ್ತಾರೆ.

॥ प्रतिबोधेति । प्रतिनियतोबोधः प्रतिबोधः । सत्यत्वज्ञानत्वानन्तत्वादिरूपासाधारणधर्मविशिष्टतयाज्ञातममृतंब्रह्मस्वरूपं । तत्क्रतुन्यायेनस्वोपासकस्यापि अमृतत्वंविन्दतेलम्बयतीत्यर्थः। लंबनप्रकारमाह आत्मनाविन्दतेवीर्यमिति । × । विद्यानिष्पत्यनुकूलंवीर्यप्रसन्नेनपरमात्मनालभते । प्रसन्नपरमात्मा हितवीर्यार्जितया विद्ययाऽमृत-

ಪ್ರತಿಬೋಧೆ ಎಂದರೆ ನಿಶ್ಚಿತ ಜ್ಞಾನ. ಮರಣರಹಿತವಾದ ಬ್ರಹ್ಮಸ್ವರೂಪವು ಸತ್ಯತ್ವ, ಜ್ಞಾನತ್ವ, ಅನಂತತ್ವ (ನಿರವಧಿಕ ಸ್ವಭಾವ) ಮೊದಲಾದ ರೂಪವಾದ ಅಸಾಧಾರಣ ಗುಣಗಳುಳ್ಳದೆಂದು ತಿಳಿಯೋಣಾದದ್ದು. (ಅದು) ತನ್ನನ್ನು ಉಪಾಸಿಸುವವಗೆ ಕೂಡಾ ಅಮೃತತ್ವವನ್ನು ನೀಡುತ್ತದೆ ಎಂದು ಅರ್ಥ. ಹೇಗೆ ನೀಡುತ್ತ

त्वमश्नुतइत्यर्यः ॥ रं ॥. ದೆಂದರೆ- ಜ್ಞಾನೋತ್ಪತ್ತಿಗನುಕೂಲವಾದ ಶಕ್ತಿಯು ಪ್ರಸನ್ನನಾದಂಥಾ ಪರಮಾತ್ಮನಿಂದ ದೊರಕುತ್ತದೆ. ಅವನಿಂದ ಕೊಡಲ್ಪಟ್ಟ ಆ ಶಕ್ತಿಯ ಮೂಲಕವಾಗಿ ಸಂಪಾದಿಸಿದ ಜ್ಞಾನದಿಂದ ಅಮೃತತ್ವ(ಮೋಕ್ಷ)ವನ್ನು ಪಡಿಯುತ್ತಾನೆಂದು ಅರ್ಥವೆಂದು ರಂಗರಾಮಾನುಜಾಚಾರ್ಯರ ಅಭಿಪ್ರಾಯವಾಗಿರುತ್ತದೆ.

॥ ब्रह्मण: साकल्येनाज्ञेयत्वेकथं तेनइष्ट सिद्धिरित्यत:स्वस्वयोग्यैकदेशज्ञानादेवेष्टंसिद्धिरित्याह प्रतिबोधविदितमिति । श्रुतमितिशेष: । स्वस्वयोग्यतानुसारेणपुंभि: श्रुतं मतं विचारितंविदितंब्रह्मविन्दतेलभते ।प्रापयतीत्यर्थतयावायोज्यं । हिप्रासिद्धं ।नकश्चिद्ब्रह्मवित्स्रतिरनुभवति मुक्तोह्येवभवतीत्यादावित्यर्थ:।×। ज्ञानेनामृतत्वंविन्दतेचेत्तेनैवकिं स्वयोग्यसर्वानन्दप्राप्तिरित्यतो न–किन्तु-ज्ञानोत्तरकर्मणापीत्याह आत्मनेति । अत्मशब्दोत्रज्ञानोत्तरकालीन यज्ञादिप्रयत्नपर: । आत्मना आत्मीययज्ञादिप्रयत्नेनवीर्यं-आनन्दातिशयं–विन्दतेलभते । विद्ययाऽपरोक्षज्ञानेनामृतं—अविद्यापरिहाररूपांमुक्तिं–प्राप्नोतीतिविद्धीत्यनुषंगेनयोज्यं ॥ रा ॥.

ಬ್ರಹ್ಮವು ಪೂರ್ಣವಾಗಿ ತಿಳಿಯದಂಥಾದ್ದಾದ ಮೇಲೆ, ಅದರಿಂದ ಇಷ್ಟಸಿದ್ಧಿಯಾಗುವದು ಹೇಗೆ? ಎಂದರೆ ತನತನಗೆ ಕೂಡುವಷ್ಟು ತಿಳಿಯೋಣದರಿಂದಲೇ ಇಷ್ಟಸಿದ್ಧಿಯಾಗುತ್ತದೆಂಬ ಅರ್ಥವನ್ನು ಪ್ರಸ್ತುತ (೧೩ನೆ) ಶ್ರುತಿಯು ಹೇಳುತ್ತದೆ, ಎಂದರೆ ಆ ರೀತೀ ಹೇಳುತ್ತಾರೆಂದು (ಶ್ರುತಿಯಲ್ಲಿ)ಹೇಳಲಿಕ್ಕೆ ಬಿಟ್ಟದನ್ನು ಶೇರಿಸಿಕೊಳ್ಳಬೇಕು. ಜನರು ತಮ್ಮತಮ್ಮ ಯೋಗ್ಯತಾನುಸಾರವಾಗಿ ಬ್ರಹ್ಮವನ್ನು ಕೇಳಿ ಯೋಚಿಸಿ, ವಿಚಾರಿಸಿ, ತಿಳದರೆ (ಮೋಕ್ಷವನ್ನು) ಪಡಿಯುತ್ತಾರೆ, ಅಥವಾ ಅದು (ಮೋಕ್ಷವನ್ನು) ಶಿಕ್ಕಗೊಳಸುತ್ತದೆ ಎಂದು ಅರ್ಥಯೋಜನೆ ಮಾಡಬೇಕು. (ಮೋಕ್ಷದೊರಿಯುತ್ತದೆಂಬದು) ಪ್ರಸಿದ್ಧವಾದದ್ದು. ಬ್ರಹ್ಮವನ್ನು ತಿಳದವರಲ್ಲಿ ಯಾವನೊಬ್ಬನೂ ಪುನಹ ಹುಟ್ಟುವದಿಲ್ಲ, ಆದಿಯಲ್ಲಿಯೇ ನಿಶ್ಚಯವಾಗಿ ಮುಕ್ತಿಯನ್ನು ಪಡಿಯುತ್ತಾನೆಂದು ಅರ್ಥ.

ಜ್ಞಾನದಿಂದ ಮುಕ್ತಿ ದೊರಿಯುವದಾದರೆ, ಅದರಿಂದಲೇ ಒಬ್ಬಗೆ ಯೋಗ್ಯವಾದ ಪೂರ್ಣಾನಂದವು ಶಿಕ್ಕುತ್ತದೋ ಎಂದರೆ, ಇಲ್ಲ. ಪರಂತು ಜ್ಞಾನ ಉಂಟಾದ ತರುವಾಯ(ಅವನು)ಮಾಡುವ ಕರ್ಮವೂ (ಅದರೊಂದಿಗೆ) ಶೇರಿ, ಪೂರ್ಣಾನಂದವನ್ನುಂಟುಮಾಡಿಕೊಡುತ್ತದೆಂದು ಶ್ರುತಿಯ ಉತ್ತರಾರ್ಧದಿಂದ ಹೇಳೋಣಾಗುತ್ತದೆ. (ಅದರಲ್ಲಿ ಪ್ರಯೋಗಿಸಿರುವ) ಆತ್ಮಶಬ್ದವು ಜ್ಞಾನ ಉಂಟಾದ ತರುವಾಯ ಮಾಡುವ ಯಜ್ಞಮೊ

ದಲಾದ ಪ್ರಯತ್ನಪರವಾದದ್ದು. ತಾನು ಮಾಡುವ ಯಜ್ಞಾದಿಪ್ರಯತ್ನದಿಂದ ಆನಂದಾತಿಶಯವನ್ನು ಪಡಿಯುತ್ತಾನೆ. ಅಪರೋಕ್ಷಜ್ಞಾನದಿಂದ ಅಜ್ಞಾನಪರಿಹಾರರೂಪವಾದಂಥಾ ಮುಕ್ತಿಯನ್ನು ಹೊಂದುತ್ತಾನೆಂದು ಒಟ್ಟು ಕೂಡಿಸಿ ಅರ್ಥಮಾಡಬೇಕು ಎಂದು ಮಾಧ್ವರು ಹೇಳುತ್ತಾರೆ.



# ಸಂಯೋಜಿತ. (Appendix.)

(೧) ಕಳದ XIನೇ ಪಾಠದಲ್ಲಿ ನಮ್ಮ ಆತ್ಮನು ಸಾವಿಲ್ಲದ ಮತ್ತು ಭಯವಿಲ್ಲದವನಾದರೂ, ಸುಖದುಃಖಗಳಿಗೆ ಆಸ್ಪದವಾದ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಅವಸ್ಥಾತ್ರಯಕ್ಕೆ ಒಳಪಟ್ಟಿರುತ್ತಾನೆ; ಈ ಅವಸ್ಥೆಗಳಿಂದ ಅವನನ್ನು ವಿರಹಿತಪಡಿಸದ ವಿನಹ ಅವನ ನಿಜವಾದ ಸ್ವಭಾವವು ತಿಳಿದುಬರುವದಿಲ್ಲೆಂದು ಹೇಳೋಣಾಯಿತು. ಈ ಅವಸ್ಥೆಗಳು ಪ್ರಸಿದ್ಧವಾದ, ಮತ್ತು ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳುವ, ಪ್ರಾಂತದಲ್ಲಿ ಕಾಣಿಸಿದ ಹೆಸರುಗಳುಳ್ಳ ೫ ಕೋಶಗಳಿಗೆ ಸಮ್ಮಂಧಪಟ್ಟವುಗಳಾಗಿರುವದರಿಂದಲೂ, ಹಿಂದೆ ಹೋದ ಪಾಠಗಳಲ್ಲಿ ಆ ಕೋಶಗಳು ಫಲಾಣೀಯವುಗಳೆಂದು ನಿಶ್ಚೈಸಲಿಕ್ಕೆ ಬೇಕಾದದ್ದೆಲ್ಲ ಹೇಳಿರುವದಾದರೂ, ಪ್ರಸ್ತುತ ಜಾಗ್ರದಾದ್ಯವಸ್ಥೆಗಳನ್ನು ಆ ಕೋಶಗಳಿಗೆ ಹಂಚಿ ಹಾಕುವ ಪಕ್ಷದಲ್ಲಿ, ಯಾವ ಅವಸ್ಥೆಗೆ ಯಾವ ಕೋಶ, ಅಥವಾ, ಕೋಶಗಳನ್ನು ವಿಂಗಡಿಸಬೇಕೆಂದು ಒಬ್ಬನ ಕೂಡೆ ಪ್ರಶ್ನೆ ಮಾಡಿದರೆ, ಆತನು ಏಕಾಏಕೀ ಉತ್ತರಹೇಳಲಿಕ್ಕೆ ಸಮರ್ಥನಾಗಲಾರನಾದ್ದರಿಂದ ಕೂಡಾ, ಓದುವವರ ತಿಳುವಳಿಕೆಗೋಸ್ಕರ ಆ ಸಂಗತಿಯನ್ನು ಸಂಕ್ಷೇಪವಾಗಿ ಈ ಕೆಳಗೆ ವಿವರಿಸೋಣಾಗುತ್ತದೆ.

೧ ಅನ್ನರಸಮಯ
೨ ಪ್ರಾಣಮಯ
೩ ಮನೋಮಯ
೪ ವಿಜ್ಞಾನಮಯ
೫ ಆನಂದಮಯ

## ೧ನೇ ಜಾಗ್ರದವಸ್ಥೆ.

(೨) XIನೇ ಪಾಠದಲ್ಲಿ ವಿವರಿಸಿದ ಪ್ರಕಾರ ಆತ್ಮನು ಜಾಗ್ರದವಸ್ಥೆಯಲ್ಲಿ ಕಂಣಿನಲ್ಲಿ ತೋರುತ್ತಾನೆ; ಈ ಶರೀರವು ಚನ್ನಾಗಿ ಅಲಂಕರಿಸಲ್ಪಟ್ಟಿದ್ದರೆ ಚನ್ನಾಗಿ ಅಲಂಕರಿಸಲ್ಪಟ್ಟಿರುವಂತೆ, ಒಳ್ಳೇ ವಸ್ತ್ರವನ್ನು ಧರಿಸಿಕೊಂಡಿದ್ದರೆ ಒಳ್ಳೇವಸ್ತ್ರವನ್ನು ಧರಿಸಿಕೊಂಡಿರುವಂತೆ, ಪರಿಷ್ಕಾರಮಾಡಲ್ಪಟ್ಟಿದ್ದರೆ ಪರಿಷ್ಕಾರವಾಗಿರುವಂತೆ, ಹೇಗೋ ಹಾಗೆಯೇ ಈ ಶರೀರಕ್ಕೆ ಕಣ್ಣಿಲ್ಲದಿದ್ದರೆ ಅವನೂ ಕುರುಡನಂತೆ, ಇದು ರೋಗಿಷ್ಟವಾಗಿದ್ದರೆ ಅವನೂ ರೋಗಿಷ್ಟನಂತೆ, ಮೋಟಾಗಿದ್ದರೆ ಮೋಟನಂತೆ,ಈ ಶರೀರವೇ ನಾಶಪಟ್ಟರೆ ಅವನೂ ನಾಶಪಟ್ಟಂತೆ ಸಹ ತೋರುವದರಿಂದ, ೧ನೇದಾದ ಅನ್ನರಸಮಯಕೋಶ(ಹೊರಗಿನ ನಮ್ಮಸ್ಥೂಲಶರೀರ)ವನ್ನುಜಾಗ್ರದವಸ್ಥೆಗೋಸ್ಕರ ಪ್ರತ್ಯೇಕಿಸಲಿಕ್ಕೇನೂ ಅಭ್ಯಂತರ ತೋರುವದಿಲ್ಲ. ಪರಂತು ಈ ಅವಸ್ಥೆ ಮತ್ತು ನಿದ್ರೆ(ಸ್ವಪ್ನ, ಸುಷುಪ್ತಿ) ಸಹ ಆತ್ಮನ ಸಾನ್ನಿಧ್ಯ

ವಿರಹಿತವಾದ ಒಂದು ಶವದಲ್ಲಿ ಕಂಡು ಬರದೇ ಇರುವದರಿಂದ, ಮರಣತುಲ್ಯವಾದ ನಿದ್ರಾವಸ್ಥೆಯನ್ನು ಕುರಿತು ವಿಚಾರಮಾಡುವ ಮೊದಲು, ಪ್ರಸ್ತುತಜಾಗ್ರದವಸ್ಥೆಯು ಅನ್ನರಸಮಯಕೋಶದಲ್ಲಿ ಉಂಟಾಗುತ್ತದೆಂತಾಗಲೀ, ಅಥವಾ ಅಲ್ಲಿ ಅಂತ್ಯವಾಗುತ್ತದೆಂತಾಗಲೀ ಹೇಳಲಿಕ್ಕಾಗುವದಿಲ್ಲ. ಆದ್ದರಿಂದ ಪ್ರಥಮತಃ ಆ (ನಿದ್ರೆಯ) ಪೈಕಿ:—

## ೨ನೇ ಸ್ವಪ್ನಾವಸ್ಥೆ.

(೩) ಈ ಅವಸ್ಥೆಯಲ್ಲಿ ಆತ್ಮನು ಪೂರ್ಣ ಸ್ವತಂತ್ರನಾಗಿ (ಈ ಶರೀರದಲ್ಲಿ) ಸಂಚರಿಸುತ್ತಾನಾದರೂ (ಕೆಲವು ವೇಳೆಯಲ್ಲಿ) ಪೆಟ್ಟು ತಿಂದಂತೆ, ಓಡಿಸಲ್ಪಟ್ಟಂತೆ, ವ್ಯಸನಪಟ್ಟಂತೆ, ಅಳುವಂತೆ ಕೂಡಾ ತೋರುತ್ತಾನೆಂದು ಹೇಳೋಣಾಗಿದೆ. (೧೬೧—೧೬೨ನೆ ಪುಟಗಳು.) ಈ ಸಂಗತಿ ಅನುಭವಸಿದ್ಧವಾದದ್ದು; ಮತ್ತು ಪಂಚಪ್ರಾಣಗಳು † (ಪ್ರಾಣಮಯಕೋಶ)ಮನಸು ಬುದ್ಧಿ, ಇವುಗಳ ಸಂಸರ್ಗ ವಿನಹ ಆತ್ಮಗೆ ನಿದ್ರಾವಸ್ಥೆಯಲ್ಲಿ ಈ ಥರದ ದುಃಖಗಳು ಸಂಭವಿಸಕೂಡದು. ಇಲ್ಲಿ(1)ಅಂತಃಕರಣ(ಒಳಗಿನ ಇಂದ್ರಿಯ) ರೂಪವಾದ ಆ ಮನಃಶಬ್ದದಿಂದ ಹೊರಗಿನ ವಾಕ್, ಚಕ್ಷುಃ ಶ್ರೋತ್ರ ಮೊದಲಾದ ೧೦ ಇಂದ್ರಿಯಗಳೂ ನಿರೀಕ್ಷಿಸಲ್ಪಟ್ಟಿವೆ. ಆದ್ದರಿಂದ ೩ನೇದಾದ ಮನೋಮಯ ಕೋಶದಲ್ಲಿ ಮನಸುಸಹಿತವಾಗಿ ಸಕಲೇಂದ್ರಿಯಗಳು ಕೂಡಿಕೊಂಡಿವೆ ಎಂದು ತಿಳಿದು ಬರುತ್ತದೆ. ಆ ಪೈಕಿ ಮನಸು ಮುಖ್ಯವಾದದ್ದಾದ್ದರಿಂದ ಮನೋಮಯ ಕೋಶಕ್ಕೆ ಆ ಹೆಸರನ್ನು ಹೇಳುವದು.

(1) अत्रान्तःकरणेनमनसाबहिष्करणानिवाक् चक्षुरादीनिदशाप्युपलक्ष्यन्ते । अतः सर्वेषांज्ञानेन्द्रियाणांकर्मेन्द्रियाणाञ्च मनोमयाख्येकोशेऽन्तर्भावोद्रष्टव्यः । × । एतेषांएकादशेन्द्रियाणां मध्येमनसोमुख्यत्वात्तन्नाम्नामनोमयकोशइत्युच्यते प्राधान्यंचमनसोवागादीन्द्रियैः स्वस्वव्यापारेषूपजीव्यत्वादुपपद्यते । वागादयस्तुविवक्षादिदृक्षाशुश्रूषादिरूपां प्रज्ञाशब्दाभिदेयां मनोवृत्तिपुर

† ತೈತ್ತಿರೀಯದಲ್ಲಿ ಸಮಾನ ಉದಾನ ಈ ವಾಯುಗಳ ಬದಲಿಗೆ ಕ್ರಮವಾಗಿ ಆಕಾಶ ಪೃಥ್ವಿ ಇವುಗಳನ್ನು ಹೇಳೋಣಾಗಿದೆ. ಆಕಾಶ ಶಬ್ದವು ನಾಭಿಯ ಸಮೊಪ ದೇಶವಿಶೇಷದಲ್ಲಿರುವ ಸಮಾನವಾಯುವನ್ನು ಲಕ್ಷೀಕರಿಸಿಕೊಂಡುಂಟೆಂತಲೂ, ಪ್ರಥ್ವಿಶಬ್ದವು ಅವಶಿಷ್ಟ ಉದಾನವಾಯುವನ್ನು ಲಕ್ಷೀಕರಿಸಿಕೊಂಡುಂಟೆಂತಲೂ ವಿದ್ಯಾರಣ್ಯರು ಹೇಳುತ್ತಾರೆ. (ತೈ ಆ ೨—೫೯೩). ಉಪನಿಷತ್ತಿನಲ್ಲಿ ಹೊರಗಿನ ವಾಯುವನ್ನು ಕೂಡಿಸಹೇಳುವದರಿಂದ ಆಕಾಶ (ಅಂತರಿಕ್ಷ) ಪೃಥ್ವಿ ಇವುಗಳನ್ನು ಮಧ್ಯದೇಹ ಮತ್ತು ಆಧಾರವೆಂದು ಸಹ ಹೇಳುವದಾಗಿರಬೇಕು.

स्कृत्यैव व्यवहरन्ति ॥

तै०आ०२— {५९९ / ६०२}

ಆ ಮುಖ್ಯತ್ವವು ಇತರ ಇಂದ್ರಿಯಗಳು ತಮ್ಮತಮ್ಮ ವ್ಯಾಪಾರಗಳನ್ನು ನಡಿಸಲಿಕ್ಕೆ ಮನಸ್ಸನ್ನು ಆಶ್ರಯಿಸುವದರಿಂದ ಉಂಟಾದದ್ದು. ಮಾತಾಡಬೇಕು, ನೋಡಬೇಕು, ಕೇಳಬೇಕು, ಎಂಬ ಮೊದಲಾದ ರೂಪಗಳಲ್ಲಿರುವ ಪ್ರಜ್ಞಾ (ಬುದ್ಧಿ) ಶಬ್ದದಿಂದ ಕರೆಯಲ್ಪಡುವ ಮನಸಿನವೃತ್ತಿವಿಶೇಷವನ್ನು ಮೊದಲುಮಾಡಿಕೊಂಡೇ ವಾಗಾದಿಕರಣಗಳು ವ್ಯವಹರಿಸುವದಾಗಿರುತ್ತದೆ. ಈ ಮನೋಮಯಕೋಶವು ಶುದ್ಧಸಾತ್ವಿಕಸ್ವಭಾವಉಳ್ಳದ್ದಲ್ಲ. ಇದರಲ್ಲಿ ತಮೋ(2)ಗುಣಬೆರಕೊಂಡುಂಟು. ಆದ್ದರಿಂದಲೇ ಮನೋಮಯನಲ್ಲಿ ರಾಗದ್ವೇಷಾದಿತಮೋಗುಣಧರ್ಮವು ಕಂಡು ಬರುವದಾಗಿರುತ್ತದೆ. ವಿಜ್ಞಾನ (ಪ್ರಜ್ಞಾನ) ಶಬ್ದದಿಂದ ಇಲ್ಲಿ ಬುದ್ಧಿಯನ್ನೇ ಹೇಳುವದು. ೪ ನೇ ದಾದ ವಿಜ್ಞಾನಮಯ ಕೋಶಕ್ಕೆ ಕಾರಣವು ರಜೋಗುಣಬೆರಕೊಂಡಿರುವ ಸತ್ವಗುಣವಾಗಿರುವದರಿಂದ, ಪ್ರಸ್ತುತವಿಜ್ಞಾನಮಯಗೆ ಕರ್ಮಗಳನ್ನು ಮಾಡುವ ಅಧಿಕಾರವು ಬಂದಿರುತ್ತದೆ. ಮನಸುಕರಣರೂಪವಾದದ್ದು, ಬುದ್ಧಿಯು ಅದರ ವೃತ್ತಿವಿಶೇಷವೇ ಆದರೂ, ಅದರಿಂದ ಭಿನ್ನವಾಗಿ ಕರ್ತೃರೂಪದಲ್ಲಿರುವ ಇನ್ನೊಂದು ತತ್ವವಾಗಿರುತ್ತದೆ. ಇದಕ್ಕೇನೆ ವಿಜ್ಞಾನ ಎಂದು ಹೇಳುವದು. ಆದಕಾರಣ ನೋ(3)ಡುವವನು, ಮುಟ್ಟುವವನು, ಕೇಳುವವನು, ಮೂಸಿನೋಡುವವನು, ರುಚಿನೋಡುವವನು, ಯೋಚಿಸುವವನು, ತಿಳಕೊಳ್ಳುವವನು, ಮಾಡುವವನು ವಿಜ್ಞಾನಾತ್ಮನಾದ ಪುರುಷನೆಂದು ಹೆಳೋಣಾಗುತ್ತದೆ. ಇದು ಹೊರತು, ಅಥರ್ವ(4)ಣವೇದಿಗಳು ಆತ್ಮನು ೪ ಪಾದಗಳು (ಅವಸ್ಥೆಗಳು)ಳ್ಳವನೆಂತಲೂ ಆ ಪೈಕಿ ೧ನೇದಾದ ಜಾಗ್ರದವಸ್ಥೆಯಲ್ಲಿ ಅವನು ವೈಶ್ವಾನರನೆಂಬ ಹೆಸರಿನಿಂದ ಬಹಿಃ

(2)तमोमिश्रः सत्वगुणोमनोमयकारणं। अतोमनोमयेतामसभागधर्मारागद्वेषादयः उपलभ्यन्ते। रजोमिश्रः सत्वगुणोविज्ञानमयकारणं! अतोविज्ञानमये यज्ञादीनांवैदिकक्रियाणांकृष्यादीनां लौकिकक्रियाणाञ्चकर्तृत्वमुपलभ्यते। ×। कर्तृरूपन्तुकरणात्पृथगेवतत्वं। तच्चबुद्धिशब्देन विज्ञानशब्देनाहंशब्देनचतत्रतत्रव्यवह्रियन्ते। ×।

• तै० आ० २—{५९९ / ६०६}

(3)एषहिद्रष्टास्प्रष्टाश्रोता घ्रातारसयितामन्ताबोद्धाकर्त्ताविज्ञानात्मापुरुषः।

(प्र०उ० ४—९.)

(4)सर्वꣳह्येतद्ब्रह्मायमात्माब्रह्मसोऽयमात्मा चतुष्पात्। जागरितस्थानोबहिःप्रज्ञः सप्ताङ्ग एकोनविंशतिमुखः स्थूलभुग्वैश्वानरः प्रथ

मःपादः । स्वप्नस्थानोऽन्तःप्रज्ञः सप्ताङ्ग एकोनविंशतिमुखः प्रविविक्तभुक्तैजसोद्वितीयः पादः ॥

मां० उ०— { २ ३ ४ }

ಪ್ರಜ್ಞ ಎಂದರೆ ಹೊರಗಿನ ಸ್ಥೂಲ ವಿಷಯಗಳನ್ನು ಅನುಭವಿಸುತ್ತಾನೆಂತಲೂ, ೨ನೇ ಸ್ವಪ್ನಾವಸ್ಥೆಯಲ್ಲಿ ತೈಜಸನೆಂಬ ಹೆಸರಿನಿಂದ ಅಂತಃ ಪ್ರಜ್ಞನೆಂದರೆ ಒಳಗಿನ ಸೂಕ್ಷ್ಮವಾದ ವಿಷಯಗಳನ್ನು ಅನುಭವಿಸುತ್ತಾನೆಂತಲೂ ಹೇಳುವದಲ್ಲದೆ, ಈ ೨ ಥರದ ಅವಸ್ಥೆಗಳಲ್ಲಿಯೂ ಅವನು ೭ ಅಂಗಗಳನ್ನು ೧೯ ಮುಖಗಳನ್ನು ಪಡದಿರುತ್ತಾನೆಂದು ಹೇಳುತ್ತಾರೆ. ೭ ಅಂಗಗಳು(5)ಈ ಪುಸ್ತಕದ IVನೇ ಪಾಠದಲ್ಲಿ ಹೇಳಿದ (೧) ದ್ಯುಲೋಕ (ಶಿರಸ್ಸು)(೨)ಆದಿತ್ಯ (ಚಂದ್ರಕೂಡಾ) ಕಣ್ಣುಗಳು,(೩)ವಾಯು(ಪ್ರಾಣ), (೪) ಆಕಾಶ (ಮಧ್ಯದೇಹ), (೫) ಜಲ(ವಸ್ತಿಯಾನೆ ಮೂತ್ರಾಶಯ), (೬) ಪೃಥ್ವಿ(ಪಾದಗಳು), (೭) ಆಹವನೀಯವೆಂಬ ಅಗ್ನಿ(ಬಾಯಿ),ಇವುಗಳೆಂತಲೂ, ಮುಖಕಗಳು ೫ಕರ್ಮೇಂದ್ರಿಯಗಳು, ೫ ಜ್ಞಾನೇಂದ್ರಿಯಗಳು, ೫ ಪ್ರಾಣ(ವಾಯು)ಗಳು, ಮನಸು, ಬುದ್ಧಿ, ಅಹಂಕಾರ, ಚಿತ್ತ ಇವುಗಳೇ ೧೯ ಎಂದು ಶಂಕರಾಚಾರ್ಯರು ಹೇಳುತ್ತಾರೆ. ಇಲ್ಲಿ ಮನಸು, ಬುದ್ಧಿ, ಅಹಂಕಾರ, ಚಿತ್ತ ಎಂಬವುಗಳೆಲ್ಲ ಅಂತರಿಂದ್ರಿಯದ ವೃತ್ತಿವಿಶೇಷಗಳು. ಇದರಿಂದ ಜಾಗ್ರತ್ ಮತ್ತು ಸ್ವಪ್ನ ಈ ಎರಡು ಅವಸ್ಥೆಗಳೂ ವಿಜ್ಞಾನಮಯಕೋಶದಲ್ಲುಂಟಾಗುತ್ತದೆಂತಲೂ, ಅವುಗಳೊಳಗಿರುವ ಭೇದವು ಅವುಗಳಲ್ಲಿ ಅನುಭವವಾಗುವ ವಿಷಯದ ಪರಿಮಾಣದ ಮೇಲೆ ಹೊಂದಿಕೊಂಡುಂಟೆಂತ ಸಹ ಕಂಡು ಬರುತ್ತದೆ. ಜಾಗ್ರದವಸ್ಥೆಯಲ್ಲಿ ಅನುಭವಿಸುವ ವಿಷಯಗಳು ಸ್ಥೂಲವಾದವುಗಳೆಂದು ಹೇಳೋಣಾಗಿದೆ. ಅವುಗಳು ಹೊರಗಿನ ಶಬ್ದಾದಿಗಳೇ.(6)ಸ್ವಪ್ನಾವಸ್ಥೆಯಲ್ಲಿ ಆತ್ಮನು ಅನುಭಸಮಿವ ಸೂಕ್ಷ್ಮವಿಷಯಗಳೆಂಬವು ವಾಸನಾರೂಪದಲ್ಲಿ ಒಳಗೆ ನಮ್ಮ ಮನಸಿನಲ್ಲಿರುವಂಥವು (ಗ್ರಹಿಕೆ)ಗಳಾಗಿರುತ್ತವೆ. ಇವುಗಳು

(5)तथासप्तांगान्यस्यतस्यहवैतस्यात्मनोवैश्वानरस्यमूर्धैवसुतेजाश्चक्षुर्विश्वरूपः प्राणः पृथग्वर्मात्मा सन्देहोबहुळोवास्तिरेवरयिः पृथिव्येवपादौ । आग्निहोत्रकल्पनाशेषत्वेनाग्निर्मुखत्वेनाहवनीयउक्तः। इत्येवंसप्तांगानि यस्यससप्तांगः । तथैकोनविंशतिमुखान्यस्य बुद्धीन्द्रियाणिकर्मेन्द्रियाणिचदशवायवश्च प्राणादयः पञ्चमनोबुद्धिरहंकाराश्चित्तामिति मुखानिवमुखानि । तान्युपलब्धिद्वाराणीत्यर्थः ॥शं ॥. एकस्यैवान्तः करणतत्वस्यमनोबुद्ध्यहंकाराचित्ताख्याश्चत्वारोवृत्तिभेदाः॥ तै० आ० २—६०६ ॥.

(6)जाग्रत्प्रज्ञाऽनेकसाधना बहिर्विषयेवाव भासमानामनः स्पन्दनमात्रासतीतथाभूतंसं स्कारंमनस्याधत्ते । तन्मनस्तथासंस्कृतं चित्रितइवपटो बाह्यसाधनानपेक्षं अविद्या कामकर्मभिः प्रेर्यमाणंजाग्रद्वदवभासते। ×। इन्द्रियापेक्षयान्तस्थत्वात् मनसस्तद्वासना रूपाचस्वप्ने प्रज्ञायस्येत्यन्तः प्रज्ञः । विषय शून्यायांप्रज्ञायां केवलप्रकाशस्वरूपायांविष यित्वेनभवतीतितैजसः । विश्वस्यसविषय त्वेनप्रज्ञायाः स्थूलायाभोज्यत्वं । इहपुनः केवलावासनामात्राप्रज्ञाभोज्येति प्रविवि- क्तोभोगइति ॥ × ॥शं ॥. यथागार्ग्यम रीचयोऽर्कस्यास्तंगच्छतः सर्वाएतस्मिंस्ते जोमण्डलेएकीभवन्ति । ताःपुनः पुनरुदय- तः प्रचरन्त्येवं हवैतत्सर्वंपरेदेवेमनस्येकीभ वति • तेनतर्ह्येषपुरुषो नशृणोतिनपश्यति नाजिघ्रतिनरसयते नस्पृशते नाभिवदते ना दत्तेनानन्दयते नविसृजते नेयायते स्वपिती त्याचक्षते ॥ ॥प्र० उ० ४—२. ॥ .

ನಿದ್ರೆಯಲ್ಲಿ ಮನಸು ಚಲನೆಯಾಗಿ ಆತ್ಮನ ಅವಿದ್ಯಾ, ಕಾಮ, ಕರ್ಮಗಳ ದೆಸೆಯಿಂದ, ವಸ್ತ್ರಕ್ಕೆ ಹಾಕಿದ ಕಸೂತಿಯಂತೆ, ಮನಸಿನಲ್ಲಿ ಕಂಡುಬರುವವುಗಳಾಗಿರುತ್ತವೆ. ಆ ಕಾಲದಲ್ಲಿ ಅಸ್ತಮಿಸುವ ಸೂರ್ಯನ ರಶ್ಮಿಗಳೆಲ್ಲ ಆತೇಜೋಮಂಡಲದಲ್ಲಿ ಹೇಗೆ ಐಕ್ಯವಾಗುತ್ತವೋ, ಹಾಗೆ ಸಕಲ (ವಿಷಯೇಂದ್ರಿಯಾದಿಗಳ ಸಮೂಹ)ವೂ ಹೆಚ್ಚಾಗಿ ಮಿಣಕುವ ಮನಸಿನಲ್ಲಿ ಐಕ್ಯವಾಗುವದರಿಂದ ಈ ಪುರುಷನು ಕೇಳುವದಿಲ್ಲ, ನೋಡುವಲ್ಲ, ಮೂಸುವದಿಲ್ಲ ರುಚಿನೋಡುವದಿಲ್ಲ, ಮುಟ್ಟುವದಿಲ್ಲ, ಮಾತಾಡುದದಿಲ್ಲ, ತಕ್ಕೊಳ್ಳುವದಿಲ್ಲ, ಸಂತೋಷಪಡುವದಿಲ್ಲ, ವಿಸರ್ಜನೆಮಾಡುವದಿಲ್ಲ, ತಿರಿಗ್ಯಾಡುವದಿಲ್ಲ, ನಿದ್ರೆಮಾಡಿದ್ದಾನೆಂದು ಜನರು ಹೇಳುವರೆಂದು ಪ್ರಶ್ನೋಪನಿಷತ್‌ನಲ್ಲಿ ಹೇಳೋಣಾಗುತ್ತದೆ. ಪರಂತು ಮೇಲೆ ಹೇಳಿದ ರೀತಿ ವಿಷಯಗಳನ್ನನುಭವಿಸುವಾಗ ಆತ್ಮನು ೫ ನೇದಾದ ಮುಂದೆ ವಿವರಿಸುವ ಆನಂದಮಯಕೋಶ ವಿರಹಿತನಾಗಿರುವದಿಲ್ಲವಾದ ಪ್ರಯುಕ್ತ, ವಿಜ್ಞಾನಮಯಕೋಶದ ಸಂಗಡ ಅದನ್ನು ಶೇರಿಸಿಕೊಳ್ಳಬೇಕಾಗಿರುತ್ತದೆ. ಈ ರೀತಿಜಾಗ್ರತ್ ಸ್ವಪ್ನ ಇವೆರಡೂ ಒಂದೇ ಸ್ಥಳದಲ್ಲುಂಟಾಗುವದಾದರೂ ಮೊದಲನೇದು ಎಲ್ಲಾ ಕೋಶಗಳನ್ನು ವ್ಯಾಪಿಸುವಾಗ್ಯೆ, ಸ್ವಪ್ನವು ಪ್ರಾಣಮಯವೆಂಬ ೨ ನೇ ಕೋಶವನ್ನು ಉಲ್ಲಂಘಿಸುವದಿಲ್ಲೆಂದು ತೋರುತ್ತದೆ. ಆದದರಿಂದಲೇ ಆ ಕಾಲದಲ್ಲಿ ಅನ್ನರಸಮಯವೆಂಬ ಹೊರಗಿನ ಕೋಶವು ಸುಮ್ಮಗೆ ಬಿದ್ದುಕೊಂಡು ಇರುವದಾಗಿರುತ್ತದೆ.

## ೩ ನೇ ಸುಷುಪ್ತಿ ಅವಸ್ಥೆ.

(೪) ಸುಷುಪ್ತಿ ಎಂದರೆ ಗಾಢನಿದ್ರೆ, ಆ ಕಾಲದಲ್ಲಿ ಸ್ವಪ್ನಗಳಾಗುವದಿಲ್ಲ. ಅದು ಆತ್ಮನು ತನ್ನ ಇಂದ್ರಿಯವೃತ್ತಿಗಳನ್ನು ನಿಲ್ಲಿಸಿ ಹೃದಯದಲ್ಲಿರುವ ನಾಡಿಗಳಲ್ಲಿ ಶೇರಿಕೊಳ್ಳುವದರಿಂದ ಉಂಟಾಗುತ್ತದೆಂತಲೂ, ಆಗ ಯಾವ ಪಾಪವೂ ಇವನನ್ನು ಮುಟ್ಟುವದಿಲ್ಲ, ಇವನು ತೇಜಸಿನಲ್ಲಿ ಶೇರಿಕೊಂಡಿರುತ್ತಾನೆಂದು VI ನೇ ಪಾಠದಲ್ಲಿ ಹೇಳೋಣಾಗಿದೆ. ಮಾಂಡೂಕ್ಯ ಉಪನಿ(7)ಷತ್ತಿನಲ್ಲಿ ಈ ಸುಷುಪ್ತಿ ಸ್ಥಾನದಲ್ಲಿ ಅವನು ಏಕಾಕಿ, ಜ್ಞಾನಘನ,ಆನಂದವಿಕಾರನಾಗಿದ್ದುಕೊಂಡು, ಆನಂದವನ್ನನುಭವಿಸುತ್ತಾ ಚೇತೋ(ಜ್ಞಾನ) ಮುಖನಾಗಿರುತ್ತಾನೆ; ಇವನ ಹೆಸರು ಪ್ರಾಜ್ಞನೆಂದು; ಇವನು ೩ನೇ ಪಾದವಾಗಿ ಹೃದಯಾಕಾಶದಲ್ಲಿರುತ್ತಾನೆಂದು ಹೇಳೋಣಾಗಿದೆ. ಈ ಶ್ರುತಿಯು ಸ್ಪಷ್ಟವಾಗಿ ಬೃಹದಾರಣ್ಯಕದ ಮೇಲೆ ಹೊಂದಿಕೊಂಡುಂಟು. ಆ ಉಪನಿಷತ್ತಿನಲ್ಲಿ(8)ವಿಜ್ಞಾನಮಯ ಪುರುಷನು ಯಾವಾಗ ಸುಪ್ತನಾಗುತ್ತಾನೋ, ಮತ್ತು ಏನೂ ತಿಳಿಯದೇ ಹೋಗುತ್ತಾನೊ, ಆಗ ಹೃದಯದಿಂದ ಪುರೀತತ್ (pericardium) ಎಂಬ (ಅದರೊಳಗಿರುವ) ಅಂತ್ರದಲ್ಲಿ ಪ್ರವೇಶಿಕೊಂಡಿರುವ ೭೨೦೦೦ ನಾಡಿಗಳ ದ್ವಾರಾ ಆ ಚೀಲದಲ್ಲಿ (ಪುರೀತತಿನಲ್ಲಿ) ಹೊಕ್ಕೊಂಡು ಅದರಲ್ಲಿ ಒಬ್ಬ ಬಾಲಕ, ಮಹಾರಾಜ, ಅಥವಾ ಶ್ರೇಷ್ಠನಾದ ಬ್ರಾಹ್ಮಣನು ಹೇಗೆ ಅತ್ಯು†ತ್ಕೃಷ್ಟವಾದ ಆನಂದವನ್ನನುಭವಿಸುತ್ತಾ ಶಯನ

(7)सुषुप्तस्थान एकीभूतः प्रज्ञानघनएवानन्दमयोह्यानन्दभुक्चेतोमुखः प्राज्ञस्तृतीयः पादः । मा० उ० २—५

(8)अथयदासुषुप्तोभवति यदानकस्यचनवेद हितानामनाड्यो द्वासप्ततिसहस्राणिहृदयात् पुरीततमभिप्रतिष्ठन्ते ताभिः प्रत्यवसृप्य पुरीततिशेते सयथाकुमारोवा महाराजोवा महाब्राह्मणोवातिघ्नीमानन्दस्य गत्वाशयीतैवमेवैषएतच्छेते ॥

॥बृ० उ० २—२—१९॥.

(9)तद्वास्यैतदतिच्छन्दा अपहतपाप्माऽभयं रूपं तद्यथाप्रिययास्त्रियासंपरिष्वक्तो न बाह्यं किञ्चनवेदनान्तरं एवमेवायंपुरुषः प्राज्ञेना

† ಇದೇ ತೈತ್ತಿರೀಯದಲ್ಲಿ ಹೇಳುವ ಮನುಷ್ಯರು ಅನುಭವಿಸುವ ಇಡೀ ೧ ಆನಂದ. ಈ ೧ನ್ನು ೧೦೦ರಿಂದ ೧೦ಸರ್ತಿ ಗುಣಿಸಿದರೆ (ಎಂದರೆ ೧×೧೦೦×೧೦೦×೧೦೦ ×೧೦೦×೧೦೦×೧೦೦×೧೦೦×೧೦೦×೧೦೦×೧೦೦ ಈ ರೀತಿ ಗುಣಿಸಿದರೆ) ಎಷ್ಟು ಲಭ್ಧ ಬರುತ್ತದೋ, ಬ್ರಹ್ಮದ ೧ಆನಂದವು ಅಷ್ಟು ಆಗಿರುತ್ತದೆ. ಬ್ರಹ್ಮಕ್ಕೆ ಮಿತಿ ಇಲ್ಲ. ಆದರ ಆನಂದಕ್ಕೆ ಗಣನೆ ಹೇಗೆ ಇರುವದು? ಇಲ್ಲವೇ ಇಲ್ಲ.

त्मनासंपरिष्वक्तोनबाह्यंकिञ्चनवेदनान्तरं तद्वा अस्यैतदाप्तकाममात्मकाममकामं रूपं शोकान्तरम् । बृ० उ० ४—३—२१.॥ सयथासैन्धवघनोऽनन्तरोऽबाह्यः कृत्स्नोरसघनएवैवंवा अरेऽयमात्माऽनन्तरोऽबाह्यः कृत्स्नः प्रज्ञानघनएव । × × ।

बृ० उ० । ४—५—१३. ॥.

ಮಾಡ್ಯಾನೋ, ಹಾಗೆಯೇ ಶಯನ ಮಾಡುತ್ತಾನೆ. ಇದು(9)(ಆ ಕಾಲದಲ್ಲಿ ಸಕಲವೂ ನಾನೇ ಎಂದು ತಿಳಿಯುವದು—ಎಂದರೆ ಕರ್ತೃಕರ್ಮ, ನೋಡುವವ ತೋರುವ ವಸ್ತು, ಎಂಬ ಭೇದವಿಲ್ಲದೆ ಏಕಾಕಿಯಾಗಿರುವದು) ಈ ಪುರುಷನ ಅಪೇಕ್ಷೆರಹಿತವಾದ, ಪಾಪ ಲೇಪವಿಲ್ಲದ ನಿರ್ಭಯವಾದರೂಪವಾಗಿರುತ್ತದೆ. ತನಗೆ ಪ್ರಿಯಳಾದ ಪತ್ನಿಯಿಂದ ಆ ಲಿಂಗಿತನಾದ ಒಬ್ಬ ಪುರುಷಗೆ ಹೊರಗೆ ಒಳಗೆ ಎಂಬದು ಹೇಗೆ ಗೊತ್ತಿರುವದಿಲ್ಲವೊ, ಹಾಗೆಯೇ ಈ ಪುರುಷನು ಪ್ರಾಜ್ಞನಾದ (ಸರ್ವವನ್ನೂ ತಿಳದ) ಆತ್ಮನಿಂದ ಆಲಿಂಗನೆಮಾಡಲ್ಪಟ್ಟು(ಅವನನ್ನು ಕೂಡಿಕೊಂಡು) ಇರುತ್ತಾನಾದ ಕಾರಣ, ಹೊರಗೆ ಒಳಗೆ ಇರುವ ಯಾವದೊಂದನ್ನು ಅರಿಯನು. ಇದೇ ಅವನ ಸಕಲ ಇಚ್ಛಾಪೂರ್ತಿಯಾದ, ತನ್ನನ್ನೇ ಅಪೇಕ್ಷಿಸುವ, (ಇತರ) ಅಪೇಕ್ಷೆ ಇಲ್ಲದ ಮತ್ತು ದುಃಖವಿಲ್ಲದ ರೂಪವಾಗಿರುತ್ತದೆ. ಒಂದು ಉಪ್ಪಿನ ಹೆಂಟೆಯು, ಹೊರಗೆ ಒಳಗೆ ಎಂಬ ಭೇದವಿಲ್ಲದೆ, ಸಂಪೂರ್ಣವಾಗಿ ಹೇಗೆ ರುಚಿಪುಂಜವೇ ಆಗಿರುತ್ತದೊ, ಹಾಗೆಯೇ ಈ ಆತ್ಮನು ಒಳಗೆ ಹೊರಗೆ ಎಂಬ ಭೇದವಿಲ್ಲದೆ ಪೂರ್ಣವಾಗಿ ಜ್ಞಾನಪುಂಜನಾಗಿರುತ್ತಾನೆಂದು ಹೇಳೋಣಾಗಿದೆ. ಇದರಿಂದ ಪ್ರಸ್ತುತ ಸುಷುಪ್ತಿಸ್ಥಾನವು ಹೃದಯದಲ್ಲಿರುವ ನಾಡಿಗಳೆಂದು VIನೇ ಪಾಠದಲ್ಲಿ ಹೇಳಿದ್ದು ಅಲ್ಲಿರುವ ಪುರೀತತಿನ ಸೂಚನೆಯಗೋಸ್ಕರವೆಂದು ತಿಳಿಯಬೇಕಾಗುವ ಪ್ರಯುಕ್ತ, ಇದೇ (ಈ ಪುರೀತತ್ ಎಂಬ ಅಂತ್ರವೇ) ಆನಂದಮಯಕೋಶವೆಂದು ಹೇಳಬೇಕೆಂಬ ಆಶೆಯು ಹುಟ್ಟುತ್ತದೆ. ಯಾಕಂದರೆ ಹೃದಯದಲ್ಲಿರುವ ದ್ವಾರಪಾಲಾದಿಗಳಿಂದ ಯುಕ್ತವಾದ ಬ್ರಹ್ಮದ ಅರಮನೆಯು ಅದೇಯಾಗರುವದರಿಂದ, (VII ನೇ ಪಾಠ) ಅಲ್ಲಿ ಈ ಪುರುಷನು, ಛಾಂದ್ಯೋಗದಲ್ಲಿ ಹೇಳುವ ಪ್ರಕಾರ, ಸತ್ ಸಂಪನ್ನನಾಗಲಿಕ್ಕೆ, ಎಂದರೆ ಮೇಲೆ ಹೇಳಿದಂತೆ ಪ್ರಾಜ್ಞನಾಮಕನಾದ ಆತ್ಮನಿಂದ ಆಲಿಂಗಿತನಾಗಿ ಆನಂದಿಯಾಗಿರಲಿಕ್ಕೆ ಒಳ್ಳೆ ಆಸ್ಪದವಿರುತ್ತದೆ, ಮತ್ತು ಮೇಲೆ ಹೇಳಿದತೇಜಸ್ಸೆಂಬದಾಗಲೀ, XI ನೇಪಾಠದಲ್ಲಿ ಹೇಳುವ ಪರಂಜ್ಯೋತಿ ಮತ್ತು VII ನೇಪಾಠದಲ್ಲಿ ಹೇಳುವ ಆಕಾಶ ಈ ಶಬ್ದಗಳಿಂದ ಕರೆಯಲ್ಪಡುವ ವಸ್ತುವಾಗಲೀ, ಪ್ರಸ್ತುತ ಕೋಶದಲ್ಲಿರುವ ಪ್ರಾಜ್ಞಶಬ್ದದಿಂದ ಕರೆಯಲ್ಪಡುವ (ಸತ್) ಬ್ರಹ್ಮವೇ ಆಗಿತುತ್ತದೆ. ಆದರೆ ಪ್ರಸ್ತುತ ಕೋಶದಲ್ಲಾಗುವ ಆನಂದ

ವು ಹೃದಯಗತವಾದ ಆಕಾಶವೆಂಬ ಬ್ರಹ್ಮಾನಂದವಾಗಿರಕೂಡದಾದ ಕಾರಣ, ಅದು ಯಾವ ತರಹದ್ದೆಂಬದನ್ನು ನಿಶ್ಚಯಿಸುವ ಮೊದಲು, ಈ ಆನಂದಮಯಕೋಶವು ಫಲಾಣೇದೆಂದು ನಿಶ್ಚೈಸಲಿಕ್ಕಾಗುವದಿಲ್ಲ.

(೫) ಈಗ ಉಪಸ್ಥದಿಂದ(10) ಆಗುವ ಸುಖಕ್ಕೂ ಆನಂದವೆಂದು ಹೇಳೋಣಾಗುತ್ತದೆ. ಆದರೆ ಮೇಲೆ ಹೇಳಿದ ಆನಂದವು ಈ ತರಹದ್ದಲ್ಲ; ಮತ್ತು ಸುಷುಪ್ತಿಯ ಕಾಲದಲ್ಲಿ ಯಾವ ಇಂದ್ರಿಯವೂ ಕೆಲಸಮಾಡುವದಿಲ್ಲ. ಆ ಕಾಲದಲ್ಲಿ ಆತ್ಮನು ತನ್ನ ಇಂದ್ರಿಯವ್ಯಾಪಾರಗಳನ್ನೆಲ್ಲ ನಿಲ್ಲಿಸಿರುತ್ತಾನೆಂದು ಮೇಲೆ ಹೇಳೋಣಾಗಿದೆ. ಮತ್ತು ಇವನು ಆಗ ಸುಳ್ಳು ಎಂದರೆ ಅವಿದ್ಯಾಕಾಮಕರ್ಮಗಳಿಂದ ಹೊರಮಾಡಲ್ಪಡುವ ಕಾರಣ ಅಲ್ಲಿರುವ ಬ್ರಹ್ಮಲೋಕವನ್ನು ತಿಳಿಯುವದಿಲ್ಲೆಂದು VII ನೇ ಪಾಠದಲ್ಲಿ ಹೇಳೋಣಾಗುತ್ತದೆ. ಈ ಕಾರಣಗಳಿಂದ ಸುಷುಪ್ತಿಯಲ್ಲಿ ಅನುಭವವಾಗುವ ಆನಂದವು(11) ಈ ಜೀವಾತ್ಮನ ಸ್ವರೂಪಭೂತವಾದ ಪರಿಮಿತಿಯುಳ್ಳ ಆನಂದವಲ್ಲದೆ, ನಾರದಸನತ್ಕುಮಾರರ ಸಂವಾದದಲ್ಲಿ ಹೇಳುವ(12) ಭೂಮಾ ಎಂಬ ಅಪರಿಮಿತ ಮತ್ತು ಅಮೃತ ಎಂದರೆ ಶಾಶ್ವತವಾದ ಸುಖವಲ್ಲ. ಈ ಆನಂದದ ಒಂದು ಅಂಶವನ್ನೇ ಇತರ ಪ್ರಾಣಿಗಳು ಅನುಭವಿಸುವಂಥಾದ್ದು ಎಂದು(13) ಯಾಜ್ಞವಲ್ಕ್ಯರು ಜನಕರಾಯಗೆ ತಿಳಿಸಿದ ಆನಂದವು ಈ ಸುಷುಪ್ತ್ಯವಸ್ಥೆಯಲ್ಲಾಗುವ ಅಲ್ಪಾನಂದವೇ ಆಗಿರುತ್ತದೆ. ಆದಕಾರಣ ಪ್ರಸ್ತುತ ಆನಂದಮಯಕೋಶವು:—

(10) केनानन्दंराति प्रजातिमित्युपस्थेनेति। कौ० ब्रा० उ० १—७ ॥

(11) देहेन्द्रियाद्युपाधौ स्वयमेवभासमानस्य जीवात्मनः स्वरूपभूतो य आनन्दः सोऽयमवच्छिन्नः अतिशयेनप्रीतिविषयत्वात्। तै० आ० २—६१४.

(12) योवैभूमातत्सुखं नाल्पेसुखमस्ति ।।×। योवैभूमातदमृतमथयदल्पंतन्मर्त्यं ।

छां० उ० ७— { २३ / २४

(13) एतस्यैवानन्दस्यान्यानि भूतानिमात्रामुपजीवन्ति। बृ० आ० उ० ॥४—३—३२॥

(೧) ನಮ್ಮ ಹೃದಯದಲ್ಲಿರುವ ನಾಡಿಗಳಾಗಿರ ಕೂಡದು; ಯಾಕಂದರೆ ಸುಷುಪ್ತಿಯ ಕಾಲದಲ್ಲಿ ಆತ್ಮನು ಆ ನಾಡಿಗಳ ಪರಿಮುಖವಾಗಿ ಪುರೀತತಿನಲ್ಲಿ ಸೇರಿಕೊಂಡು ಶಯನ ಮಾಡುತ್ತಾನೆಂದು ಹೇಳೋಣಾಗುತ್ತದೆ. ಮತ್ತು

(೨) ಆಪುರೀತತ್ ಸಹ ಅಲ್ಲ; ಯಾಕಂದರೆ ಅದು ಪ್ರಾಜ್ಞನೆಂಬ ಆಕಾಶ ನಾಮಕನಾದ ಬ್ರಹ್ಮಯಾನೆ ಪುರಂಜ್ಯೋತಿ ಇರುವ ಸ್ಥಳವಾಗಿದ್ದುಕೊಂಡು ಅಲ್ಲಿ ಶಯನ ಮಾಡಲಿಕ್ಕೆ ಹೋದ ಪ್ರತ್ಯಗಾತ್ಮಗೂ ಪರಂಜ್ಯೋತಿಗೂ ಸಾಧಾರಣವಾಗಿರುವದರಿಂದ, ಅಲ್ಲಿ ಈ ಪ್ರತ್ಯಗಾತ್ಮನ ಸ್ವರೂಪವು ಪ್ರಕಾಶಿಸದು; ಮತ್ತು ಅದು (ಆ ಸ್ವರೂಪವು) ಇವನ ಅವಿದ್ಯಾ (ಅಜ್ಞಾನ) ಕಾಮಕರ್ಮರೂಪವಾದ ಮಿಥ್ಯಾ ಎಂದರೆ ನಾಶಕ್ಕೆ ಗುರಿಯಾದ ಉಪಾಧಿಯಲ್ಲಿ ಅಡಗಿರುತ್ತದೆಂದು ಮೇಲೆ ಹೇಳೋಣಾಗಿದೆ.

ಹಾಗಾದರೆ ಯಾವದು? ಯಾವದೆಂದರೆ ಮೇಲೆ ಹೇಳಿದ ಪ್ರಕಾರ ಜಾಗ್ರತೆ, ಸ್ವಪ್ನ ಈ ೨ ಅವಸ್ಥೆಗಳು ಈ ಶರೀರದ ಪೈಕಿ ೪ ಕೋಶಗಳನ್ನು ಆಕ್ರಮಿಸಿರುವದರಿಂದ ಅದರಲ್ಲಿ ಇನ್ನು ಬಾಕಿ ಉಳದಿರುವಂಥಾ ಜೀವಗೂ ಹೃದಯಾಕಾಶವೆಂಬ ಬ್ರಹ್ಮಕ್ಕೂ ಅಡ್ಡವಾಗಿ ನಡುವೆ ಏನು ಇದೆಯೋ, ಮತ್ತು ಯಾವದು ಪರಿಹಾರವಾದರೆ ನೆಟ್ಟಗೆ ಆ ಬ್ರಹ್ಮದಲ್ಲಿ--ಪರಂಜೋತಿಯಲ್ಲಿ--ಸ್ಥಿತಿಲಾಭವಾಗುತ್ತದೋ, ಅದೇ ಆನಂದಮಯಕೋಶವಾಗಿರುತ್ತದೆ. ಅದು ಮೇಲೆ ಹೇಳಿದ ಉಪಾಧಿಯೇ. ಇದೇ (14.) ಈ ಆತ್ಮಗೆ ಜೀವನೆಂದು ಹೆಸರು ಬರಲಿಕ್ಕೆ ಕಾರಣವಾದ ಮಲಿನ ಸತ್ವ ಗುಣ ಅಧಿಕವಾಗಿ ಉಳ್ಳ ಪ್ರಕೃತಿಯಾನೆ ಪ್ರೀತಿ, ಹರ್ಷ ಸಂತೋಷ ಇವುಗಳೇ ಅವಯುವಗಳಾಗಿ ಉಳ್ಳ ಕಾರಣಶರೀರವಾಗಿರುತ್ತದೆ. ಇದರ ದೆಸೆಯಿಂದಲೇ ಸುಷುಪ್ತಿಕಾಲದಲ್ಲಿ ಈ ಜೀವಗೆ ಬ್ರಹ್ಮಸಾಕ್ಷಾತ್ಕಾರವಾಗದೇ ಇರುವದು. ಇಂಥಾ ದೇಹಸಮ್ಮಂಧಇಲ್ಲದವಗೇನೆ ಸಾಮವೇದಿಗಳು ಉತ್ತಮಪುರುಷನೆಂದು ಹೇಳುತ್ತಾರೆ, ಮತ್ತು ಅವರ ಸಿದ್ಧಾಂತ ಪ್ರಕಾರ ಇವನೇ ಸುಷುಪ್ತಿ ಅವಸ್ಥೆಯನ್ನು ದಾಟಿ (ಜೀವಸ್ವಬಾವದಿಂದ ವಿಮೋಚನೆಹೊಂದಿ) ದವನಾಗಿರುತ್ತಾನೆ. ಅಥರ್ವಣವೇದಿಗಳು ಆತ್ಮನ ೪ನೇ ಪಾದವೆಂದು ವರ್ಣಿಸುವ ರೂಪವು ಇದೆಯಾಗಿರುತ್ತದೆ. ಅವರು (15.) ಕಣ್ಣಿಗೆ ಕಾಣದ, ಕೈಗೆ ಶಿಕ್ಕದ, ಗ್ರಹಿಸಕೂಡದ, ಚಿನ್ಹೆ ಇಲ್ಲದ, ಯೋಚಿಸಕೂಡದ, ಹೇಳಕೂಡದ, ತನ್ನ ನಂಬಿಕೆ ಮೇಲೆಯೇ ಹೊಂದಿಕೊಂಡಿರುವಂಥಾ, ಪ್ರಪಂಚಕ್ಕೆ ಉಪಶಮ (ವಿರಾಮ)ರೂಪವಾದ

(14) कारणे कारणशरीरभूतायामविद्यायां यन्मलिनसत्वमस्ति तन्मोदादिवृत्तिभिः प्रियमोदप्रमोदाख्यैः इष्टदर्शनलाभभोगजन्यैः सुखविशेषैः सहितमानन्दमयः आनन्दमयाख्यैः कोशः स्यात् ॥ पं० १२—३६. ॥.

(15) अदृष्टमव्यवहार्यमग्राह्यमलक्षणमाचिन्त्यमव्यपदेश्यमैकात्म्यप्रत्ययसारं प्रपञ्चोपशमंशान्तं शिवमद्वैतं चतुर्थमन्यन्ते सआत्मा सविज्ञेयः ॥मां० उ० ७ ॥

ಶಾಂತವಾಗಿರುವ, ಸುಖರೂಪವಾದ, ಎರಡನೇದಿಲ್ಲದವನೇ ೪ನೇ ಪಾದವೆಂದು ಜನರು ಅಭಿಪ್ರಾಯಪಡುತ್ತಾರೆ. ಅವನೇ ಆತ್ಮನು, ಅವನನ್ನು ತಿಳಿಯಬೇಕು ಎಂದು ಹೇಳು ತ್ತಾರೆ. ತೈತ್ತಿರೀಯದಲ್ಲಿ (16) ಭಯ ದಿಂದ ವಿಮೋಚನೆ ಹೊಂದಲಿಕ್ಕೆ ಯಾಗ ನ್ನು ಆಶ್ರಯಿಸಬೇಕೆಂದು ಯಜುರ್ವೇದಿ ಗಳು ಹೇಳುತ್ತಾರೊ ಅವನೂ ಈ ಕಣ್ಣಿಗೆ ಕಾಣದ ಆತ್ಮನೇಯಾಗಿರುತ್ತಾನೆಯಲ್ಲದೆ ಬೇರೆಯಾರೂ ಆಗಿರಕೂಡದು.

(16) यदाह्येवैष एतस्मिन्नदृश्येनात्म्येऽनि रुक्तेऽनिलयनेऽभयंप्रतिष्ठांविन्दते अथसो ऽभयंगतोभवति ॥ तै० उ० २—७. ॥.

(೫) ಈಗ ಈ ಪುಸ್ತಕದಲ್ಲಿ ಹೇಳುವ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಅ ವಸ್ಥೆಗಳನ್ನು ಮೇಲೆ ಹೇಳಿದ ಕೋಶಗಳಿಗೆ ಹೇಗೆ ಹಂಚಿಹಾಕುವದೆಂಬದನ್ನು ಓದು ವವರು ತಾವೇ ಕಂಡುಕೊಳ್ಳಬಹುದು.

೧ ನೇ ಸ್ವಪ್ನಾವಸ್ಥೆಯಿಂದ ಅನ್ನರಸಮಯಕೋಶವೆಂಬ ಸ್ಥೂಲ ಶರೀರ;

೨ ನೇ ಸುಷುಪ್ತಿ ಅವಸ್ಥೆಯಿಂದ--ಅದು ಮತ್ತು ಪ್ರಾಣಮಯ, ಮನೋಮಯ, ವಿಜ್ಞಾನಮಯಕೋಶಗಳೆಂಬ ಲಿಂಗ ಶರೀರ;

೩ ನೇ ತುರೀಯ (೪ನೇ)ಅವಸ್ಥೆಯಿಂದ ಅವೆರಡೂ, ಮತ್ತು ಆನಂದಮಯಕೋ ಶವೆಂಬ ಕಾರಣಶರೀರ;

ಸಹ ಆತ್ಮನಿಂದ ಪ್ರತ್ಯೇಕಿಸಲ್ಪಟ್ಟು, XI ನೇ ಪಾಠದಲ್ಲಿ ಹೇಳಿದ ಅವನ ಪಾಪ ಲೇಪ ರಹಿತತ್ವಾದಿಗುಣಗಳು ಯಜುರ್ವೇದಿಗಳು ಹೇಳುವ ಮೇಲೆ ಹೇಳಿದ ಕಣ್ಣಿಗೆ ಕಾ ಣದ (ಅದೃಶ್ಯತ್ವ ಮೊದಲಾದ ಗುಣಗಳುಳ್ಳ) ವನಲ್ಲಿಯೂ ಸಮರ್ಥನಮಾಡಲ್ಪಡು ತ್ತದೆ. ಇವನೇ (17) ಆದಿತ್ಯನಲ್ಲಿರುವ ವನು.

(17) सयश्चायंपुरुषे यश्चासावादित्ये सएकः तै० उ० (२—८.)

ಈ ರೀತಿ ಸುಖದುಖಗಳಿಂದ ವಿಮೋಚನೆ ಹೊಂದಲಿಕ್ಕೆ ಶರೀರವಾತ್ಸಲ್ಯವನ್ನು ಬಿ ಡುವದೇ ಮುಖ್ಯವಾದ ಉಪಾಯವೆಂದು XI ನೇ ಪಾಠದಲ್ಲಿ ನಿರೂಪಿಸೋಣಾಗಿದೆ.

ತೈತ್ತಿರೀಯದಲ್ಲಿ (18) ಶ್ರೋತಿಯನಾ ಗಿಯೂ ಕಾಮ (ಅಭಿಲಾಶೆಗಳಿಂದ) ಪೀಡಿ ತನಲ್ಲದೇಯೂ ಇರಬೇಕೆಂದು ಹೇಳೋಣಾಗುತ್ತದೆ.

(18) श्रोत्रियस्यचाकामहतस्य ॥ तै० उ० २—८. ॥.

